# ೨೦೦೧ ಏಪ್ರಿಲ್ ೧೫ರಂದು ನಾಲ್ಕು ಮಹತ್ವದ ಕೃತಿಗಳ ಬಿಡುಗಡೆ

## ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ



ಡೆಮಿ ಚತುರ್ಥಾಕಾರ
ಸುಮಾರು ೪೬೮ ಪುಟಗಳು

**ಸಲಹಾ ಮಂಡಲಿ**
ಎಸ್. ರಾಮರಾವ್, ಅಡ್ಯನಡ್ಕ ಕೃಷ್ಣಭಟ್
ಕೆ. ಬಿ. ಸದಾನಂದ, ಎಚ್. ಜಿ. ಸುಬ್ಬರಾವ್

**ಪ್ರಧಾನ ಸಂಪಾದಕ**
ಜಿ. ಟಿ. ನಾರಾಯಣ ರಾವ್

**ಸಂಪಾದಕರು**
ಸಿ. ಆರ್. ಕೃಷ್ಣ ರಾವ್
ಕೆ. ಎಲ್. ಗೋಪಾಲಕೃಷ್ಣ ರಾವ್

**ಸಂಪಾದಕ ಮಂಡಲಿ**
ಟಿ. ಆರ್. ಅನಂತರಾಮು, ಜಿ. ಕೆ. ರಂಗನಾಥ್
ಎಂ. ಕೆ. ರಾಜಗೋಪಾಲ್, ಎನ್. ಎಸ್. ಲೀಲಾ

*ಬೆಲೆ : ರೂ. ೫೦೦/-*
*ಪ್ರಕಟಣಪೂರ್ವ ಬೆಲೆ : ರೂ. ೩೫೦/-*

**ವಿಜ್ಞಾನ ಪದವಿವರಣ ಕೋಶ** ಅನೇಕ ರೀತಿಯಲ್ಲಿ ಅದ್ವಿತೀಯ, ಅತ್ಯುಪಯುಕ್ತ. ಇದುವರೆವಿಗೂ ಕನ್ನಡದಲ್ಲಿ ಇಂಥ ನಿಘಂಟು ಬಂದುದಿಲ್ಲ. ಸುಮಾರು ೧೨,೦೦೦ ವೈಜ್ಞಾನಿಕ ಹಾಗೂ ದಿನಬಳಕೆಯ ತಾಂತ್ರಿಕ ಪದಗಳನ್ನೊಳಗೊಂಡಿರುವ ಈ ನಿಘಂಟಿನಲ್ಲಿ ವಿಜ್ಞಾನದ ಎಲ್ಲ ಶಾಖೆಗಳ ಪದಗಳೂ ಸೇರ್ಪಡೆ ಯಾಗಿವೆ. ಪಠ್ಯ ಭಾಗದಲ್ಲಿ ಅಕಾರಾದಿಯಾಗಿ ಕನ್ನಡ ಪದಗಳನ್ನೂ, ಪಕ್ಕದಲ್ಲಿ ಸಮಾನ ಇಂಗ್ಲಿಷ್ ಪದಗಳನ್ನೂ, ಅವು ಯಾವ ವಿಜ್ಞಾನ ವಿಭಾಗಕ್ಕೆ ಸೇರಿವೆ ಎಂಬುದನ್ನೂ, ಅನಂತರ ವಿವರಣೆಯನ್ನೂ, ಅವಶ್ಯವಿದ್ದೆಡೆ ಚಿತ್ರಗಳನ್ನೂ ಕೊಡಲಾಗಿದೆ. **ನವಕರ್ನಾಟಕ ಜ್ಞಾನ - ವಿಜ್ಞಾನ ಕೋಶ**ದಂತೆಯೇ ಇದೂ ಸಂಗ್ರಹಯೋಗ್ಯ.

## ಇಗೋ ಕನ್ನಡ

ಇದೊಂದು ಸಾಮಾಜಿಕ ನಿಘಂಟು. ಓದಿದಾಗ ಮುದ ನೀಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೇ ಸೀಮಿತವಾಗಿಲ್ಲ. ಪದದ ಬೇರು, ಕಾಂಡ, ರೆಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮದ ಹಿನ್ನೆಲೆಯ ಕೃತಿ.



**ಇಗೋ ಕನ್ನಡ**
ಸಂಪುಟ ೨

*ಬೆಲೆ : ರೂ. ೨೦೦/-*
*ಪ್ರಕಟಣ ಪೂರ್ವ ಬೆಲೆ : ರೂ. ೧೫೦/-*

ಲೇಖಕ : **ಪ್ರೊ॥ ಜಿ. ವೆಂಕಟಸುಬ್ಬಯ್ಯ**
ಡೆಮಿ ಅಷ್ಟಾಕಾರ ೩೭೨ ಪುಟಗಳು

## ಬೇಡಿ ಕಳಚಿತು ದೇಶ ಒಡೆಯಿತು



*ಬೆಲೆ : ರೂ. ೬೦೦/-*
*ಪ್ರಕಟಣ ಪೂರ್ವ ಬೆಲೆ : ರೂ. ೪೫೦/-*

ಲೇಖಕ : **ಕೋ. ಚೆನ್ನಬಸಪ್ಪ**

*ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ*
*ಸುಮಾರು ಸಾವಿರ ಪುಟಗಳ ಬೃಹತ್ ಕಾದಂಬರಿ*

ಡೆಮಿ ಅಷ್ಟಾಕಾರ ೧೦೦ಕ್ಕೂ ಹೆಚ್ಚು ಚಿತ್ರಗಳು

೧೮೫೭ರಿಂದ ೧೯೪೭ರವರೆಗಿನ ಸ್ವಾತಂತ್ರ್ಯ ಸಮರದ, 'ಸಿಪಾಯಿ ದಂಗೆ'ಯಿಂದ ಸುಭಾಸ ಬೋಸರ ಐಎನ್‌ಎ ಸೈನ್ಯದ ಸಶಸ್ತ್ರ ಹೋರಾಟದವರೆಗೆ ನಡೆದ, ಲಕ್ಷಾಂತರ ಭಾರತೀಯ ಯುವಕರು, ಯುವತಿಯರು, ಬಾಲಕ - ಬಾಲಕಿಯರು ಭಾಗವಹಿಸಿ ಲಾಠಿ ಏಟು, ಗುಂಡಿನೇಟು, ನೇಣುಗಂಬ, ದ್ವೀಪಾಂತರ ವಾಸ, ಉಪವಾಸ ಅನುಭವಿಸಿದ ಎದೆ ನಡುಗುವ ರೋಮಾಂಚನಕಾರಿ ಇತಿಹಾಸವನ್ನು ಕಥೆಯಾಗಿ ಮೂಡಿಸಿದ ಕಾದಂಬರಿ !

ಛಾಪೇಕರ್ ಬಂಧುಗಳಿಂದ ಹಿಡಿದು ಭಗತ್ ಸಿಂಗ್ ಬಳಗದವರವರೆಗೆ ಹೂಡಿದ ಬಾಂಬ್ ಕಾಯಕದ ಕಥೆ; ಗಾಂಧೀಜಿಯವರ ಅಹಿಂಸಾತ್ಮಕ ಚಳವಳಿ, ವಿವೇಕಾನಂದ, ಅರವಿಂದರಂಥ ಯೋಗಿಗಳ ಪಾಂಚಜನ್ಯ ನಿನಾದ ! ಅಮೆರಿಕೆಯಿಂದ ಗದ್ದರ್ ಪಾರ್ಟಿ, ಜಪಾನಿನಿಂದ ರಾಸ್ ಬಿಹಾರಿ ಬೋಸ್, ಬ್ರಿಟನ್ ಹಾಗೂ ಫ್ರಾನ್ಸ್‌ನ ಬುದ್ಧಿಜೀವಿಗಳು ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಅಪ್ರತಿಮ ಸೇವೆಯ ಇತಿಹಾಸ. ಅಜ್ಞಾತವಾಗಿ ಕಮ್ಯುನಿಸ್ಟ್ ಪಕ್ಷ ಹಾಗೂ ಕ್ರಾಂತಿಕಾರಿ ರಷ್ಯಾ ಬ್ರಿಟಿಷ್ ಸಾಮ್ರಾಜ್ಯವನ್ನು ಅಲ್ಲಾಡಿಸಿದ ಸಾಹಸ ಗಾಥೆ !

## ನವಕರ್ನಾಟಕ ಕೈಪಿಡಿ ರಂಗಭೂಮಿ

*ಪ್ರಾಯೋಗಿಕ ಮಾರ್ಗದರ್ಶಿ*

*ಬೆಲೆ : ರೂ. ೨೫೦/-*
*ಪ್ರಕಟಣಪೂರ್ವ ಬೆಲೆ : ರೂ. ೧೭೫/-*



ಡೆಮಿ ಚತುರ್ಥಾಕಾರ
೨೦೮ ಪುಟಗಳು

ಲೇಖಕ
**ಎನ್. ಎಸ್. ವೆಂಕಟರಾಮ್**

- ೧೫೦ಕ್ಕೂ ಹೆಚ್ಚು ಆಕರ್ಷಕ ರೇಖಾಚಿತ್ರಗಳು, ಛಾಯಾಚಿತ್ರಗಳು
- ರಂಗಭೂಮಿಯ ಹುಟ್ಟು, ಬೆಳವಣಿಗೆ ಕುರಿತ ವಿವರಗಳು
- ರಂಗವಿಕಾಸ ☆ ಪಾಶ್ಚಾತ್ಯ ರಂಗಪರಂಪರೆ ☆ ರಂಗ ಶೈಲಿಗಳು ☆ ಭಾರತೀಯ ರಂಗ ಪರಂಪರೆ ☆ ಪ್ರಯೋಗಾಂಗಗಳು ☆ ನಾಟಕ ಕೃತಿ ☆ ಪೂರ್ವಸಿದ್ಧತೆ ☆ ಸಂಯೋಜನೆ ಮತ್ತು ರಂಗಚಿತ್ರಣ ☆ ರಂಗಕೃತಿ ನಿರ್ಮಾಣ - ಈ ವಿಷಯಗಳನ್ನೊಳಗೊಂಡಿದೆ
- ರಂಗಾಸಕ್ತರಿಗೆ, ನಾಟಕ ನಿರ್ದೇಶಕರಿಗೆ ಉಪಯುಕ್ತವಾದ ಕೈಪಿಡಿ.

**ಒಟ್ಟು ರೂ.೧೫೫೦ ಬೆಲೆಯ ನಾಲ್ಕು ಪುಸ್ತಕಗಳು ರೂ.೧೧೨೫ ಕ್ಕೆ ಲಭ್ಯ!**
**ಅಂಚೆ ವೆಚ್ಚ ರೂ.೨೫ ಪ್ರತ್ಯೇಕ**
**ಜೊತೆಗೆ ಅನಿರೀಕ್ಷಿತ ಕೊಡುಗೆ!**




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಅಂ. ಪೆ. ೫೧೨೯, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧. ☎ : ೨೨೦೩೫೮೦/೮೧/೮೨

ಶಾಖೆಗಳು

| | | | | |
|---|---|---|---|---|
| ಕೆಂಪೇಗೌಡ ವೃತ್ತ<br>ಬೆಂಗಳೂರು - ೯<br>☎ : ೨೮೭೨೨೩೮೫ | ಗಾಂಧಿನಗರ<br>ಬೆಂಗಳೂರು-೯<br>☎: ೨೨೫೧೩೮೨ | ಕೆ.ಎಸ್.ಆರ್. ರಸ್ತೆ<br>ಮಂಗಳೂರು-೧<br>☎ : ೪೪೧೦೦೧೬ | ರಾಮಸ್ವಾಮಿ ವೃತ್ತ<br>ಮೈಸೂರು-೨೪<br>☎: ೪೨೪೮೯೪ | ಸ್ಟೇಷನ್ ರಸ್ತೆ<br>ಗುಲ್ಬರ್ಗಾ-೨<br>☎ : ೨೪೩೦೨ |

E-mail: nkp@bgl.vsnl.net.in
Website : www.navakarnatakabooks.com

# ಹೊಸತು

## ಒಳಗೇನಿದೆ.....




ಚಿತ್ರಗಳು : ಗುಜ್ಜಾರ್, ಮಕಾಳಿ, ರೋಹಿಣಿ ಶೆಟ್ಟಿ, ವಸಂತ ಹೊಸಬೆಟ್ಟು, ರವಿಕುಮಾರ್ ಅಜ್ಜೀಪುರ, ಶ್ರೀ ಹರಿ, ಎಂ. ಪಿ. ಬಿದ್ರಿ.

ಮುಖಚಿತ್ರ : ಬಾಲಕಲಾವಿದ ಕುಶಾಲ್ ಹೊಸತುಗಾಗಿ ರಚಿಸಿದ್ದು

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


ಭಾರತೀಯ ಜನತಾ ಪಕ್ಷವು ನಮ್ಮ ದೇಶದ ಆಡಳಿತ ಸೂತ್ರ ವಹಿಸಿಕೊಳ್ಳಲು ಯೋಗ್ಯವೂ ಅಲ್ಲ, ಸಮರ್ಥವೂ ಅಲ್ಲ. ಮಾಧ್ಯಮಗಳ ಬೆಂಬಲದಿಂದಾಗಿ ಮೂರು ವರ್ಷಗಳಿಂದ ಈ ಸತ್ಯವು ಸಾರ್ವಜನಿಕರ ಒಂದು ವಿಭಾಗಕ್ಕೆ ಗೋಚರವಾಗುತ್ತಿರಲಿಲ್ಲ. ಭಾಜಪದ ನಿಯಮನಿಷ್ಠೆ, ಕ್ರಿಯಾಶಕ್ತಿ ಮತ್ತು ನೀತಿನಿರೂಪಣೆಗಳನ್ನು ಟೀಕಿಸಿದವರೆಲ್ಲಾ ಸೋನಿಯಾ ಗಾಂಧಿಯ ಪರ್ಯಾಯವನ್ನು ಪುರಸ್ಕರಿಸುವರೆಂಬ ಗುಲ್ಲನ್ನು ಮಾಧ್ಯಮ ಹಾಗೂ ಭಾಜಪ ಎಬ್ಬಿಸುತ್ತಿದ್ದವು. ದೇಶಕ್ಕೆ ಭಾರಿ ದುರಂತಗಳ ಸರಮಾಲೆಯನ್ನು ಹಾಕಿ ಭಾಜಪ ನೇತೃತ್ವದ ಸರ್ಕಾರ ಈಗ ಚೌಕಚೌಕಗಳಲ್ಲಿ ನಗ್ನವಾಗಿ ನಿಂತಿದೆ. ಈ ಸರ್ಕಾರದ ನಿಜಸ್ವರೂಪ ತಿಳಿಯಲು ಜನರಿಗೆ ಯಾವುದೋ ಮರ್ಮಭೇದಕ ತಂತ್ರದ ಅಗತ್ಯವಿತ್ತೆ? ಡಾಟ್ ಕಾಮ್ ಶೌರ್ಯ ಇಲ್ಲದಿದ್ದರೆ ಭಾಜಪದ ಬಣ್ಣ ತಿಳಿಯದಿರುವಷ್ಟು ಕುರುಡುತನ ನಮ್ಮನ್ನಾವರಿಸಿದೆಯೆ ? ಈಗ ತಿಳಿದೂ ನಿಷ್ಕ್ರಿಯರಾಗಿರುತ್ತೇವೆಯೆ ?

ಡಾಟ್ ಕಾಮ್ ನೀಡಿರುವ ಕೊಡುಗೆಯನ್ನು ಅಲ್ಲಗಳೆಯುವುದು ನಮ್ಮ ಉದ್ದೇಶವಲ್ಲ. ಅದರಿಂದಲಾದರೂ ಕೆಲವರು ಕಣ್ಣು ಬಿಡುವಂತಾದ್ದು ಒಳ್ಳೆಯದು. ಆದರೆ ಪ್ರಶ್ನೆ ಇದು : ಭಾರಿ ಉದ್ಯಮಗಳ ವಲಯದಲ್ಲಿ ''ಪಕ್ಷಕ್ಕಾಗಿ'' ಟನ್‌ಗಟ್ಟಲೆ ಹಣ ಸಂಗ್ರಹಿಸುವ ಪ್ರಮೋದ್ ಮಹಾಜನ್ ಪಕ್ಷ, ವಿದೇಶಿ ಮೂಲಗಳಿಂದ ಅನೇಕ ರೀತಿಯ ಪುಷ್ಟಿಯನ್ನು ಪಡೆಯುವ ಅರುಣ್ ಶೌರಿ ಪಕ್ಷ, ವಿಶ್ವ ಬ್ಯಾಂಕ್ ಹಾಗೂ ಷೇರುಪೇಟೆಯ ದಲ್ಲಾಳಿಗಳ, ದಲ್ಲಾಳಿಯಾಗಿ ಕೆಲಸ ಮಾಡುವ ಅನರ್ಥ ಮಂತ್ರಿ ಯಶವಂತ ಸಿನ್ಹಾರ ಪಕ್ಷ ಮತ್ತು ದೇಶವನ್ನು ಮೃಗೀಯ ಸಂಸ್ಕೃತಿಯತ್ತ ಕೊಂಡೊಯ್ಯುವ ಅಡ್ವಾನಿ-ಮುರಳಿ ಮನೋಹರ ಜೋಶಿ ಪಕ್ಷ ಈಗ ಮಾಡಿರುವುದನ್ನಲ್ಲದೆ ಬೇರೇನನ್ನು ಮಾಡುತ್ತದೆಂದು ನಿರೀಕ್ಷಿಸಬೇಕು ? ತನ್ನ ಹೆಸರಿನಲ್ಲೇ ಬಂಗಾರು ಎಂಬ ಪದ ಸೇರಿಸಿಕೊಂಡು ಧನದ ವ್ಯಾಮೋಹವನ್ನು ಪ್ರಕಟಿಸುವ ಭಾಜಪದ ಮಾಜಿ ಅಧ್ಯಕ್ಷ ಲಕ್ಷ್ಮಣ್ ಡಾಟ್ ಕಾಮ್ ಕ್ಯಾಮೆರಾ ಕಂಡಂತೆ ಒಂದು ಲಕ್ಷ ಪಡೆದಿದ್ದರೆ ಅಂತಹ ಯಾವ ಕ್ಯಾಮೆರಾ ಕಣ್ಣು ಇಲ್ಲದಿದ್ದಾಗ ಎಷ್ಟು ಚೀಲಗಳಷ್ಟು ಹಣವನ್ನು ಹಿಗ್ಗಾಮುಗ್ಗಾ ತುಂಬಿಕೊಂಡಿರಬೇಕೆಂಬುದನ್ನು ಊಹಿಸುವುದು ಕಷ್ಟವಲ್ಲ. ಈ ಮಾತು ಜಯಾ ಜೈಟ್ಲಿ ಮುಂತಾದವರಿಗೂ ಅನ್ವಯಿಸುತ್ತದೆ.

ಶಾಸಕರ ಸ್ಥಾನದಲ್ಲಿರುವವರು ಹಾಗೂ ಅವರ ಸುತ್ತಮುತ್ತ ತುಂಬಿರುವ ಏಜೆಂಟುಗಳು ಒಂದರ್ಥದಲ್ಲಿ 'ರಾಜಕೀಯ' ವ್ಯಕ್ತಿಗಳು. ಪ್ರಭುತ್ವದ ಬೇರೆ ಅಂಗವಾದ ಕಾರ್ಯಾಂಗದ ಪ್ರಭೃತಿಗಳನ್ನು ಡಾಟ್ ಕಾಮ್ ಕ್ಯಾಮೆರಾ ಅನುಸರಿಸಿದರೆ ಅಲ್ಲಿಯ ಹೊಲಸು ಇಷ್ಟೇ ಪ್ರಕರ್ಷವಾಗಿ ನಾರುವುದನ್ನು ನೋಡಬಹುದಿತ್ತು. ಇನ್ನೊಂದು ಅಂಗದ ಬಗ್ಗೆ ಮಾತನಾಡಬಾರದೆಂಬ ಶ್ರೀಮದ್ಗಾಂಭೀರ್ಯ ನಮ್ಮ ತತ್ತ್ವವಾದ್ದರಿಂದ ಅಲ್ಲಿಯ ಹುಳುಕುಗಳು ಚರ್ಚೆಗೆ ಬರುತ್ತಿಲ್ಲ. - ಅಂದರೆ, ನಮ್ಮ ವ್ಯವಸ್ಥೆ ಏನಾಗಿದೆ, ಅದರ ಬುನಾದಿ ಎಂತಹುದು ಮತ್ತು ಅದನ್ನು ನಿಯಂತ್ರಿಸುತ್ತಿರುವವರು ಯಾರು ಎಂಬ ಮೂಲಭೂತ ಪ್ರಶ್ನೆಗಳನ್ನು ಸಾರ್ವಜನಿಕರು ಹಾಕಿಕೊಳ್ಳಬೇಕಾಗಿದೆ. ಲಂಚ ಪಡೆಯುವುದು ಮತ್ತು ಕೊಡುವುದು ಭಾರತೀಯ ಸಂಸ್ಕೃತಿಯ ಸಮಕಾಲೀನ ಲಕ್ಷಣ ಆಗಿಹೋಗಿದೆಯಾದ್ದರಿಂದ ಸಂಸ್ಕೃತಿಯ ಬಗ್ಗೆ ತಮ್ಮದೇ ಕಡೆಯ ಮಾತೆಂಬ ವಿಲಕ್ಷಣ ವಾದವನ್ನು ಹೂಡುವ ಭಾಜಪ ಲಂಚದಲ್ಲಿ ಮುಳುಗಿ ಕೊಳೆಯದಿರುವುದು ಹೇಗೆ ತಾನೆ ಸಾಧ್ಯ ! ಆತಂಕದಿಂದ ಗಮನಿಸಬೇಕಾದ ಅಂಶ ಇದು : ಯಾವುದೋ ಕಂಪೆನಿಯ ಹೆಸರು ಹೇಳಿಕೊಂಡು ಬಂದರೆ ಸಾಕು, ಅವರ ಮುಂದೆ ಎಂಜಲಕಾಸಿಗೆ ಕೈಯೊಡ್ಡುವ ರಾಜಕೀಯ ನಾಯಕರ ಪಿಡುಗು ಈಗ ಬಹಿರಂಗ ಹಾಗೂ ಸಾರ್ವತ್ರಿಕ. ವಿದೇಶಿ ಹಣ ಹೂಡಲು ಬರುವ ಉದ್ಯಮಿಗಳಿಂದ ಯಶವಂತ ಸಿನ್ಹಾರ ದಂಡು ಎಷ್ಟು ದ್ರವ್ಯ ಸಂಗ್ರಹಿಸಿರಬಹುದೆಂಬುದು ಊಹೆಗೆ ನಿಲುಕುವುದಿಲ್ಲ. ತಮ್ಮದು ಬೇರೆಯವರದಕ್ಕಿಂತ ಭಿನ್ನವಾದ ಪಕ್ಷವೆಂದು ಹೇಳುವುದು ಭಾಜಪದ ಢೋಂಗೀ ಮಂತ್ರ. ಅದೆಷ್ಟು ಭಿನ್ನ ಅಥವಾ ಅಭಿನ್ನವೆಂಬುದು ಈಗ ಬಟಾಬಯಲಾಗಿದೆ. ಇಪ್ಪತ್ತೈದು ವರ್ಷ ಮುಖ್ಯಮಂತ್ರಿಯಾಗಿದ್ದ ಜ್ಯೋತಿ ಬಸು ಅಥವಾ ಕೆಲವೇ ವರ್ಷಗಳಲ್ಲಿ ತನ್ನ ವರ್ಚಸ್ಸನ್ನು ತೆರೆದಿಟ್ಟ ಅಚ್ಯುತ ಮೆನನ್ ಭಿನ್ನರೋ, ವಾಜಪೇಯಿ ಗಣದ ನಾಯಕರು ಭಿನ್ನರೋ ಎಂಬುದನ್ನು ದೇಶದ ಜನವೇ ತೀರ್ಮಾನಿಸಲಿ.

ಬಂಡವಾಳದ ಬೆನ್ನುಹತ್ತಿ ಹೋಗುವ ಪಕ್ಷಗಳು ದೇಶವನ್ನು ಎಷ್ಟು ವಿರೂಪಗೊಳಿಸಿವೆ, ನೋಡಿ. ಯಾವ ಮುಸುಕೂ ಇಲ್ಲದೆ ನೇರವಾಗಿ ಇಂಥದಕ್ಕೆ ಇಷ್ಟು ಕೊಡು ಎಂದು ಹೇಳುವ ರಾಜಕೀಯ ನಾಯಕರು ನಮ್ಮ ದೇಶದ ಭವಿಷ್ಯ ನಿರ್ಧರಿಸುವಂತಾಗಿರುವುದಕ್ಕಿಂತ ಕರಾಳವಾದ್ದು ಇನ್ನೇನಿದೆ ? ಬಂಗಾರು ಲಕ್ಷ್ಮಣ್, ಜಯಾ ಜೈಟ್ಲಿ, ಜಾರ್ಜ್ ಫರ್ನಾಂಡೀಸ್ ಮುಂತಾದವರ ಹೊಸ ದುಷ್ಟ ಸಂಪ್ರದಾಯ ಇದು. ಅದೂ ದೇಶದ ರಕ್ಷಣಾ ವಿಭಾಗಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಎಷ್ಟು ತಾತ್ಸಾರ ! ದೇಶದ ರಕ್ಷಣೆಗೆ ಬೇಕಾದ್ದನ್ನು ಕೊಳ್ಳುವ

(೧೫ನೇ ಪುಟಕ್ಕೆ)



ತಿಂಗಳ ಪತ್ರಿಕೆ

ಹೊಸತು

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೯ ಏಪ್ರಿಲ್ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**


## ಕುರಿ ಬಲಿಯ ಬೆನ್ನೇರಿದ ವಿಚಾರವಾದ

ಇತ್ತೀಚೆಗೆ ಕರ್ನಾಟಕದ ಸಚಿವರೊಬ್ಬರು ಮಾರಿಗುಡಿಯೊಂದರಲ್ಲಿ ನಡೆದ ಕುರಿ ಬಲಿ ಆಚರಣೆಯಲ್ಲಿ ಭಾಗವಹಿಸಿದ ಸಂಬಂಧವಾಗಿ ಮೈಸೂರಿನ ಪತ್ರಿಕೆಯೊಂದು ಮಾಡಿದ ವರದಿಯನ್ನನುಸರಿಸಿ ಪ್ರೊ|| ಕೆ. ರಾಮದಾಸ್ ಮಂತ್ರಿಯನ್ನು ಪ್ರಶ್ನಿಸಿದರು. ತಾವು ಸ್ವತಃ ಈ ಕುರಿ ಬಲಿ ಆಚರಣೆಯಲ್ಲಿ ಭಾಗವಹಿಸಲಿಲ್ಲವೆಂದೂ ಬಳಿಕ ಮಾಡಿದ ಬಾಡಿನೂಟ ಸವಿದಿರುವುದಾಗಿಯೂ ಸಚಿವರು ವಿವರಣೆ ನೀಡಿದರು. ಅವರ ಉತ್ತರದಿಂದ ಸಮಾಧಾನಗೊಳ್ಳದ ರಾಮದಾಸ್ ಮಂತ್ರಿಯನ್ನು ನಾಲಾಯಕ್ ಎಂದು ಕರೆದರೆಂದು ವರದಿಯಾಗಿದೆ. ಇದರಿಂದ ದೊಡ್ಡ ಕೋಲಾಹಲ ಉಂಟಾಯಿತು. ಕಾನೂನು ಒಂದು ಕತ್ತೆಯಾಗಿದ್ದರೂ ಅದನ್ನು ರಕ್ಷಿಸುವುದು ಮಂತ್ರಿಯಾದವರ ಕರ್ತವ್ಯ. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕಾನೂನು ಭಂಗ ಆಚರಣೆಗೆ ಅವರು ಕಾರಣವಾದರೆ ನೈತಿಕವಾದ ಹೊಣೆಯಿಂದ ಅವರು ತಪ್ಪಿಸಿಕೊಳ್ಳುವಂತಿಲ್ಲ. ಆದರೆ ಒಂದು ಕಾನೂನಿನ ತರ್ಕಬದ್ಧತೆಯನ್ನು ಪರಿಶೀಲಿಸಲು ನಾಗರಿಕರಿಗೆ ಸ್ವಾತಂತ್ರ್ಯವಿದೆ ಎಂಬುದನ್ನೂ ವಿಚಾರವಾದಿಗಳು ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ ಎಷ್ಟೋ ಕಾನೂನುಗಳು ಅವಾಸ್ತವವಾಗಿವೆ, ಅಪ್ರಸ್ತುತವೆನ್ನಿಸಿಕೊಂಡುಬಿಟ್ಟಿವೆ. ಇಂತಹ ಅಪ್ರಸ್ತುತ ಕಾನೂನುಗಳನ್ನು ಪ್ರಶ್ನಿಸುವ, ಅಗತ್ಯಬಿದ್ದರೆ ಅವನ್ನು ಭಂಗಗೊಳಿಸುವ ಚಳುವಳಿಗಳು ಎಲ್ಲ ಕಾಲ ದೇಶಗಳಲ್ಲೂ ನಡೆದಿವೆ. ಪವಿತ್ರ ಗ್ರಂಥಗಳಂತೆ ಕಾನೂನುಗಳೂ ದೇಶ ಕಾಲ ಬದ್ಧವಾದ ಸಂಗತಿಗಳೇ ಹೊರತು ಶಾಶ್ವತ ಸತ್ಯಗಳಲ್ಲ.

ಪ್ರಾಣಿ ಬಲಿ ಕೊಡುವ ಧಾರ್ಮಿಕ ಆಚರಣೆಯನ್ನು ನಮ್ಮ ದೇಶದ ಕಾನೂನು ನಿಷೇಧಿಸಿದ್ದರೂ ತೆರೆಮರೆಯಲ್ಲಿ ಅಥವಾ ಬಹಿರಂಗವಾಗಿ ದಿನನಿತ್ಯ ಸಾವಿರಾರು ಪ್ರಾಣಿಗಳು ಧಾರ್ಮಿಕ ಆಚರಣೆಯ ಅಂಗವಾಗಿ ಬಲಿಯಾಗುತ್ತಿವೆ. ಬಳಿಕ ಪ್ರಸಾದ ರೂಪದಲ್ಲಿ ಭಕ್ತಾದಿಗಳು ಬಾಡಿನೂಟ ಮಾಡುತ್ತಾರೆ. ದಿನನಿತ್ಯ ಆಹಾರದ ಸಲುವಾಗಿ ಲಕ್ಷಾಂತರ ಕುರಿ ಕೋಳಿಗಳನ್ನೂ ಕತ್ತರಿಸಲಾಗುತ್ತಿದೆ. ವಿರೋಧಾಭಾಸವೇನೆಂದರೆ, ಆಹಾರಕ್ಕಾಗಿ ನಡೆಯುವ ಪ್ರಾಣಿ ಬಲಿಯನ್ನು ಒಪ್ಪಿರುವ ಸಮಾಜವೇ ಧಾರ್ಮಿಕ ಆಚರಣೆಯ ಅಂಗವಾಗಿ ನಡೆಯುವ ಬಲಿಯನ್ನು ಕಾನೂನುಬಾಹಿರಗೊಳಿಸಿದೆ. ನಮ್ಮ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದಲೂ ಪ್ರಾಣಿಬಲಿಯ ನಿಷೇಧವಿರಲಿಲ್ಲ. ಈ ಕಾನೂನು ಬ್ರಿಟಿಷರ ಕಾಲದಲ್ಲಿ ಜಾರಿಗೆ ಬಂದದ್ದು. ವೈದಿಕ ಪರಂಪರೆಯಲ್ಲಿ ಯಜ್ಞಯಾಗಾದಿಗಳ ಆಚರಣೆಯಲ್ಲಿ ಪ್ರಾಣಿಬಲಿ ಮಾತ್ರವಲ್ಲದೆ ನರಬಲಿಯನ್ನೂ ಕೊಡುತ್ತಿದ್ದರೆನ್ನಲು ಸಮೃದ್ಧ ಉದಾಹರಣೆಗಳನ್ನು ವೇದ ಪುರಾಣಗಳಿಂದ ಕೊಡಬಹುದಾಗಿದೆ. ಪ್ರಾಚೀನ ಕ್ರೈಸ್ತ, ಇಸ್ಲಾಂ ಮತ್ತಿತರ ಎಷ್ಟೋ ಧರ್ಮಗಳ ಆಚರಣೆಯಲ್ಲಿ ಪ್ರಾಣಿ ಬಲಿಯ ವಿಚಾರವಿದೆ. ಆದರೆ ಜೈನರು ಮತ್ತು ವಚನಕಾರರು ಪ್ರಾಣಿಹಿಂಸೆಯನ್ನೇ ವಿರೋಧಿಸಿದರು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಅವರ ಆದರ್ಶ ಅಖಂಡವಾಗಿತ್ತು. ಬಾಯಿ ಚಪಲಕ್ಕೆ ಮಾಂಸ ತಿನ್ನುವುದನ್ನು ಒಪ್ಪಿಕೊಂಡು ಧಾರ್ಮಿಕ ಆಚರಣೆಯಾಗಿ ಪ್ರಾಣಿಬಲಿಯನ್ನು ನಿಷೇಧಿಸಬೇಕೆಂದು ಬಸವಣ್ಣನವರು ಹೇಳಲಿಲ್ಲ. ''ಕೊಲ್ಲುವುದು, ಹೊಲಸ ತಿಂಬುವುದರ'' ಬಗೆಗೆ ಅವರು ಹೇಳಿರುವ ಮಾತುಗಳ ಜೊತೆಯಲ್ಲಿಯೇ ''ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂಬ'' ವಚನವನ್ನೂ ಅರ್ಥೈಸಬೇಕೇ ಹೊರತು ಪ್ರತ್ಯೇಕವಾಗಿಯಲ್ಲ. ಜೈನ ಧರ್ಮದ ಜನಪ್ರಿಯತೆ ಹಿಮ್ಮೆಟ್ಟಿಸಲು ವೈದಿಕ ಧರ್ಮವೂ ಮುಂದೆ ಅಹಿಂಸೆಯನ್ನು ಅಂಗೀಕರಿಸಿ ಪ್ರಾಣಿ ಬಲಿಯ ಆಚರಣೆಯನ್ನು ನಿಲ್ಲಿಸಿರಬಹುದು. ಆದರೂ ಬಹುಸಂಖ್ಯಾತ ವರ್ಗದವರು ಧಾರ್ಮಿಕ ಆಚರಣೆಯ ಅಂಗವಾಗಿ ಪ್ರಾಣಿಬಲಿಯನ್ನು ಮುಂದುವರೆಸಿದರು. ಬ್ರಿಟಿಷರ ಆಡಳಿತದಲ್ಲಿ ಈ ಪ್ರಾಣಿಬಲಿ ನಿಷೇಧ ಕಾನೂನು ಜಾರಿಗೆ ಬರುವಲ್ಲಿ ಯಾರ ಕೈವಾಡವಿದ್ದಿರಬಹುದೆಂಬುದನ್ನು ಊಹಿಸಲು ಕಷ್ಟವಾಗುವುದಿಲ್ಲ. ಸ್ವಂತ ನಿರ್ಧಾರದಿಂದ ಇಂತಹ ಆಚರಣೆಗಳನ್ನು ಜನ ಕೈ ಬಿಡಬೇಕೇ ಹೊರತು ಕಾನೂನಿನ ಒತ್ತಡದಿಂದಲ್ಲ. ಏಕೆಂದರೆ ಇಂತಹ ಕಾನೂನಿನಲ್ಲಿ ಬಹುಜನ ಸಮುದಾಯದ ಆಚರಣೆಗಳ ಬಗೆಗೆ ಇರುವ ತಾತ್ಸಾರವೇ ಮುಖ್ಯವಾಗಿರುವುದರಿಂದ ಅದು ಪರಿಣಾಮಕಾರಿಯಾಗುವುದಿಲ್ಲ.

ಪ್ರಾಣಿ ಹಿಂಸೆಯನ್ನು ಪ್ರತಿಬಂಧಿಸುವುದೇ ಈ ಕಾನೂನಿನ ಗುರಿಯೆಂದು ವಾದಿಸುವವರಿಗೆ ಮುಜುಗರವಾಗಬಹುದಾದ ಸತ್ಯಸಂಗತಿಗಳಿವೆ. ಮುಸ್ಲಿಮ್ ನಂಬಿಕೆಯ ಪ್ರಕಾರ 'ಹಲಾಲ್' ಮಾಡದ ಮಾಂಸ ಭಕ್ಷಣೆ ಯೋಗ್ಯವಾದುದಲ್ಲ. ಹಲಾಲ್ ಆಚರಣೆಯಲ್ಲಿರುವ ಹಿಂಸಾ ವಿವರಗಳು ಎಷ್ಟು ಘೋರವಾಗಿವೆ ಎಂದರೆ ಮಾರಿಗುಡಿಯ ಕುರಿ ಬಲಿ ಅದರ ಮುಂದೆ ಸೌಮ್ಯವಾಗಿ ಕಂಡುಬರುತ್ತದೆ. ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುವಾಗ ಹಿಂಸೆಯಾಗದಂತೆ ಆಧುನಿಕ ರೀತಿಯಲ್ಲಿ ಯಂತ್ರಗಳ ಮೂಲಕ ಬಹುಬೇಗ ಕೊಲ್ಲುವ ಮತ್ತು ಶುಚಿಯಾದ ಕ್ರಮಗಳಿಂದ ಮಾಂಸವನ್ನು ರಕ್ಷಿಸಿ ಸರಬರಾಜು ಮಾಡುವ ಸಲುವಾಗಿ ವಿದೇಶದಿಂದ ಯಂತ್ರೋಪಕರಣಗಳನ್ನು ತರಿಸಿಕೊಳ್ಳುವುದನ್ನು ಕೆಲವರು ತೀವ್ರವಾಗಿ ವಿರೋಧಿಸಿ ತಡೆಹಾಕಿದರು. ಇಸ್ಲಾಂ ಧರ್ಮದವರು ಧಾರ್ಮಿಕ ಕಾರಣಕ್ಕಾಗಿ ಮತ್ತು ಪ್ರಾಣಿ ದಯಾ ಸಂಘದವರು ತಮ್ಮ ಅಹಿಂಸಾ ನಂಬಿಕೆಗಾಗಿ ಇದನ್ನು ವಿರೋಧಿಸಿದರು. ಆದರೆ ಇವರಿಬ್ಬರಿಗೂ ಮಾಂಸಾಹಾರಿಗಳಿಗಾಗಿ ಈಗ ನಡೆಯುತ್ತಿರುವ ಹಿಂಸಾ ರೀತಿಯ ಪ್ರಾಣಿವಧೆ ಮುಖ್ಯವಾದ ಸಂಗತಿಯಾಗಲಿಲ್ಲ. ಕೆಂಡ ಹಾಯುವುದರಿಂದ ಸಿಡಿಯಾಡುವ ಆಚರಣೆಯವರೆಗೆ ಬೇರೆ ಬೇರೆ ಹಿಂಸಾತ್ಮಕ ಧಾರ್ಮಿಕ ಆಚರಣೆಗಳು ಮೇಲು ವರ್ಗದ ದೇವತೆಗಳಿಗೂ ನಡೆಯುತ್ತವೆ. ಆದರೆ ನಮ್ಮ ಕಾನೂನು ಇಲ್ಲಿಯೂ ಮೌನ ವಹಿಸುತ್ತದೆ. ಜೈನ ಧರ್ಮ ಮತ್ತು ಶರಣರ ವಿಚಾರಗಳಾಗಲೀ ಇತ್ತೀಚಿನ ಪ್ರಾಣಿದಯಾ ಸಂಘದವರ ಚಿಂತನೆಯಾಗಲೀ ವ್ಯಾವಹಾರಿಕ ಆಚರಣೆಯ ದೃಷ್ಟಿಯಿಂದ ಅವಾಸ್ತವ ಎನ್ನಿಸಿದರೂ ತರ್ಕಬದ್ಧವಾಗಿವೆ. ಆದರೆ ಆಹಾರಕ್ಕಾಗಿ ಪ್ರಾಣಿವಧೆ ಮಾಡುವುದರ ವಿಚಾರದಲ್ಲಿ ಮೌನವಹಿಸಿ ಧಾರ್ಮಿಕ ಕಾರಣಕ್ಕಾಗಿ ಪ್ರಾಣಿಬಲಿ ವಿರೋಧಿಸುವುದು ಎಡಬಿಡಂಗಿ ವಿಚಾರವಾಗುತ್ತದೆ.

ಪ್ರಾಚೀನ ಕಾಲದಲ್ಲಿ ಪ್ರಾಣಿ ಬಲಿಯಂತೆ ನರಬಲಿಯೂ ವಾಡಿಕೆಯಲ್ಲಿತ್ತು. ನರಬಲಿಗೆ ಪರ್ಯಾಯವಾಗಿ ಪ್ರಾಣಿಬಲಿ ಆರಂಭವಾಯಿತೆಂಬ ನಂಬಿಕೆಯೂ ಇದೆ. ಆಧುನಿಕ ಕಾಲದಲ್ಲಿ ಧಾರ್ಮಿಕ ಕಾರಣಕ್ಕಾಗಿ ನರಬಲಿ ಸಾಮಾನ್ಯವಾಗಿ ಚಾಲ್ತಿಯಲ್ಲಿಲ್ಲ. ರಹಸ್ಯವಾಗಿ ಒಮ್ಮೊಮ್ಮೆ ನಡೆದಿರಬಹುದಾದ ನರಬಲಿಯ ಆಚರಣೆಗಳನ್ನು ಕಾನೂನು ನಿರ್ದಾಕ್ಷಿಣ್ಯವಾಗಿ ಹತ್ತಿಕ್ಕಿದೆ. ಆದರೆ ನರಬಲಿ ಧಾರ್ಮಿಕ ಕಾರಣಕ್ಕಾಗಿ ಮಾತ್ರ ನಡೆಯುತ್ತದೆ, ಎಂಬುದು ಒಂದು ದೊಡ್ಡ ಮೂಢನಂಬಿಕೆ. ದೇಶಪ್ರೇಮದ ಹೆಸರಿನಲ್ಲಿ ಯುದ್ಧಗಳಾಗಿ ಬಲಿಯಾಗಿರುವ ಜನಗಳ ಲೆಕ್ಕವನ್ನು ಚಾರಿತ್ರಿಕವಾಗಿ ಎಣಿಸಿದರೆ, ಧಾರ್ಮಿಕ ಕಾರಣಕ್ಕಾಗಿ ಸತ್ತಿರುವ ಪ್ರಾಣಿಗಳ

ಸಂಖ್ಯೆಯನ್ನು ಮೀರಿಸಬಹುದು. ಮತಾಂಧ, ಭಾಷಾಂಧ, ವ್ಯಕ್ತಿಗಳು ಪ್ರಚೋದಿಸುವ ದಂಗೆಗಳಲ್ಲಿ ಸಾಯುವ ಅಮಾಯಕರೂ, ಇಂತಹ ಮೂರ್ಖ ಸಿದ್ಧಾಂತಗಳನ್ನು ನಂಬಿ ಪ್ರತ್ಯಕ್ಷ ಹೋರಾಟದಲ್ಲಿ ಭಾಗವಹಿಸಿ ವೀರಮರಣ ಪಡೆಯುವವರೂ ಇದೇ ಚೌಕಟ್ಟಿನಲ್ಲಿ ಬರುತ್ತಾರೆ. ಆದರೆ ಇವರೆಲ್ಲಾ ಹುತಾತ್ಮರೆನ್ನಿಸಿಕೊಳ್ಳುತ್ತಾರೆ. ಆಟಂಬಾಂಬಿನಿಂದ ಮೊದಲಾಗಿ ಸಿಡಿಮದ್ದಿನವರೆಗೆ ನೂರಾರು ಬಗೆಯ ಶಸ್ತ್ರಾಸ್ತ್ರಗಳನ್ನು ತಯಾರಿಸಿ, ದೇಶಪ್ರೇಮವೆಂಬ ಅಮಲಿಗೆ ಎಣ್ಣೆ ಹಾಕುವ ದೇಶಭಕ್ತರು ಎಲ್ಲ ದೇಶಗಳಲ್ಲೂ ಮಹಾನ್ ನಾಯಕರೆಂದು ಮನ್ನಣೆ ಪಡೆದಿದ್ದಾರೆ; ಆಡಳಿತ ಸೂತ್ರವಿರುವುದೇ ಅವರ ಕೈಯಲ್ಲಿ. ಒಂದೊಂದು ದೇಶವೂ ಪೋಷಿಸುತ್ತಿರುವ ಬೃಹತ್ ಸೈನ್ಯದಲ್ಲಿರುವ ಕೋಟ್ಯಾಂತರ ಸೈನಿಕರು ಮಾತೃಭೂಮಿಗಾಗಿ ಬಲಿಯಾಗಲಿರುವ ಮುಗ್ಧ ಕುರಿ ಮಂದೆಯಲ್ಲದೆ ಮತ್ತೇನೂ ಅಲ್ಲ. ಹಿಂದಿನ ಕಾಲದಲ್ಲಿ ಒಬ್ಬ ರಾಜನ ರಕ್ಷಣೆಗಾಗಿ 'ಗರುಡ ಪಡೆ' ಇರುತ್ತಿತ್ತು; ಈಗ ನಮ್ಮ ರಾಜಕೀಯ ನಾಯಕರಿಗಿರುವ ಅಂಗರಕ್ಷಕ ಪಡೆಯಂತಿದ್ದ ಈ ಗರುಡ ಪಡೆಯವರು ರಾಜ ಸತ್ತಾಗ ಸಾಮೂಹಿಕವಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತಿತ್ತು. ರಾಜನ ಅಂಗರಕ್ಷಕರು ಯಾವುದೇ ಕಾರಣಕ್ಕೆ ಸ್ವಲ್ಪ ಎಚ್ಚರ ತಪ್ಪಿದರೂ ಇಂತಹ ಉಗ್ರ ಶಿಕ್ಷೆ ವಿಧಿಸಲಾಗುತ್ತಿತ್ತು. ಈಗಲೂ ಜಗತ್ತಿನಾದ್ಯಂತ ಇರುವ ಉಗ್ರಗಾಮಿಗಳಲ್ಲಿ ಆತ್ಮಹತ್ಯಾಪಡೆಗಳಿದ್ದು, ತಮ್ಮ ನಂಬಿಕೆಗಾಗಿ ಪ್ರಾಣವನ್ನೇ ಒತ್ತೆಯಿಟ್ಟು ಹಿಂಸಾಚಾರಕ್ಕಿಳಿಯುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಇದಕ್ಕೆ ಕಾರಣವಾಗುವ ಹುಸಿ ನಂಬಿಕೆಗಳನ್ನು, ಆದರ್ಶಗಳನ್ನು ಮುಗ್ಧ ಯುವಕರ ಮನಸ್ಸಿನಲ್ಲಿ ಬಿತ್ತಿ ಬೆಳೆಸುವ ಮತಾಂಧ, ಭಾಷಾಂಧ ವ್ಯಕ್ತಿಗಳು ಮಹಾನ್ ರಾಷ್ಟ್ರಪ್ರೇಮಿಗಳೆಂದು ಹೆಸರಾಗುತ್ತಾರೆ. ಇವರು ತೆಗೆದುಕೊಳ್ಳುತ್ತಿರುವ ಜೀವ ಬಲಿಯ ಸಂಖ್ಯೆಯನ್ನು ಯಾರು ಲೆಕ್ಕದಲ್ಲಿರಿಸಿಕೊಂಡಿದ್ದಾರೆ ? ಸತಿ ಸಹಗಮನ, ವರದಕ್ಷಿಣೆ ಪ್ರಕರಣಗಳಲ್ಲಿ ಆಗುವ ಬಲಿಗಳಿಗೆ ಲೆಕ್ಕವಿಟ್ಟಿರುವುದುಂಟೇ ?

ಜೀವಹಿಂಸೆಯಲ್ಲದೆ ಘೋರವಾದ ಹಿಂಸೆಯ ನಾನಾ ಬಗೆಗಳಿವೆ. ಮೊನ್ನೆ ತಾನೆ ಆಫ್‌ಘಾನಿಸ್ತಾನದಲ್ಲಿ ತಾಲಿಬಾನ್ ಪ್ರಭುತ್ವ ಬೌದ್ಧ ವಿಗ್ರಹ ಹಾಗೂ ಸ್ತೂಪಗಳ ಮೇಲೆ ನಡೆಸಿದ ಅಧಾರ್ಮಿಕವಾದ ಹಲ್ಲೆ ನರಬಲಿಯಷ್ಟೇ ಕ್ರೂರವಾಗಿಲ್ಲವೇ ? ತಾಲಿಬಾನ್ ಪ್ರಭುಗಳಿಗೆ ಸ್ಫೂರ್ತಿದಾಯಕವೆನ್ನಬಹುದಾದ ಬಾಬ್ರಿ ಮಸೀದಿ ನಾಶ ಮಾಡಿದ ಪ್ರಭೃತಿಗಳೇ ಇಂದು ನಮ್ಮ ದೇಶದ ಮಹಾನ್ ನಾಯಕರಾಗಿಲ್ಲವೇ ? ಕ್ರಿಕೆಟ್ ಪಿಚ್ ಅಗೆಯುವ, ಕಲಾವಿದರಿಗೆ ಅಪಮಾನವೆಸಗುವ, ಪ್ರೇಮಿಗಳ ಮೇಲೆ ಹಲ್ಲೆ ನಡೆಸುವ ಅಮಂಗಳಕಾರಿ ಕೆಲಸ ಮಾಡುವವರು ತಮ್ಮನ್ನು 'ಶಿವ' ಸೈನಿಕರೆಂದು ಕರೆದುಕೊಳ್ಳುತ್ತಿಲ್ಲವೇ ? ದಿನ ನಿತ್ಯ ಪತ್ರಿಕೆಗಳಲ್ಲಿ ವರದಿಯಾಗುತ್ತಿರುವ ರೈತರ ಆತ್ಮಹತ್ಯೆಗಳು ಬಲಿಯ ಯಾವ ಪ್ರಕಾರಕ್ಕೆ ಸೇರುತ್ತವೆ ? ಜಾಗತೀಕರಣದ ಹುಟ್ಟಿನ ಅಬ್ಬರದಲ್ಲಿ ನಡೆಸುತ್ತಿರುವ ಆರ್ಥಿಕ ದುರಾಚರಣೆಗಳಿಂದ ಆಗುತ್ತಿರುವ ಬಲಿಗಳ ಘನ ಘೋರ ಪರಿಣಾಮಗಳ ಎದುರಿಗೆ ಮಾರಿಗುಡಿಯ ಕುರಿ ಬಲಿ ಪ್ರಕರಣಕ್ಕೆ ಯಾವ ಪ್ರಸ್ತುತತೆ ಇದೆ ? ವಿಚಾರವಾದಿಗಳು ಚಿಂತಿಸಬೇಕು.

*- ಡಾ|| ಕೆ. ಮರುಳಸಿದ್ದಪ್ಪ*

## ಮೀಸಲಾತಿಯ ನಾಟಕ

**ಮಾರ್ಚ್** ತಿಂಗಳು ಬಂತೆಂದರೆ 'ಸ್ತ್ರೀಪರತೆ' ಸನ್ನಿ ರೋಗದಂತೆ ಎಲ್ಲರನ್ನೂ, ಅದರಲ್ಲೂ ವಿಶೇಷವಾಗಿ ರಾಜಕಾರಣಿಗಳನ್ನು ಅಡರುತ್ತದೆ. ಮಹಿಳಾ ಮೀಸಲಾತಿಯನ್ನು ಜಾರಿಯಾಗದಂತೆ ಮಾಡುವಲ್ಲಿ ಯಶಸ್ವಿಯಾದ ಎಲ್ಲಾ ರಾಜಕೀಯ ಪಕ್ಷಗಳು ಈಗ ಮತ್ತೆ ಮೀಸಲಾತಿ ಪರವಾಗಿ ದನಿಯೆತ್ತಿವೆ. ಎಲ್ಲ ಜನಸಮುದಾಯದ ಕಾಳಜಿಯನ್ನು ತಮ್ಮ ಮೂಗಿನ ನೇರಕ್ಕೆ ವಿಶ್ಲೇಷಿಸುವ ಅಭ್ಯಾಸವಿರುವ ಆಳುವ ಭಾರತೀಯ ಜನತಾ ಪಕ್ಷವು ಮಹಿಳಾ ಮೀಸಲಾತಿಯನ್ನು 'ಸರ್ವಪಕ್ಷಗಳ ಒಮ್ಮತದ' ನಾಟಕವಾಗಿ ಪರಿವರ್ತಿಸಹೊರಟಿದೆ. ಈ ಸೋಗಲಾಡಿತನದ ಬೂಟಾಟಿಕೆ **ಮಹಿಳಾ ದಿನಾಚರಣೆ**ಯ ಸಂದರ್ಭದಲ್ಲಿ ಇನ್ನೂ ಅಬ್ಬರದ ಸ್ವರದಲ್ಲಿ ಕೇಳಿಬಂದಿದೆ. ಚುನಾವಣೆ ಎದುರಿಸಲು ಇದೂ ಒಂದು ಬಂಡವಾಳ ಅವರಿಗೆ.

ಕಳೆದ ಡಿಸೆಂಬರ್ ಅಧಿವೇಶನದಲ್ಲಿ ಮೀಸಲಾತಿ ಮಸೂದೆ ಮಂಡಿತವಾಗದೆ ನೇಪಥ್ಯಕ್ಕೆ ಸರಿದಾಗ, ತಾನು ಮಹಿಳಾ ಮೀಸಲಾತಿ ಪರವಾಗಿದ್ದೇನೆಂದ ಭಾಜಪ ಹೊಸ ಚಾಣಾಕ್ಷತನದ ಪರ್ಯಾಯ ಸಲಹೆಯನ್ನು ಪ್ರತಿಪಾದಿಸಲು ಆರಂಭಿಸಿತು. ಚುನಾವಣಾ ಆಯೋಗದ ಆಯುಕ್ತರಾದ ಡಾ|| ಗಿಲ್‌ರ ಸಲಹೆಯ ಮೇರೆಗೆ 'ಜನತಾ ಪ್ರಾತಿನಿಧ್ಯದ ಮಸೂದೆ'ಯನ್ನು ಮುಂದಿಟ್ಟಿತು. ಜೊತೆಗೆ ಮಹಿಳಾ ಮೀಸಲಾತಿಯ ವಿರುದ್ಧವಿದ್ದ ಎಲ್ಲ ಪಕ್ಷಗಳು ಇದನ್ನೇ ಬೆಂಬಲಿಸಿ ಪ್ರತಿಪಾದಿಸಹೊರಟವು. ಸಂವಿಧಾನಾತ್ಮಕವಾಗಿ ಮೀಸಲಾತಿಯನ್ನು ಕೊಡಲೊಪ್ಪದ ಹಾಗೂ 'ಜನತಾ ಪ್ರಾತಿನಿಧ್ಯ ಮಸೂದೆ'ಗೆ ತಿದ್ದುಪಡಿ ಬೆಂಬಲಿಸುತ್ತಿರುವ ಭಾಜಪ, ಬಿ.ಎಸ್.ಪಿ., ಆರ್.ಜೆ.ಡಿ. ಮತ್ತು ಇನ್ನಿತರ ಪಕ್ಷಗಳು ತೋರಿಸುತ್ತಿರುವ ಮಹಿಳಾ ಕಾಳಜಿ ಅವರ ಪಕ್ಷ ರಾಜಕೀಯಕ್ಕೆ ಅನುಗುಣವಾಗಿದೆ. ಈಗಿರುವ ಮೀಸಲಾತಿ ಮಸೂದೆಯನ್ನು ಯಥಾವತ್ತಾಗಿ ಮಂಡಿಸಿದರೆ ಮಹಿಳೆಯರಿಗೆ ಅನ್ಯಾಯವಾಗುತ್ತದೆ, ಎಂದು ಬೊಬ್ಬೆಯಿಡುತ್ತಿರುವ ಮಂದಿ ಪರ್ಯಾಯ ಮೀಸಲಾತಿ ಮಸೂದೆಯಲ್ಲಿ ನ್ಯಾಯ ದೊರಕಿಸುವ ಬಗೆಯಾದರೂ ಎಂತಹುದು ? ಪಕ್ಷಗಳು ಗೆಲ್ಲದಂಥ ಸ್ಥಳಗಳಲ್ಲಿ ಮಾತ್ರ ಮಹಿಳೆಯರಿಗೆ ಟಿಕೇಟು ಕೊಡುವ ಸಾಧ್ಯತೆಯಿರುವುದಿಲ್ಲವೇ ? ಇಲ್ಲವೇ ತಮ್ಮ ಹೆಂಡತಿ, ಮಗಳು, ತಾಯಿಯರಿಗೆ ಮಾತ್ರ ಗೆಲ್ಲುವ ಟಿಕೇಟು ಕೊಟ್ಟು ಸಾಮಾನ್ಯ ಮಹಿಳಾ ಸದಸ್ಯರಿಗೆ ಅನ್ಯಾಯ ಮಾಡುವುದಿಲ್ಲವೇ ? ಪಕ್ಷಬದ್ಧತೆ, ನಿಷ್ಠೆಯೆಂಬಂತಹ ಅಪರೂಪದ ಗುಣಗಳು ಇಂದು ಪ್ರಸಕ್ತ ರಾಜಕೀಯದಲ್ಲಿ ಇದ್ದಿದ್ದರೆ 'ಮಹಿಳಾ ಮೀಸಲಾತಿ'ಯೆಂಬ ಸಂವಿಧಾನಾತ್ಮಕ ಹೋರಾಟಗಳ ಅಗತ್ಯವೇ ಇರುತ್ತಿರಲಿಲ್ಲ. ಮೀಸಲಾತಿ ಕೊಟ್ಟೂ ಕೊಡದಿರುವಂತೆ ಮಾಡುವ ಹುನ್ನಾರ ಇದು.

ಜನತಾ ಪ್ರಾತಿನಿಧ್ಯದ ಮಸೂದೆಯನ್ನು ಒಂದು ಕಡೆ ಪ್ರತಿಪಾದಿಸುತ್ತಿರುವ ಆಳುವ ಪಕ್ಷ, ಮತ್ತೊಂದು ಕಡೆ ಸ್ತ್ರೀಪರತೆಯನ್ನು ಪ್ರದರ್ಶಿಸುವುದರಲ್ಲಿ ತಾನು ಹಿಂದೆ ಬೀಳಬಾರದೆಂದು ವಿರೋಧ ಪಕ್ಷಗಳ ಜೊತೆಗೂಡಿ ಲೋಕಸಭೆಯಲ್ಲಿ ವಿವಾದಕ್ಕೆಡೆಯಾಗಿರುವ ಮಹಿಳಾ ಮೀಸಲಾತಿ ಮಸೂದೆಯ ಬಗೆಗೂ ತನ್ನ ಅಪ್ರತಿಮ ಪ್ರೇಮವಿದೆಯೆಂದು ಸಾಬೀತು ಮಾಡಲು ಮತ್ತೆ ಅದೇ ಹಳೆಯ 'ಸರ್ವ ಪಕ್ಷಗಳ ಒಮ್ಮತದ ನಾಟಕ' ಘೋಷಿಸಿದೆ. ಇಡೀ ದೇಶಕ್ಕೆ ಅನ್ವಯಿಸುವ ಯಾವುದೇ ಗಂಭೀರ ಸಮಸ್ಯೆಯ ಸಂದರ್ಭದಲ್ಲೂ ಸರ್ವಪಕ್ಷಗಳ ಒಮ್ಮತವನ್ನು ಪಡೆಯಲು ಪ್ರಯತ್ನಿಸದ ಆಳುವ ಪಕ್ಷದ ಈ ಧೋರಣೆಯ ಹಿಂದಿನ ರಹಸ್ಯವಾದರೂ ಏನು ?

*(೧೫ನೇ ಪುಟಕ್ಕೆ)*

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೭೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ವಿಜ್ಞಾನ ವಿವೇಚನೆಯ ಗಡಿ ದಾಟಿದಾಗ

ಒಂದು ಉತ್ಕೃಷ್ಟ ಲೇಖನದಲ್ಲಿ ಇರಲೇಬೇಕಾದ ಮೂರು ಗುಣಗಳೂ ಇದರಲ್ಲಿ ಹದವಾಗಿ ಎರಕಗೊಂಡಿವೆ. ಪರಿಕಲ್ಪನೆಯಲ್ಲಿ ಖಚಿತತೆ, ಭಾಷಾ ಪ್ರಯೋಗದಲ್ಲಿ ಉಚಿತತೆ ಮತ್ತು ನಿರೂಪಣೆಯಲ್ಲಿ ಉತ್ಸಾಹ. ಡಾ|| ಟಿ. ಆರ್ ಅನಂತರಾಮು ಆಯ್ದುಕೊಂಡಿರುವ ವಿಷಯಗಳು ಅತ್ಯಂತ ಸಮಯೋಚಿತವಾಗಿವೆ. ಶೈಲಿಯಲ್ಲಿ ಕಾವ್ಯತ್ವ ಮಿನುಗಿ ಹೊಸ ಆಕರ್ಷಣೆ ನೀಡಿದೆ: ನಿಜ, ಎಲ್ಲಿಯೂ ಯಾರೂ ''ಆತ್ಮಸಾಕ್ಷಿಯನ್ನು ಅಡವಿಡಬಾರದು.''

*ಮೈಸೂರು* — *ಜಿ. ಟಿ. ನಾರಾಯಣ ರಾವ್*

ಶಾ. ಬಾಲುರಾವ್‌ರವರ ಬಗ್ಗೆ ಕೆ. ಎಲ್. ಗೋಪಾಲ ಕೃಷ್ಣ ರಾವ್‌ಲೇಖನ ಚೆನ್ನಾಗಿದೆ.

ಒಂದೆರಡು ವರ್ಷಗಳ ಅವಧಿಯಲ್ಲಿ ಮಯೂರದಲ್ಲಿ ಬಂದ 'ಮಾರ್ಗದರ್ಶಿಯೊಬ್ಬನ' ಬಗ್ಗೆ ನೀಳ್ಗತೆ ಹಳೆಯ ಶ್ರೀರಂಗಪಟ್ಟಣದ ಪರಿಸರವನ್ನು, ಅಂದಿನ ಜನಜೀವನವನ್ನು ಚೆನ್ನಾಗಿ ಚಿತ್ರಿಸಿದೆ. ಶಾ. ಬಾಲುರಾಯರ ತಂದೆ ಶ್ರೀರಂಗಪಟ್ಟಣದಲ್ಲಿಯೇ ಇದ್ದರು.... ಅವರ ಹೆಸರು ಶಾಮರಾಯರು ಎಂದು ಕೇಳಿದ್ದೇನೆ.

ಶ್ರೀರಂಗಪಟ್ಟಣ ಅವರ ಊರು. ನನ್ನ ಊರು ಸಹ ಎನ್ನುವುದು ನಿಜಕ್ಕೂ ಹೆಮ್ಮೆ ತರುತ್ತದೆ.

*ಮೈಸೂರು* — *ಕೊ. ಸು. ನರಸಿಂಹ ಮೂರ್ತಿ*

ವಿಶ್ವ ವ್ಯಾಪಾರ ಸಂಘಟನೆಯಲ್ಲಿನ ನಿಯಮಗಳನ್ನು ತಿಳಿಸುತ್ತಾ ಇದು ಅಸಮಾನದೊಳಗಿನ ಸ್ಪರ್ಧೆಯನ್ನು ಮೂಡಿಸಿ ಜಗತ್ತಿನ ಬಡದೇಶಗಳನ್ನು ಶೋಷಿಸುವ ಶಕ್ತ ರಾಷ್ಟ್ರಗಳ ಸಂಚು ಏನೆಂಬುದನ್ನು ವಿವರಿಸುವ ಲೇಖನ ವಾಸ್ತವತೆಗೆ ಹಿಡಿದ ಕೈಗನ್ನಡಿ.

*ಕಾಸರಗೋಡು* — *ಬಿ. ಶ್ರೀಧರ ಭಟ್ ಪೈವಳಿಕೆ*

ಮಾರ್ಚ್ ತಿಂಗಳ 'ಹೊಸತು' ಪತ್ರಿಕೆಯ ತಿಂಗಳ ಕಥೆ ಮತ್ತು ವಿಜ್ಞಾನ ಅಂಕಣದಲ್ಲಿ ಶಬ್ದ ಪ್ರಪಂಚ, ಶಿಕ್ಷಣ ಅಂಕಣದಲ್ಲಿ ದಿನೇಶ್ ಹಾಸನ ಬರೆದ ಅಮೆರಿಕಾದ ಅಧ್ಯಾಪಕ ಸಂಘದ ಕಾರ್ಯವಿಧಾನ, ಪ್ರವಾಸ, ಚೆನ್ನಾಗಿ ಮೂಡಿ ಬಂದಿವೆ. ಎಲ್ಲದರ ಬಗ್ಗೆ ಮಾಹಿತಿ ನೀಡಿರುವ ಲೇಖಕರಿಗೆ ಹಾಗೂ 'ಹೊಸತು'ವಿಗೆ ವಂದನೆಗಳು.

*ಚಿಕ್ಕಮಗಳೂರು* — *ದೇಜಪ್ಪ ಬಿ., ಚಂದ್ರಕಾಂತ ಸಿ.*
*ಸಂಗಮೇಶ ಎಮ್. ತೋಟದ*

ಎಂ. ವೆಂಕಟಸ್ವಾಮಿಯವರ 'ನಾಗಾರಾಜ್ಯದಲ್ಲಿ' ಲೇಖನ ಸೊಗಸಾಗಿದ್ದು, ಈಶಾನ್ಯ ರಾಜ್ಯಗಳಿಗೆ ವರ್ಗವಾಗಿ ಹೋಗುವ ನೌಕರರ ಬವಣೆಯನ್ನು ಮನಮುಟ್ಟುವಂತೆ ವಿವರಿಸಿದೆ. ನನ್ನ ಕೆಲವು ನಾಗಾ ಸ್ನೇಹಿತರು ಹೇಳುವಂತೆ ಈಶಾನ್ಯ ರಾಜ್ಯಗಳಲ್ಲಿನ ವಾಸ್ತವ ನಾವು ತಿಳಿದಿರುವುದಕ್ಕಿಂತ ಸಂಪೂರ್ಣ ಭಿನ್ನವಾಗಿದೆ. ಕದನವಿರಾಮ, ಶಾಂತಿ ಮಾತುಕತೆ ಇವೆಲ್ಲದರ ಹೊರತಾಗಿ ''ಸಮಾಜ ಸುಧಾರಕರ'' ಸೇವೆಯ ಸುಳಿಯಲ್ಲಿ ಸಿಕ್ಕಿ ನಾಗಾಲ್ಯಾಂಡ್, ತ್ರಿಪುರಾ, ಮಿಜೋರಾಂ ಮುಂತಾದ ಈಶಾನ್ಯ ರಾಜ್ಯಗಳು ತಮ್ಮನ್ನು ತಾವೇ ಕಳೆದುಕೊಳ್ಳುತ್ತಿವೆ. ಮಾದಕ ದ್ರವ್ಯ, ಸ್ವೇಚ್ಛಾಚಾರ ಅಲ್ಲಿಯ ಯುವಕರಿಗೆ ಅನೈತಿಕವಾಗಿ ತೋರುವುದಿಲ್ಲವಂತೆ !

*ಮಂಗಳೂರು* — *ರಾಜೇಶ ನಾ. ನಾಯ್ಕ*

### ಮಿನುಗುವ ನೆನಪುಗಳು

ನಭಾವಲೋಕನದ ಲೇಖನಗಳನ್ನು ಓದುತ್ತಿದ್ದಂತೆ ಹಳ್ಳಿಯಲ್ಲಿ ಬೆಳೆದ ಅನೇಕರಿಗೆ ಚಿಕ್ಕಂದಿನ ನಕ್ಷತ್ರ ವೀಕ್ಷಣೆಯ ನೆನಪುಗಳು ಬಾರದಿರುವುದಿಲ್ಲ.

ನಾವು ದೂರದರ್ಶಕವಿರಲಿ, ದುರ್ಬೀನಿನ ಹೆಸರನ್ನೂ ಕೇಳಿರಲಿಲ್ಲ. ಮಿನುಗಲೆ ಮಿನುಗಲೆ ನಕ್ಷತ್ರ - ಎಂದು ಹಾಡದಿದ್ದರೂ, ಸಂಜೆಯಾಗುತ್ತಿದ್ದಂತೆ ಆಕಾಶದ ತುಂಬ ಚುಕ್ಕೆಗಳು ದಟ್ಟೈಸುತ್ತಿದ್ದವು. ಆಕಾಶ ನೋಡಲು ನೂಕಾಡಬೇಕಾಗಿರಲಿಲ್ಲ, ಮನೆಯ ಅಂಗಳ ಅಥವಾ ಹುಲ್ಲಿನ ಕಣಗಳೇ ನಮ್ಮ ಪ್ಲಾನಟೇರಿಯಮ್‌ಗಳು. ಅಂಗಾತ ಮಲಗಿದರಾಯಿತು. ನಕ್ಷತ್ರ ಗುರುತಿಸಲು ಹಿರಿಯರ ಮಾರ್ಗದರ್ಶನವಿರುತ್ತಿತ್ತು. ಅಗೋ ಕುರಿದೊಡ್ಡಿ, ಕಾವಲು ನಾಯಿ, ಮಂಚದ ಪಾದ, ಕಿನ್ನರಿ ಬುಂಡೆ, ಕರಡಿ ಮರಿ ಇತ್ಯಾದಿ. ಮಧ್ಯೆ ಕೆಲವು ಮುನಿಗಳ ಹೆಸರುಗಳೂ ಬರುತ್ತಿದ್ದವು. ನಕ್ಷತ್ರ ನೋಡುತ್ತ ಮಾಮೇರಿ ನಿದ್ದೆಗೆ ಜಾರುವ ಅನುಭವ ಎಂದಿಗೂ ಮರೆಯುವಂಥದ್ದಲ್ಲ. ಎಷ್ಟೋ ಹೊತ್ತಿನ ನಂತರ ಎಚ್ಚರಾಗಿ ಕಣ್ಣು ತೆರೆದಾಗ ಮಂಚದ ಪಾದ ತಲೆಕೆಳಗಾಗಿ ಅಚ್ಚರಿ ಹುಟ್ಟಿಸುತ್ತಿತ್ತು. ಮೂಡಲಲ್ಲಿ ಬೆಳ್ಳಿ ಚುಕ್ಕೆ ಮೂಡುವ ಮುನ್ನ ಕೋಳಿಗಳಿಗೆ ನಿದ್ದೆ ಹಾರುತ್ತಿತ್ತು ! ಕನಸಿನ ಲೋಕದಿಂದ ಮರಳಿ ಬಂದು ಕಣ್ತೆರೆದರೆ ಬೆಳ್ಳಿ ಬೆಳಗು. ಎಂಥಾ ಅದ್ಭುತ ನೆನಪುಗಳು !

*ಬೆಂಗಳೂರು* — *ಗಿರಿಯಪ್ಪ*




'ಹಂಪಿ ಶಿವಾನಂದ ಆಶ್ರಮದ ಸದಾಶಿವಯೋಗಿ ಸಂದರ್ಶನ' ಕುತೂಹಲಕಾರಿಯಾಗಿತ್ತು. ಇಂಥ ಮಾನವೀಯ ಪ್ರಜ್ಞೆಯುಳ್ಳ ಸ್ವಾಮೀಜಿ ಬಗ್ಗೆ ತಿಳಿಯಲು ನಮಗೆ ೨೫ ವರ್ಷ ಬೇಕಾಯ್ತು ಎಂಬ ವಿಚಾರ ಖೇದಕರ. ಸ್ಥಳೀಯರಲ್ಲಿ ಇಂಥವರ ಬಗ್ಗೆ ಅಸಡ್ಡೆ, ಅಲರ್ಜಿ ಹೊಸದೇನಲ್ಲ, ಆದರೆ ಮಾಧ್ಯಮಗಳೂ ಕೂಡಾ ಹಾಗೇ ಆದಲ್ಲಿ ಅದೊಂದು ಚಿಂತೆಯ ವಿಷಯ.

ನೇರ, ಸರಳ, ಪ್ರಾಮಾಣಿಕ, ಪಾರದರ್ಶಕ, ವಾಸ್ತವಿಕ ವಿಚಾರ ದೃಷ್ಟಿಕೋನವುಳ್ಳ ಇಂಥ ಅನುಭಾವಿ ವಿರಳರಲ್ಲಿ ವಿರಳರು. ಇಂಥವರ ಬಗ್ಗೆ ಜನಸಾಮಾನ್ಯರಲ್ಲಿ ಆಸಕ್ತಿ, ಅಭಿರುಚಿ ಮೂಡಿಸುವ ಕೆಲಸ ಮಾಧ್ಯಮಗಳದ್ದು, ಪ್ರಜ್ಞಾವಂತರದ್ದು. ಲೇಖಕರಿಗೆ, ಪ್ರಕಟಿಸಿದ 'ಹೊಸತು'ಗೆ ಅಭಿನಂದನೆಗಳು.

*ರಾಮದುರ್ಗ* — *ರಾಮಚಂದ್ರ ಎಸ್. ಕುಲಕರ್ಣಿ*

### ರೈತಮಿತ್ರ ವೆಬ್‌ಸೈಟ್

ಕೃಷ್ಣರ ಪ್ರಕಾರ ಜಾನುವಾರುಗಳಿಗೆ ರೋಗ ಬಂದರೆ ವೈದ್ಯರ ಹತ್ತಿರ ಹೋಗದೆ ಇಂಟರ್‌ನೆಟ್ ಕೇಂದ್ರಕ್ಕೆ ಹೋಗಬೇಕಂತೆ. ಪೇಪರು ಬಾರದ ಹಳ್ಳಿಯ ರೈತ ದರ ತಿಳಿಯಲು ಪೇಟೆ ಕಡೆ ಪ್ರಯಾಣ ಬೆಳೆಸಬೇಕು. ಹಾಗೆ ಮಾಡಿದರೆ ರೈತನ ಕೃಷಿ ಭೂಮಿ ಬರಡಾಗುವುದು ಖಂಡಿತ.

ರೈತನು ಬೆಳೆಯ ಬೆಲೆ ಕುಸಿತದಿಂದ ತತ್ತರಿಸಿರುವಾಗ ಇಂಟರ್‌ನೆಟ್ ಮಾಲಿಕನಿಗೆ ಹಣ ಎಲ್ಲಿಂದ ಕೊಡುತ್ತಾನೆ ? ಮೊದಲು ಬೆಂಬಲ ಬೆಲೆ ಮತ್ತು ಬೆಳೆ ಖರೀದಿ ಕಾರ್ಯ ನಡೆಯಲಿ ಎಂಬುವ ಸಾಮಾನ್ಯ ಜ್ಞಾನ ಕೃಷ್ಣರ ಕೃಷಿ ಖಾತೆಗೆ ತಿಳಿದೇ ಇಲ್ಲ. ಈ ಕಸರತ್ತು ಮುಂಬರುವ ಚುನಾವಣೆಯಲ್ಲಿ ತನ್ನ ಪಕ್ಷವನ್ನು ಉಳಿಸುವ ಸಲುವಾಗಿ ಎಂದು ಗೊಂದಲಪುರದ ಬೋರೆಗೌಡನಿಗೂ ಗೊತ್ತು ಎಂಬುದು ಈ ಕೃಷ್ಣರಿಗೆ ತಿಳಿದೇ ಇಲ್ಲ.

*ಆನೆಗುಂಡಿ* — *ಎ. ರಾಧಾಕೃಷ್ಣ*

### ಕೊಳೆಗೇರಿ ವಾಸಿಗಳಿಗೆ ಬದುಕುವ ಹಕ್ಕು ಇದೆಯೋ

ಮತ್ತೊಂದು ಮುಖ ಈ ಕೊಳೆಗೇರಿಗಿದೆ. ಒಂದು ಸಂಸಾರ ಅಂದರೆ ಗಂಡ ಹೆಂಡತಿ ಮಕ್ಕಳು ಒಟ್ಟು ಸದಸ್ಯರು ಸಂಖ್ಯೆಯಲ್ಲಿ ಎಷ್ಟಿರುತ್ತಾರೆ ಎಂಬುದು ಗುಡಿಸಲು ನೀಡುವವರಿಗೆ ಮುಖ್ಯವಾಗುವುದಿಲ್ಲ. ನೀಡುವವರಿಗೂ ಪಡೆಯುವವರಿಗೂ ಇರುವ ಸಂಬಂಧ ಇಲ್ಲಿ ಮುಖ್ಯವಾಗಿರುತ್ತದೆ. ಮಿಕ್ಕೆಲ್ಲ ವಿಷಯಗಳಿಗೆ ಒಂದು ಸಂಸಾರವಾಗಿರುವ ಈ ಪುಟ್ಟ ಕುಟುಂಬ ಪುಕ್ಕಟೆ ಗುಡಿಸಲಿನ ಆಶೆಗಾಗಿ ಒಂಟಿ ಜೀವಗಳಾಗುತ್ತವೆ. ಗಂಡನಿಗೆ ಹೆಂಡತಿಯಿಲ್ಲ, ಹೆಂಡತಿಗೆ ಗಂಡ ಇಲ್ಲ, ಮಕ್ಕಳು ಬೇರೆ ಬೇರೆ. ಗಂಡನಿಗೆ ಒಂದು ಗುಡಿಸಲು, ಹೆಂಡತಿಗೆ ಒಂದು ಗುಡಿಸಲು, ಮಗನಿಗೆ, ಮಗಳಿಗೆ ಹೀಗೆ ಸದಸ್ಯರ ಸಂಖ್ಯೆ ಬೆಳೆದಂತೆ ಗುಡಿಸಲ ಸಂಖ್ಯೆ ಬೆಳೆಯುತ್ತಾ ಹೋಗುತ್ತದೆ ಪುಕ್ಕಟೆ ದೊರೆಯುವ ಕೊಳೆಗೇರಿ ಗುಡಿಸಲು. ಈ ಗುಡಿಸಲುಗಳಿಗೆ ಬರುವ ಬಾಡಿಗೆದಾರರೇ ನಿಜವಾದ ಬಡವರು. ಕಡುಬಡವರ ಹೆಸರಲ್ಲಿ ನಡೆಯುವ ದಂಧೆ. ಇದು ಕೊಳೆಗೇರಿಯ ಚಿತ್ರಣ.

*ಬೆಂಗಳೂರು* — *ಇಂದಿರಾ ಹೆಗ್ಗಡೆ*

ಫೆಬ್ರವರಿ-೨೦೦೧ರ 'ಹೊಸತು' ಸಂಚಿಕೆ ವರ್ಣಮಯ ವೈವಿಧ್ಯಗಳಿಂದ ತುಂಬಿಬಂದಿದೆ. ಶ್ರೀರಾಮಗಿರಿಯವರ ಕವಿತೆ ''ಗಾಡಿ ನಿಲ್ಲುವ ಸಮಯ'' ಸಾಂದರ್ಭಿಕವಾಗಿ ಕ್ರಿಯಾಶೀಲ ಜಗತ್ತಿನ ಕನ್ನಡಿಯಾಗಿದೆ. ಕವಿಗಳಿಗೆ ವಂದನೆಗಳು.

*ಬೆಂಗಳೂರು* — *ಶ್ರೀವತ್ಸ ಉಪಾಧ್ಯಾಯ. ಕೆ. ಆರ್.*

ಫೆಬ್ರವರಿ -೨೦೦೧ 'ಹೊಸತು' ಒಂದು ಮುಖ್ಯವಾದ ಸಾಹಿತ್ಯ ಸಂಚಿಕೆಯಂತಿದೆ. 'ಕಾವ್ಯಧಾರೆ'ಯಲ್ಲಿ ಪ್ರಕಟಗೊಂಡಿರುವ ಶ್ರೀರಾಮಗಿರಿ ರವೀಂದ್ರರ ''ಗಾಡಿ ನಿಲ್ಲುವ ಸಮಯ'' ಇಂದಿನ ಪ್ರಕ್ಷುಬ್ಧ ಸ್ಥಿತಿಯ ಸಂಕೇತವಾಗಿದೆ.

*ಬೆಂಗಳೂರು* — *ಶ್ರೀ ವೆಂಕಟೇಶ ಬೈಕಂಪಾಡಿ*

# ಯಾತನಾಮಯ ನೃತ್ಯ

ಇತಿಹಾಸ ಪ್ರಸಿದ್ಧ ದೆಹಲಿಯ ಕೆಂಪು ಕೋಟೆಯನ್ನು ದಿನಂಪ್ರತಿ ಸಾವಿರಾರು ಮಂದಿ ಸಂದರ್ಶಿಸುತ್ತಾರೆ. ಮೊಗಲ ಅರಸರ ಕಡು ವೈಭವದ ಜೀವನವನ್ನು ಸ್ಮರಿಸಿಕೊಳ್ಳಬಹುದಾದ ಗತಕಾಲದ ಹಲವು ಆಕರ್ಷಣೆಗಳು ಅಲ್ಲಿವೆ. ಇವುಗಳನ್ನು ವೀಕ್ಷಿಸುತ್ತಾ ಯಮುನಾ ನದಿಯ ದೃಶ್ಯವಿರುವ ಪಾರ್ಶ್ವಕ್ಕೆ ಬಂದರೆ ಕೋಟೆಯ ಒಳಗಡೆಯೇ ನಿಂತು ನೋಡಬಹುದಾದ ವರ್ತಮಾನ ಕಾಲದ ಆಕರ್ಷಣೆಯೊಂದು ಕಾಣಿಸುತ್ತದೆ. ಇದೇ ಮಕ್ಕಳನ್ನೂ, ಹಿರಿಯರನ್ನೂ ಕ್ಷಣಕಾಲ ಆಕರ್ಷಿಸುವ ಕರಡಿಯ ಕುಣಿತ. ಒಂದೆರಡು ಮಂದಿ ಕರಡಿ ಕುಣಿಸುವವರು ಕರಡಿಗಳನ್ನು ಕುಣಿಸಿ ಮೇಲ್ಭಾಗದಲ್ಲಿ ನಿಂತಿರುವ ಪ್ರೇಕ್ಷಕರಿಂದ ಮೆಚ್ಚುಗೆಯ ಬಹುಮಾನಕ್ಕಾಗಿ ಕೈಯೊಡ್ಡುತ್ತಾರೆ.

ರಾಜ ಮಹಾರಾಜರುಗಳ ಮನರಂಜನೆಗಾಗಿ ಕರಡಿಗಳನ್ನು ಕುಣಿಸುವ ಸಂಪ್ರದಾಯವು ೧೬ನೆಯ ಶತಮಾನದಲ್ಲೇ ಪ್ರಚಲಿತವಿತ್ತು. ದಿಲ್ಲಿ, ಆಗ್ರಾ, ಜಯಪುರದ ರಸ್ತೆ ಬದಿಗಳಲ್ಲಿ ಪ್ರವಾಸಿಗಳ ಮನರಂಜನೆಗಾಗಿ ಈಗಲೂ ಕರಡಿ ಕುಣಿತ ಪ್ರದರ್ಶಿಸಲ್ಪಡುತ್ತದೆ. ತಾವೇನು ಮಾಡುತ್ತಿದ್ದೇವೆ ಎಂಬ ಅರಿವಿಲ್ಲದೆ ಪ್ರವಾಸಿಗಳು ತಮ್ಮ ಉದಾರ ಹಣಕಾಸಿನ ನೆರವಿನಿಂದ ಈ ಅಸಂಸ್ಕೃತ, ಸಮಯಬಾಹ್ಯ ಪರಂಪರೆಯನ್ನು ಶಾಶ್ವತವಾಗಿ ನೆಲೆಗೊಳಿಸುತ್ತಾರೆ.

ದೆಹಲಿ, ಆಗ್ರಾಗಳಲ್ಲೇ ಏಕೆ ? ದೇಶದ ಉದ್ದಗಲಗಳಲ್ಲಿ ಕರಡಿ ಕುಣಿಸುವವರು ಕಾಣಿಸಿಕೊಳ್ಳುತ್ತಾರೆ. ದೊಣ್ಣೆಯೊಂದನ್ನು ಬೀಸುತ್ತಾ ನಡೆಯುತ್ತಿರುವ ಯಜಮಾನ ನೊಂದಿಗೆ ಸಾಗುತ್ತಿರುವ ಕರಡಿಯನ್ನು ಮಕ್ಕಳ ಗುಂಪು ಹಿಂಬಾಲಿಸುತ್ತದೆ. ದಿನಕ್ಕೆ ೧೨ ಗಂಟೆಗಳಷ್ಟು ಕಾಲ ಹಿಂಗಾಲುಗಳಲ್ಲಿ ನಿಂತು ಕುಣಿಯುತ್ತಿ ರುವ ಕರಡಿಗಳು ಒಂದು ಕ್ರೂರ ಪರಂಪರೆಯ ಶೋಕಭರಿತ ದೃಶ್ಯ ವಾಗಿದೆ. ಇಂತಹ ತಿರಸ್ಕರಣೀಯ ಹಣೆಬರಹವನ್ನು ಹೊತ್ತ, ಅತೀವ ಸಂಕಷ್ಟಗಳನ್ನು ಅನುಭವಿಸುತ್ತಿರುವ ಕರಡಿಗಳ ಸಂಖ್ಯೆ ನಮ್ಮ ದೇಶದಲ್ಲಿ ೧,೨೦೦ಕ್ಕಿಂತಲೂ ಅಧಿಕವಾಗಿದೆ ಎಂದು ಅಂದಾಜು ಮಾಡಲಾಗಿದೆ.

ಸುಮಾರು ೮,೦೦೦ ರೂಪಾಯಿ ಗಳನ್ನು ಕರಡಿಯೊಂದರ ಮರಿಯ ಖರೀದಿಗೆ ವಿನಿಯೋಗಿಸುವುದು ದುಬಾರಿ ಧನವಿನಿಯೋಗವೇ ಸರಿ. ಆದರೆ ಕರಡಿಯ ಯಜಮಾನ ಪ್ರವಾಸಿಗಳ ಭೇಟಿಯ ಕಾಲಗಳಲ್ಲಿ ತಿಂಗಳಿಗೆ ೩,೦೦೦ ರೂಪಾಯಿ ಗಳಷ್ಟು ಗಳಿಸಬಲ್ಲ. ಕರಡಿಯ ಯಜಮಾನನಿಗೆ ಸಾಕಷ್ಟು ಗಳಿಕೆಯಾದಂತಾಯಿತು, ಪ್ರವಾಸಿಗಳಿಗೆ, ದಾರಿ ಹೋಕರಿಗೆ ಸಾಕಷ್ಟು ಮನರಂಜನೆಯೂ ಒದಗಿದಂತಾಯಿತು. ಆದರೆ ಕರಡಿಯ ಜೀವನ ಕರುಣಾಜನಕವಾಗಿದೆ. ಕರಡಿಯ ಕುಣಿತದ ಹಿಂದಿರುವುದೇ ಪ್ರಾಣಿಹಿಂಸೆ.

ಕಾಡಿನಿಂದ ಸೆರೆಹಿಡಿಯಲ್ಪಟ್ಟ ಮರಿಗಳಲ್ಲಿ ಶೇಕಡಾ ೬೦ರಿಂದ ೭೦ರಷ್ಟು ತಮ್ಮ ತರಬೇತಿ ಪ್ರಾರಂಭವಾಗುವ ಮೊದಲೇ ಸಾವನ್ನಪ್ಪುತ್ತವೆ. ಹಸಿವು, ನೀರಿನ ಕೊರತೆಗಳೇ ಈ ಸಾವಿಗೆ ಪ್ರಮುಖ ಕಾರಣಗಳು. ಅದೃಷ್ಟಶಾಲಿ ಮರಿಯೊಂದು ಈ ಸಂಕಷ್ಟಗಳನ್ನೆಲ್ಲಾ ಎದುರಿಸಿ ಬದುಕಿದರೂ ತನ್ನ ಮುಂದಿನ ಜೀವನದಲ್ಲಿ ಅದು ಉಪವಾಸ ಮತ್ತು ಹೊಡೆತಗಳನ್ನು ಸಹಿಸಿಕೊಂಡು, ಶಿಕ್ಷೆಗೊಳಗಾಗಿ ಕುಣಿತದ ತರಬೇತಿ ಪಡೆಯಬೇಕಾಗುತ್ತದೆ.



ಕರಡಿಯನ್ನು ನಿಯಂತ್ರಿಸಲು ಅದರ ಕೋಮಲ ಮುಸಿಡಿನಲ್ಲೊಂದು ಹಗ್ಗ ತುರುಕಿಸುವುದು ಮುಂದಿನ ಕ್ರೂರಶಿಕ್ಷೆ. ಯಾವುದೇ ವೇದನಾನಿರೋಧಕ ದ್ರವ್ಯಗಳನ್ನೂ ಉಪಯೋಗಿಸದೆ, ಚೀತ್ಕರಿಸುತ್ತಿರುವ ಮರಿಯನ್ನು ಅದುಮಿಟ್ಟು ಕಾದ ಕಬ್ಬಿಣದ ಕಡ್ಡಿಯೊಂದರಿಂದ ಮೂಗನ್ನು ಚುಚ್ಚುವುದೇ ಮುಂದಿನ ಸತ್ವ ಪರೀಕ್ಷೆ. ಮೂಗನ್ನು ಚುಚ್ಚಿದ ಭಾಗದಲ್ಲಿ ಸೋಂಕು ತಗಲುವುದು ಸರ್ವೇಸಾಮಾನ್ಯ. ಮೂಗಿಗೆ ಚುಚ್ಚಿದ ಈ ಹಗ್ಗವನ್ನು ನಿಯಂತ್ರಿಸಿ ಯಜಮಾನ ಕರಡಿಗೆ ನರ್ತಿಸಲು ಆದೇಶ ನೀಡುತ್ತಾನೆ. ನೋವು ಮತ್ತು ಯಜಮಾನನ ದೊಣ್ಣೆಯ ಪೆಟ್ಟಿನ ಭಯದ ಪ್ರೇರಣೆಯಿಂದ ಕರಡಿ ಹಿಂಗಾಲುಗಳಲ್ಲಿ ನಿಂತು ಕುಣಿಯುತ್ತದೆ.

ಕರಡಿಗಳನ್ನು ಹಿಡಿಯುವುದು ಮತ್ತು ಮಾರಾಟ ಮಾಡುವುದು ಕಾನೂನುಬಾಹಿರವೆಂದು ೧೯೭೨ರ ವನ್ಯ ಜೀವಿ ಸಂರಕ್ಷಣಾ ಕಾಯಿದೆಯಲ್ಲಿ ಸಾರಲಾಗಿದೆ. ಆದರೆ ಈ ಕಾನೂನನ್ನು ಅಪರೂಪಕ್ಕೊಮ್ಮೆ ಎಂಬಂತೆ ಜಾರಿಗೊಳಿಸಲಾಗುತ್ತಿದೆ. ಯಾವುದೇ ಅಪರಾಧಗಳ ಕುರಿತು ನೀತಿ ವಾಕ್ಯಗಳನ್ನು ನಮ್ಮ ದೇಶದಲ್ಲಿ ಈಗಾಗಲೇ ಬರೆಯಲಾಗಿದೆ. ಸದ್ಯಕ್ಕೆ ಆಗದೆ ಉಳಿದಿರುವುದು ಅವುಗಳ ಆಚರಣೆ ಮಾತ್ರ.

ಕರಡಿಗಳನ್ನು ಸೆರೆಹಿಡಿಯುವ, ತರಬೇತಿಗೊಳಿಸುವ ಮತ್ತು ವಿನೋದಕ್ಕಾಗಿ ಕುಣಿಸುವ ಕ್ರೂರ ಪದ್ಧತಿ ಕರಡಿಗಳ ಸಂತತಿ ಕ್ಷೀಣಿಸುವುದಕ್ಕೆ ಒಂದು ಕಾರಣ. ಯಾವುದೇ ಜೀವಿ ಪೂರ್ಣ ಸ್ವಾತಂತ್ರ್ಯವನ್ನು ಪಡೆಯದೆ ತನ್ನ ಜಗತ್ತನ್ನು ಕಾಣಲು ಸಾಧ್ಯವಿಲ್ಲ. ಮನುಷ್ಯರಂತೆಯೇ ಪ್ರಾಣಿಗಳಿಗೂ ಈ ಭೂಮಿಯ ಮೇಲೆ ವಾಸಿಸುವ ಹಕ್ಕಿದೆ. ಹಿಂಸಾಚಾರವನ್ನು ತೊರೆದು, ವನ್ಯ ಮೃಗಗಳಿಗೆ ಜೀವಿಸಲು ಅನುವು ಮಾಡಿಕೊಡುವುದು ನಮ್ಮ ಆದರ್ಶವಾಗಿರಬೇಕು.

ಪಿ. ಎಸ್. ರೈ
ನಂ. ೧೬, ಗುರುಪ್ರಸಾದ್ ಲೇನ್
ಕಂಕನಾಡಿ, ಮಂಗಳೂರು-೫೭೫೦೦೨

# ಭೀಮಾ ನದಿಯ ದಡದಲ್ಲಿ

*"ಬ್ಯಾಸಿಗಿ ದಿವಸಕ ಬೇವಿನ ಮರ ತಂಪ, ಭೀಮರತಿಯೆಂಬ ಹೊಳಿ ತಂಪ*
*ಭೀಮರತಿಯೆಂಬ ಹೊಳಿ ತಂಪ ಹಡದವ್ವ ನೀ ತಂಪ ನನ್ನ ತವರೀಗಿ"*

ಬೇಸಿಗೆ ಕಾಲಕ್ಕೆ ತನ್ನ ತಿಳಿ ನೀರಿನ ಮೂಲಕ ತನುವಿಗೆ, ಮನಸ್ಸಿಗೆ, ತಂಪು ನೀಡಿ ನೆಲ, ಜನ, ಜಾನುವಾರು, ಮರಗಿಡಗಳಿಗೆ ತಣಿಸುತ್ತಿದ್ದ ಭೀಮೆ ಈ ವರ್ಷ ಚಳಿಗಾಲದಲ್ಲಿಯೇ ಬರಿದಾದಳು. ಕರ್ನಾಟಕದಲ್ಲಿ ಹರಿಯುವ ಹೆಚ್ಚಿನ ನದಿಗಳಿಗೆ ಉಗಮಸ್ಥಾನವಾಗಿರುವ ಪಶ್ಚಿಮ ಘಟ್ಟಗಳೇ ಭೀಮಾ ನದಿಯ ಜನ್ಮಸ್ಥಳ. ಅಲ್ಲಿಯ ಭೀಮಾಶಂಕರ ಪರ್ವತ ಭೀಮಾರತಿಯ ಅಕ್ಷಯ ಪಾತ್ರೆ. ಇಂದಿನ ಮಹಾರಾಷ್ಟ್ರದಲ್ಲಿ ಹುಟ್ಟಿ ಕರ್ನಾಟಕದ ಬಿಜಾಪುರ, ಗುಲಬರ್ಗಾ ಜಿಲ್ಲೆಗಳಲ್ಲಿ ಹರಿದು ಕೃಷ್ಣಾನದಿಯಲ್ಲಿ ಒಂದಾಗುವ ಈ ನದಿಯ ಕುರಿತು ಈಗ ಎಂದೂ ಇಲ್ಲದ ಗದ್ದಲ ಆರಂಭವಾಗಿದೆ. ಭೀಮಾನದಿಯ ದಂಡೆಗುಂಟ ಶತಮಾನಗಳಿಂದಲೂ ಅನೇಕ ಪವಿತ್ರ ತೀರ್ಥಕ್ಷೇತ್ರಗಳು ನೆಲೆಗೊಂಡಿವೆ. ಸಾವಿರಾರು ಹಳ್ಳಿಗಳು ಭೀಮೆಯ ಸೆರಗಿನಲ್ಲಿ ಒರಗಿಕೊಂಡಿವೆ. ತೀರ್ಥಧಾಮಗಳಲ್ಲಿ ಮಿಂದ ಭಕ್ತಾದಿಗಳು ತಮ್ಮ ಪುಣ್ಯ ಕ್ಷೇತ್ರಗಳ ಸಂದರ್ಶನಕ್ಕಾಗಿ ಇಂದಿಗೂ ತವಕಿಸುತ್ತಾರೆ. ರಾಷ್ಟ್ರಮಟ್ಟದ ಕೀರ್ತಿ ಪಡೆದಿರುವ ಪಂಢರಾಪುರ, ಗಾಣಗಾಪುರ, ಪುರಾಣಕಾಲದಿಂದಲೂ ಅನೇಕ ಐತಿಹ್ಯಗಳನ್ನು ಹೊಂದಿವೆ. ಕರ್ನಾಟಕದಲ್ಲಿ ಜೇವರ್ಗಿ ತಾಲ್ಲೂಕಿನ ಸಂಗಾವಿ, ಅಫಜಲಪುರ ತಾಲ್ಲೂಕಿನ ಘತ್ತರಗಿ, ಚಂದ್ರಲಾಪರಮೇಶ್ವರಿಯ ನೆಲೆಬೀಡಾದ ಸನ್ನತಿ ಮುಂತಾದವುಗಳು ಭೀಮಾನದಿಯ ದಡದಲ್ಲಿರುವ ಪುಣ್ಯಕ್ಷೇತ್ರಗಳು. ಆದರೆ ಇಂದು ಈ ನದಿಯ ಉಗಮಸ್ಥಾನದ ಸಮೀಪದಲ್ಲಿಯೇ ಇರುವ ಪಂಢರಾಪುರದ ಪಾಂಡುರಂಗನ ಪೂಜೆ ಪುನಸ್ಕಾರಗಳಿಗೇ ನೀರಿಲ್ಲದಿರುವ ವರದಿಗಳು ಬರುತ್ತಿವೆ. ಇನ್ನು ನದಿಯ ಉಗಮಸ್ಥಾನದಿಂದ ನೂರಾರು ಕಿ.ಮೀ. ದೂರದಲ್ಲಿರುವ ಕರ್ನಾಟಕದ ಇತರ ಊರುಗಳಿಗೆ ನೀರು ಹರಿಯುವುದಾದರೂ ಹೇಗೆ ?

೧೯೭೯ರಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸ್ ಅವರು ಇಂದಿರಾ ಕಾಂಗ್ರೆಸ್ಸಿನಿಂದ ವಿಭಜನೆಗೊಂಡ ಕಾಂಗ್ರೆಸ್ (ಯು) ಪರವಾಗಿ ಪ್ರಚಾರಕ್ಕಾಗಿ ಕಲಬುರ್ಗಿಗೆ ಆಗಮಿಸಿದ್ದಾಗ ಇಡೀ ಜಿಲ್ಲೆಯಾದ್ಯಂತ ಎತ್ತಿದ ಪ್ರಮುಖ ವಿಷಯ ಭೀಮಾ ಏತ ನೀರಾವರಿ ಯೋಜನೆಯದೇ ಆಗಿತ್ತು. ಇತ್ತೀಚೆಗೆ ಕಲಬುರ್ಗಿಯಲ್ಲಿ ಭೀಮಾನದಿ ಸಮಸ್ಯೆ ಕುರಿತು ಚರ್ಚಿಸಲು ಸೇರಿದ ಸರ್ವಪಕ್ಷಗಳ ಸಭೆಯಲ್ಲಿ ಹಾಜರಿದ್ದ ಹಾಲಿ ಮತ್ತು ಮಾಜಿ ಮಂತ್ರಿ ಶಾಸಕರುಗಳೆಲ್ಲರೂ ಅಂದಿನಿಂದಲೂ ಭೀಮಾ ಏತ ನೀರಾವರಿ ಯೋಜನೆಯ ಕುರಿತು ಭರವಸೆಗಳನ್ನು ಕೊಡುತ್ತಲೇ ಆಯ್ಕೆಯಾದವರು. ರಾಜ್ಯದ ನೀರಾವರಿ ಯೋಜನೆಗಳ ಕರ್ತೃಗಳು ಈ ಭಾಗದ ಸಣ್ಣ ನೀರಾವರಿಗೆ ಮಾಡಿದ ಅಪಚಾರದ ಫಲವಾಗಿ ಸ್ವಾತಂತ್ರ್ಯಾನಂತರ ೫೩ ವರ್ಷಗಳಾದರೂ ಭೀಮಾನದಿಯ ಒಂದು ಹನಿ ನೀರು ಕೂಡ ಕರ್ನಾಟಕದ ಹೊಲಕ್ಕೆ ಹರಿದಿಲ್ಲ. ಕೃಷ್ಣಾ ಕೊಳ್ಳದ ಯೋಜನೆಗಳಲ್ಲಿ ಅತ್ಯಂತ ಮುಖ್ಯವಾದ ಈ ಭೀಮಾ ಏತ ನೀರಾವರಿ ಯೋಜನೆಯ ಬಗ್ಗೆ ಜಾಣ ಕುರುಡನ್ನು ಪ್ರದರ್ಶಿಸಿದವರು ಹೈದರಾಬಾದ್ ಕರ್ನಾಟಕದ ರಾಜಕಾರಣಿಗಳೇ. ಬಚಾವತ್ ಆಯೋಗದ ಪ್ರಸ್ತಾಪ ಬಂದಾಗಲೆಲ್ಲ "ಕೃಷ್ಣಾ ಮೇಲ್ದಂಡೆ ಯೋಜನೆ" ಎಂಬ ಗಜಗರ್ಭದ ಯೋಜನೆಯನ್ನು ಮಾತ್ರ ನೆನಪಿಸಿಕೊಳ್ಳುವ ಈ ರಾಜಕೀಯ ಧುರೀಣರು ಒಮ್ಮೆಯೂ ಭೀಮಾ ಏತ ನೀರಾವರಿಯಂಥ ಸಣ್ಣ ಪುಟ್ಟ ಯೋಜನೆಗಳತ್ತ ಕಣ್ಣು ಹಾಯಿಸುವುದಿಲ್ಲ. ಅದಕ್ಕೆ ಈ ಯೋಜನೆಗಳ ಮೂಲಕ ತಮಗೆ ರಾಜ್ಯಮಟ್ಟದ ಪ್ರಚಾರವೂ ಸಿಗುವುದಿಲ್ಲ ಎಂಬ ಕಾರಣವೂ ಇರಬಹುದು.

ಭೀಮಾ ಏತ ನೀರಾವರಿ ಯೋಜನೆ ಕಾರ್ಯಗತಗೊಂಡರೆ ಗುಲಬರ್ಗಾ ಜಿಲ್ಲೆಯ ಅಫಜಲಪುರ ತಾಲ್ಲೂಕು ಒಂದರಲ್ಲಿಯೇ ಸುಮಾರು ೪೩ ಹಳ್ಳಿಗಳಿಗೆ ೩೦೦೦ ಎಕರೆಗೂ ಹೆಚ್ಚಿನ ನೀರಾವರಿ ಸೌಲಭ್ಯ ಒದಗುವುದು. ಈ ಕಾರಣಕ್ಕಾಗಿಯೇ ಅಫಜಲಪುರ, ಜೇವರ್ಗಿ ತಾಲ್ಲೂಕುಗಳಲ್ಲಿ ಸೊನ್ನ, ಇಟಗಿ, ಅಫಜಲಪುರ ಗ್ರಾಮಗಳ ಹತ್ತಿರ ಮೂರು ಬ್ರಿಜ್-ಕಮ್-ಬ್ಯಾರೇಜ್‌ಗಳನ್ನು ನಿರ್ಮಿಸಲು ನಿರ್ಧರಿಸಲಾಯಿತು. ಎಸ್. ಬಂಗಾರಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ಈ ಮೂರೂ ಬ್ರಿಜ್-ಕಮ್-ಬ್ಯಾರೇಜ್‌ಗಳ ಭೂಮಿಪೂಜೆ ನೆರವೇರಿಸಿದರು. ಆದರೆ ಇದುವರೆಗೆ ಒಂದು ಅಡಿಯಷ್ಟೂ ಎತ್ತರಕ್ಕೆ ಈ ಬ್ಯಾರೇಜುಗಳು ಮೇಲೆ ಎದ್ದಿಲ್ಲ. ಎಚ್. ಡಿ. ದೇವೇಗೌಡರು ಪ್ರಧಾನಿಯಾಗಿದ್ದಾಗ ಇದೇ ಬ್ಯಾರೇಜುಗಳಿಗೆ ಮತ್ತೊಮ್ಮೆ ಕಾಮಗಾರಿ ಕಾರ್ಯಾರಂಭ ಮಾಡಲು ನೂರಾರು ಕಾರು, ಹೆಲಿಕಾಪ್ಟರುಗಳ ಮೂಲಕ ದಿಲ್ಲಿಯಿಂದ ಅಫಜಲಪುರಕ್ಕೆ ಹಾರಿಬಂದರು. ಆಗಲೂ ಕೆಲಸ ಆರಂಭವಾಗಲಿಲ್ಲ. ಆದರೆ




ಪ್ರಧಾನಿಗಳ ಆಗಮನಕ್ಕೆ ಆದ ಖರ್ಚಿನಷ್ಟೇ ಹಣ ಖರ್ಚು ಮಾಡಿ ಅಫಜಲಪುರದ ಸುತ್ತಮುತ್ತ ಭೀಮಾನದಿಗೆ ೧೩ ನೀರು ಎತ್ತುವ ಹೈಪವರ್ ಮೋಟಾರ್ ಪಂಪ್‌ಸೆಟ್ ಕೂಡಿಸಲಾಯಿತು. ಇಂದು ಸಂಪೂರ್ಣವಾಗಿ ನಿಂತುಹೋಗಿರುವ ಈ ಹೈಪವರ್ ಪಂಪ್‌ಸೆಟ್‌ಗಳ ವಿದ್ಯುತ್ ಬಿಲ್ ಕಟ್ಟುವ ಹೊರೆಯನ್ನು ಹೊರುವುದು ಬಿಟ್ಟರೆ ಸರಕಾರದಿಂದ ಬೇರೆ ಕೆಲಸ ಆಗಿಲ್ಲ.

ಜನತಾದಳ ಸರಕಾರದ ಆಡಳಿತದಲ್ಲಿ ವಿರೋಧಪಕ್ಷದ ನಾಯಕರಾಗಿದ್ದ ಎಚ್. ಕೆ. ಪಾಟೀಲರು ಬರೆದ "ಕೃಷ್ಣೆಯ ಕಣ್ಣೀರು" ಎಂಬ ಪುಸ್ತಕ ಭಾರೀ ಪ್ರಚಾರ ಪಡೆದು ಇನ್ನೇನು ಕೃಷ್ಣಾ ಕೊಳ್ಳದ ಯೋಜನೆಗಳು ಕಾಂಗ್ರೆಸ್ ಸರ್ಕಾರ ಬಂದೊಡನೆ ಪೂರ್ತಿಯಾಗೇಬಿಡುತ್ತವೆ ಎಂಬ ಭಾವನೆ ಮೂಡಿಸಿತ್ತು. ಆದರೆ ಪುಸ್ತಕ ಬರೆಯಲು ತೋರಿದಷ್ಟು ನಿಷ್ಪಕ್ಷಪಾತ ಧೋರಣೆಯನ್ನು ಇಂದಿನ ಭಾರಿ ನೀರಾವರಿ ಸಚಿವರು ಭೀಮಾ ಏತ ನೀರಾವರಿ ಯೋಜನೆಯನ್ನು ಕಾರ್ಯಗತಗೊಳಿಸಲು ತೋರಲಿಲ್ಲ. ಎಸ್. ಬಂಗಾರಪ್ಪನವರ ಮುಖ್ಯಮಂತ್ರಿತ್ವದಲ್ಲಿ ಭೀಮಾ ಮತ್ತು ಅಮರ್ಜಾ ಏತ ನೀರಾವರಿಗಾಗಿ ಹಣ ಒದಗಿಸಲಾಯಿತು. ಆಳಂದದಲ್ಲಿ ಸಣ್ಣ ನೀರಾವರಿ ಇಲಾಖೆಯ ಉಪವಿಭಾಗೀಯ ಕಾರ್ಯಾಲಯ ತೆರೆದು ಸಿಬ್ಬಂದಿ ಮತ್ತು ಇಲಾಖಾ ವಸತಿ ಸಮುಚ್ಚಯಗಳನ್ನು ಕೂಡ ನಿರ್ಮಿಸಲಾಯಿತು. ಆದರೆ ಬಂಗಾರಪ್ಪನವರ ನಂತರ ಮುಖ್ಯಮಂತ್ರಿಗಳಾದ ವೀರಪ್ಪ ಮೊಯಿಲಿಯವರ ಆಡಳಿತದಲ್ಲಿ ಸ್ಥಗಿತಗೊಂಡ ಭೀಮಾ ಏತ ನೀರಾವರಿ ಕಾಮಗಾರಿಗಳು ಇಂದಿಗೂ ಪುನರಾರಂಭಗೊಳ್ಳುವ ಲಕ್ಷಣಗಳಿಲ್ಲ.

ಹೆಚ್ಚು ಕಡಿಮೆ ಇದೇ ಸಮಯದಲ್ಲಿ ಆರಂಭವಾದ ಭೀಮಾನದಿಯ ಉಪನದಿಯಾದ "ಅಮರ್ಜಾ" ನದಿಗೆ ಕಾರ್ಯಗತಗೊಳಿಸಿರುವ ಅಮರ್ಜಾ ಏತ ನೀರಾವರಿ ಯೋಜನೆ ಮುಗಿಯುವ ಹಂತ ತಲುಪಿದ್ದು ಇದರಿಂದ ಆಳಂದ ತಾಲ್ಲೂಕಿಗೆ ನೀರಿನ ಸೌಲಭ್ಯ ಒದಗಲಿದೆ. ಆದರೆ ರಾಯಚೂರು, ಗುಲಬರ್ಗಾ, ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿಗೆ ವರದಾನವಾಗಲಿರುವ ಭೀಮಾ ಏತ ನೀರಾವರಿ ಯೋಜನೆಗೆ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಯಿಂದ ಹಣ ಒದಗಿಸಿಯಾದರೂ ಯೋಜನೆ ಕಾರ್ಯಗತಗೊಳಿಸಬಹುದಿತ್ತು. ಆದರೆ ಹೈದರಾಬಾದ್ ಕರ್ನಾಟಕದ ರಾಜಕಾರಣಿಗಳ ಚದುರಂಗದಾಟದ ದಾಳವಾಗಿರುವ ಎಚ್. ಕೆ. ಡಿ. ಬಿ. ಆಡಳಿತ ಪಕ್ಷದ ಕಾರ್ಯಕರ್ತರನ್ನು ಸಂತೈಸಲು ಮಾತ್ರ ಕಾರ್ಯಗತವಾಗುವ ಯೋಜನೆಗಳನ್ನು ಹಮ್ಮಿಕೊಂಡು ಜರುಗಿಸುತ್ತಿರುವುದು ಸಾರ್ವಜನಿಕ ಹಣದ ದುರುಪಯೋಗಕ್ಕೆ ಸಾಕ್ಷಿಯಾಗಿದೆ.

ಇಂತಹ ಅದೆಷ್ಟೋ ಲೋಪಗಳ ನಡುವೆ ಇದೀಗ ಭೀಮಾನದಿಗೆ ಮಹಾರಾಷ್ಟ್ರ ಸರಕಾರ ಎರಡುನೂರು ಟಿ.ಎಂ.ಸಿ. ನೀರು ಬಿಡಲು ತಾತ್ವಿಕವಾಗಿ ಒಪ್ಪಿದೆ. ಆದರೆ ಇದುವರೆಗೆ ನೀರು ಮಾತ್ರ ಹರಿದಿಲ್ಲ. ಈ ಸಲದ ಬೇಸಿಗೆಗೆ ಪರಿಹಾರ ನೀಡಬಲ್ಲ ಈ ವ್ಯವಸ್ಥೆ ಒಂದು ವರ್ಷಕ್ಕೆ ಮಾತ್ರ. ಮುಂದೆ ಮತ್ತೆ ಅದೇ ಪಾಡು. ಒಟ್ಟಿನಲ್ಲಿ ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡಲು ತೊಡಗುವ ಈ ಕ್ರಮದಿಂದ ಶಾಶ್ವತ ಪರಿಹಾರ ಮಾತ್ರ ಆಗಲಾರದು.

**ಡಿ. ಎಂ. ನದಾಫ**
ರೇವಣಸಿದ್ದೇಶ್ವರ ಕಾಲೋನಿ, ಅಫಜಲಪುರ - ೫೮೫ ೩೦೧, ಗುಲಬರ್ಗಾ ಜಿಲ್ಲೆ

# ನಡುಗಿದ ಭೂಮಿ, ಒಡೆದ ಹೃದಯಗಳು, ಒಡೆದೆಬ್ಬಿಸಬೇಕಾದ ಸರ್ಕಾರಗಳು

*ಒಂದು ದೇಶ ಅತ್ಯಂತ ತೀವ್ರವಾದ ಬಿಕ್ಕಟ್ಟನ್ನೂ, ಸಂಕಟವನ್ನೂ ಎದುರಿಸುವ ಸಂದರ್ಭದಲ್ಲಿ ಬಹಳ ವಿರುದ್ಧಾತ್ಮಕ ವಿದ್ಯಮಾನಗಳು ಅಲ್ಲಿ ಕಂಡುಬರುತ್ತವೆ. ಎಲ್ಲಾ ಮಾನವೀಯ ಮೌಲ್ಯಗಳಿಗೂ ತಿಲಾಂಜಲಿ ಕೊಟ್ಟಂಥ ಲಜ್ಜೆಗೇಡಿ, ರಾಕ್ಷಸೀ ವರ್ತನೆ ಅಲ್ಲಿ ನಗ್ನವಾಗಿ ನರ್ತಿಸುತ್ತಿರುತ್ತದೆ. ಆದರೆ ಅದೇ ಸಮಯದಲ್ಲಿ ಅದನ್ನು ಧಿಕ್ಕರಿಸುತ್ತಾ, ಪ್ರತಿರೋಧಿಸುತ್ತಾ ಉದಾತ್ತ ಮಾನವೀಯ ಮೌಲ್ಯಗಳು ಅಲ್ಲಿ ವಿಜೃಂಭಿಸುತ್ತವೆ. ಗುಜರಾತ್‌ನ ಭೂಕಂಪ ಈ ಇತಿಹಾಸದ ಪಾಠವನ್ನು ನಮಗೆ ಮತ್ತೆ ನೆನಪಿಸಿದೆ.*

*ಒಂದೆಡೆ ಅಮೂಲ್ಯ ಜೀವಗಳನ್ನು ಉಳಿಸಲು ಪ್ರತಿ ನಿಮಿಷವೂ ಮುಖ್ಯವಾಗಿರುವಾಗ ನಿಷ್ಕ್ರಿಯತೆಯ ಗರ ಬಡಿದ ಗುಜರಾತ್‌ನ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳು. ಇನ್ನೊಂದೆಡೆ ಭೂಕಂಪದ ಸುದ್ದಿ ಕಿವಿಗೆ ಬಿದ್ದೊಡನೆ ತಮ್ಮ ಸಮೀಪ ಸಂಬಂಧಿಗಳೇ ಕಟ್ಟಡದ ಅಡಿ ಇದ್ದಾರೇನೋ ಎಂಬಂತೆ ಸ್ಪಂದಿಸಿದ ಜನಸಾಮಾನ್ಯರು. ಒಂದೆಡೆ ಅಂಥ ವಿಷಮ ಸನ್ನಿವೇಶದಲ್ಲಿಯೂ ಕ್ಷುದ್ರ ರಾಜಕೀಯದ, ಅಧಿಕಾರ, ಜಾತಿ-ಕೋಮುಗಳ ಲೆಕ್ಕ ಹಾಕುವ ಆಳುವ ಜನ. ಇನ್ನೊಂದೆಡೆ ತಮ್ಮನ್ನು ಆವರಿಸಿರುವ ಕಷ್ಟ ಕಾರ್ಪಣ್ಯಗಳನ್ನು ಮರೆತು ಮತ್ತೊಬ್ಬ ದುಃಖಿಯ ಕಡೆಗೆ ನೆರವಿನ ಕೈಚಾಚಬಲ್ಲ ಹೃದಯವಂತ ಜನ. ಒಂದೆಡೆ ವ್ಯವಸ್ಥಿತವಾಗಿ ಕೆಲಸ ಮಾಡಬೇಕಿದ್ದ ಜನ ವಿಪತ್ತಿನ ಎದುರು ಕಕ್ಕಾಬಿಕ್ಕಿಯಾಗಿರುವುದು, ನಿರ್ವೀರ್ಯರಾಗಿರುವುದು. ಇನ್ನೊಂದೆಡೆ ವಿಪತ್ತಿನಿಂದಲೇ ಸಂಘಟಿತರಾಗಿ ಅಸಾಮಾನ್ಯ ಮುಂದೊಡಗಿನಿಂದ ಕೆಲಸ ಮಾಡಬಲ್ಲ ಜನಸಮುದಾಯ.*

*ಸೋಷಲಿಸ್ಟ್ ಯೂನಿಟಿ ಸೆಂಟರ್ ಆಫ್ ಇಂಡಿಯಾ ಭಚಾವ್‌ನಲ್ಲಿ ಒಂದು ವೈದ್ಯಕೀಯ ಚಿಕಿತ್ಸಾ ಕೇಂದ್ರವನ್ನೂ ಪರಿಹಾರ ಕೇಂದ್ರವನ್ನೂ ನಡೆಸುತ್ತಿದೆ. ಕರ್ನಾಟಕದಿಂದ ಹೋದ ವೈದ್ಯಕೀಯ ತಂಡ ಅಲ್ಲಿ ಕೆಲಸ ಮಾಡಿದೆ. ಅಲ್ಲಿನ ಅನುಭವದ ವಿವರಗಳನ್ನು ಲೇಖಕರು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ.*

**ಡಾ॥ ಬಿ. ಆರ್. ಮಂಜುನಾಥ್**

**ಭೂ**ಕಂಪದ ವಿವರಗಳು ಮಾಧ್ಯಮಗಳ ಮೂಲಕ ಬಿತ್ತರಿಸಲ್ಪಡುತ್ತಿದ್ದಂತೆ ಎಲ್ಲೆಡೆ ಕರ್ನಾಟಕದ ಜನತೆ ಬಹಳ ಕಳಕಳಿಯಿಂದ ಪ್ರತಿಕ್ರಿಯಿಸಲಾರಂಭಿಸಿದರು. ನಾವೂ ಸಹ ನಮ್ಮ ಪರಿಹಾರ ಸಾಮಗ್ರಿಗಳ ಸಂಗ್ರಹವನ್ನು ಆರಂಭಿಸಿದೆವು. ರಸ್ತೆಗಳಲ್ಲಿ, ಸಿಗ್ನಲ್ ಪಾಯಿಂಟ್‌ಗಳಲ್ಲಿ, ಕಛೇರಿಗಳಲ್ಲಿ, ಬಡಾವಣೆಗಳಲ್ಲಿ ಎಷ್ಟೊಂದು ಭಾವುಕತೆಯಿಂದ ಜನ ಸ್ಪಂದಿಸಿದರಲ್ಲಾ!

**ಬೆಂಗಳೂರಿನ ಎನ್. ಆರ್. ಕಾಲೋನಿಯಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರು, ಖ್ಯಾತ ಲೇಖಕರಾದ ವ್ಯಾಸರಾಯ ಬಲ್ಲಾಳರು, ಎಸ್‌ಯುಸಿಐನ ರಾಜ್ಯ ಕಾರ್ಯದರ್ಶಿ ಕೆ. ರಾಧಾಕೃಷ್ಣ, ಸರ್ವೋದಯ ನಾಯಕರಾದ ಶ್ರೀ ಸತ್ಯವ್ರತ ಮತ್ತು ಲಕ್ಷ್ಮೀಬೇನ್ ಮುಂತಾದವರು ನಿಧಿ ಸಂಗ್ರಹದಲ್ಲಿ ಭಾಗವಹಿಸಿದ್ದುದು ಒಂದು ಸ್ಫೂರ್ತಿದಾಯಕ ಅಂಶ.**

ಗಾಂಧಿಬಜಾರಿನಲ್ಲಿ ನಿಧಿ ಸಂಗ್ರಹ ಮಾಡುತ್ತಿದ್ದಾಗ ಹಲವಾರು ಜನ ಕಡುಬಡವರಾದ ರಸ್ತೆ ಬದಿ ವ್ಯಾಪಾರಿಗಳು ತಾವಾಗಿ ಬಂದು ಟೆಂಪೋದಲ್ಲಿ ಇದ್ದ ಸಂಗಾತಿಗಳಿಗೆ ಹಣ ನೀಡಿ ಹೋದರು. ಮತ್ತೆ ತಾವು ಮಾಜಿ ಪ್ರಧಾನಿಗಳು ಬಂದಾಗ ಕೂಡ ಹಣ ನೀಡಿರಲಿಲ್ಲವೆಂದೂ, ಯಾವುದು ಪ್ರಾಮಾಣಿಕ ಪ್ರಯತ್ನ ಎನಿಸುತ್ತದೋ ಅದಕ್ಕೆ ಮಾತ್ರ ಬೆಂಬಲಿಸುತ್ತೇವೆಂದೂ ಹೇಳಿ ಹೋಗಲು ಅವರು ಮರೆಯಲಿಲ್ಲ! ಜಯನಗರದ ಅಂಗಡಿ ಬೀದಿಯಲ್ಲಿ ಎರಡು ಬಟ್ಟೆಯಂಗಡಿಯವರು ಚಲಿಸುತ್ತಿದ್ದ ಟೆಂಪೋವನ್ನು ನಿಲ್ಲಿಸಿ ಹೊಸಬಟ್ಟೆಗಳು ತುಂಬಿದ ಮಜಬೂತಾದ ಪೆಟ್ಟಿಗೆಗಳನ್ನು ಕೊಟ್ಟು ಹೋದರು. ರಸ್ತೆಯಲ್ಲೇ ಚೆಕ್ ಬರೆದು ನಮ್ಮ ಕೈಗಿಟ್ಟು ಹೋದವರಿದ್ದಾರೆ. ಜಯನಗರದ ಮನೆಯೊಂದರಲ್ಲಿ ಒಬ್ಬ ವೃದ್ಧೆ ಅಳುತ್ತಾ ಎಲ್ಲ ಹುಂಡಿಗಳಿಗೂ ನೋಟುಗಳನ್ನು ತುರುಕಿಹೋದರು. ಎಷ್ಟೊಂದು ಎಳೆಯರು ಬಂದು ನಿಧಿ ಸಂಗ್ರಹದ ಕೆಲಸದಲ್ಲಿ ಭಾಗವಹಿಸಿದರಲ್ಲ!

**ಅವರಿಗೆ ಇಂಥ ಸಾಮಾಜಿಕ ಚಟುವಟಿಕೆಗಳ ಅನುಭವ ಸಹ ಇಲ್ಲ. ಆದರೆ ವಯಸ್ಸಾದವರು, ಗೃಹಿಣಿಯರು ಎಲ್ಲರೂ ತಮ್ಮ ಹಿಂಜರಿಕೆ, ಸಂಕೋಚ, ದೈನಂದಿನ ಕಷ್ಟಗಳು ಎಲ್ಲವನ್ನೂ ಬದಿಗೊತ್ತಿ ಬಂದರಲ್ಲ!** ಇಂಥ ಘಟನೆಗಳೇ ಅಲ್ಲವೇ ನಮ್ಮಲ್ಲಿ ಜನಸಾಮಾನ್ಯರ ಮೌಲ್ಯಪ್ರಜ್ಞೆ, ಹೃದಯವೈಶಾಲ್ಯಗಳ ಬಗ್ಗೆ ಮತ್ತೆ ಮತ್ತೆ ನಂಬುಗೆ ಹುಟ್ಟಿಸುವುದು.

**ಇಂಥ ಪ್ರತಿಕ್ರಿಯೆಯಿಂದಾಗಿಯೇ ನಾವು ಮೂರೂವರೆ ಲಕ್ಷ ರೂ. ನಗದನ್ನೂ, ಲಕ್ಷಾಂತರ ರೂ. ಬೆಲೆಬಾಳುವ ಔಷಧಗಳನ್ನು, ಉಣ್ಣೆ ಬಟ್ಟೆ-ಬ್ಲಾಂಕೆಟ್‌ಗಳನ್ನು ಗುಜರಾತಿಗೆ ಕಳಿಸಲು ಸಾಧ್ಯವಾಯಿತು.**

### ಹೂ ಬಿಟ್ಟ ಮುತ್ತುಗದ ಮರಗಳು

ಇದೇ ಸಮಯದಲ್ಲಿ ಆಲ್ ಇಂಡಿಯಾ ಡೆಮಾಕ್ರೆಟಿಕ್ ಸ್ಟೂಡೆಂಟ್ಸ್ ಆರ್ಗನೈಸೇಶನ್‌ನ ಸಂಗಾತಿಗಳು ಗುಜರಾತ್‌ಗೆ ಪರಿಹಾರ ಕಾರ್ಯಕ್ಕಾಗಿ ಸ್ವಯಂಸೇವಕರನ್ನು ಕಳಿಸಲಾಗುವುದೆಂದು ಪತ್ರಿಕಾ ಹೇಳಿಕೆ ನೀಡಿದರು. ಅದರ ಬೆನ್ನಹಿಂದೆಯೇ ವಿಪರೀತವಾಗಿ 'ನಮ್ಮನ್ನು ಕಳಿಸಿ' ಎಂಬ ಮನವಿಗಳು ಬರಲಾರಂಭಿಸಿದವು. ಅವರಲ್ಲಿ ವೈದ್ಯಕೀಯ ವಿದ್ಯಾರ್ಥಿಗಳು, ವೈದ್ಯರೂ ಸಹ ಇದ್ದರು. ೨೭ ವೈದ್ಯಕೀಯ ವಿದ್ಯಾರ್ಥಿಗಳನ್ನು ಕರೆದುಕೊಂಡು ಎಐಡಿಎಸ್‌ಒದ ರಾಜ್ಯ ಕಾರ್ಯದರ್ಶಿ ವಿ. ಎನ್. ರಾಜಶೇಖರ ಗುಜರಾತ್‌ಗೆ ಹೋದರು. ನಂತರ ನಾನು ಹದಿನಾರು ತಜ್ಞ ವೈದ್ಯರ ಜೊತೆ ಹೊರಟೆ. ರಾತ್ರಿ ಹತ್ತೂವರೆಗೆ ನಮ್ಮ ರೈಲು ಬೆಂಗಳೂರು ಬಿಟ್ಟಿತು.

ಬೆಳಗಾಗ ಹುಬ್ಬಳ್ಳಿ ಬರುವುದಕ್ಕೆ ಮುನ್ನ ನನಗೆ ಎಚ್ಚರವಾಯಿತು. ಹುಬ್ಬಳ್ಳಿಯಲ್ಲಿ ಬಳ್ಳಾರಿಯ ವೈದ್ಯರು ನಮ್ಮೊಡನೆ ಸೇರಿದರು. ಧಾರವಾಡದಲ್ಲಿ ಭೇಟಿಯಾಗಲು ಬಂದ ಸಂಗಾತಿಗಳು ತಿಂಡಿಯ ಪೊಟ್ಟಣ ಕೊಟ್ಟು ಶುಭ ಹಾರೈಸಿ ಹೋದರು. ರೈಲು ಲೋಂಡಾ ಕಡೆ ಚಲಿಸಲಾರಂಭಿಸಿತು. ನಾನು ನಮ್ಮೊಡನೆ ಹೊಸದಾಗಿ ಬಂದ ತರುಣ ವೈದ್ಯರ ಬಗ್ಗೆ ಯೋಚಿಸಲಾರಂಭಿಸಿದೆ.

ನಮ್ಮ ವಿದ್ಯಾರ್ಥಿ ಜೀವನದ ಸಮಯದಲ್ಲಿ ನಾವೆಲ್ಲಾ ಖ್ಯಾತ ವೈದ್ಯ ಹೋರಾಟಗಾರ ನಾರ್ಮನ್ ಬೆಥೂನ್‌ರಿಂದ ಬಹಳ ಪ್ರಭಾವಿತರಾಗಿದ್ದೆವು. ಸ್ಪೇನ್‌ನ ಅಂತರ್ಯುದ್ಧದಲ್ಲಿ, ಚೀನಾದ ಕ್ರಾಂತಿಯಲ್ಲಿ, ಯುದ್ಧಭೂಮಿಯಲ್ಲಿ ಮಿಂಚಿನಂತೆ ಚಲಿಸುತ್ತಾ, ಆಶಾವಾದದ ಬೆಳಕಿನ ಕಿರಣಗಳನ್ನು ಹೊಮ್ಮಿಸುತ್ತಾ ಜೀವತ್ಯಾಗ ಮಾಡಿದ ಧೀರ ವೈದ್ಯ ಆತ. ವೃತ್ತಿವಾದ, ಆತ್ಮಕೇಂದ್ರೀಯತೆ ಇವು ವೈದ್ಯಕೀಯ ವಿದ್ಯಾರ್ಥಿಗಳನ್ನು ಕಾಡುವ ಶನಿಗಳು. ಈ ಚಿಪ್ಪಿನ ಒಳಗೆ ಅಡಗಿ ಕುಳಿತಿರುವ ಅನರ್ಘ್ಯ ಮುತ್ತುಗಳೂ ಇರುತ್ತವೆ. ಚಿಪ್ಪನ್ನು ಸೀಳಿ ಅಂಥ ಮುತ್ತುಗಳನ್ನು ಹೊರತೆಗೆಯಲು ನಾವು ಬೆಥೂನ್, ಕೊಟ್ನಿಸ್, ಚೆ ಗೆವಾರ, ಚೆಖಾವ್ ಮುಂತಾದ ಮಾನವ ಪ್ರೇಮಿ ವೈದ್ಯರ ಬಗ್ಗೆ ಹೇಳುತ್ತಿದ್ದೆವು.

ನನಗೆ ಆ ತರುಣ ವೈದ್ಯರನ್ನು ನೋಡಿದಾಗ ಅದೆಲ್ಲಾ ನೆನಪಿಗೆ ಬಂತು. ನಾವು ಒಂದು ಸೇವೆಯ ಕಾರ್ಯಕ್ಕೆ ಹೊರಟಿದ್ದೇವೆ. ಬೆಥೂನ್‌ರ ಸಾಹಸದೊಂದಿಗೆ ನಮ್ಮ ಹೋಲಿಕೆ ಎಂಬುದು ದುರಹಂಕಾರದ, ಉತ್ಪ್ರೇಕ್ಷೆಯ ಮಾತಾಗುತ್ತದೆ. ಆದರೂ ಒಂದು ಮಾತನ್ನು ಮರೆಯಲಾಗದು. ಭೂಕಂಪವಾದ ಪ್ರದೇಶದಲ್ಲಿ ಈಗಲೂ ಅಪಾಯಗಳಿವೆ. ಕಂಪನದ ಅಪಾಯವಿದೆ. ಶುದ್ಧವಾದ ನೀರು ಸಿಗದೆ ಸಾಂಕ್ರಾಮಿಕ ರೋಗಗಳ ಅಪಾಯವಿದೆ, ವಸತಿ ಇಲ್ಲ, ಊಟ, ತಿಂಡಿ ಇಲ್ಲ, ಚಹಾ ಇತ್ಯಾದಿಯೆಲ್ಲಾ ಸಿಗಲಾರದ ಭೋಗಗಳು! ಇದನ್ನೆಲ್ಲಾ ಆ ವೈದ್ಯರಿಗೆ ತಿಳಿಸಿಯಾಗಿತ್ತು. ಆದರೂ ಅವರು ಬಂದಿದ್ದಾರೆ. ಅವರೆಲ್ಲಾ ತಮ್ಮ ತಂದೆತಾಯಿಯರ ಪಾಲಿನ ಅಮೂಲ್ಯ ಆಸ್ತಿಗಳು. ಅವರಲ್ಲಿ ಯಾರೂ ಬೆಥೂನ್, ಕೊಟ್ನಿಸ್ ಆಗದೆ ಹೋಗಬಹುದು. ಆದರೂ ಅವರು ವ್ಯಕ್ತಪಡಿಸಿರುವ ಉನ್ನತ ಮೌಲ್ಯ ಪ್ರಜ್ಞೆಯನ್ನು ನಾನು ಹೇಗೆ ಕಡೆಗಣಿಸಲಿ? ಅವರಲ್ಲಿ ಕೆಲವರು ಕೇವಲ ರೋಚಕ ಸಾಹಸದ ಹುಡುಕಾಟದಲ್ಲಿರಬಹುದು. ಕಠಿಣ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೆ ಹೋಗಬಹುದು. ಉನ್ನತ ರಾಜಕೀಯ ತಿಳಿವಳಿಕೆಯನ್ನು ಪಡೆಯದೆ ಹೋಗಬಹುದು. ಆದರೂ ಅವರು ಈ ಕ್ಷಣದಲ್ಲಿ ಪ್ರದರ್ಶಿಸಿರುವ ಗುಣಾತ್ಮಕ ಅಂಶಗಳನ್ನು ನಾವು ಗುರುತಿಸಲೇಬೇಕು, ಪೋಷಿಸಲೇಬೇಕು.



*ರಟ್ಟಿನ ಡಬ್ಬಿಗಳಂತೆ ಮುರಿದುಬಿದ್ದಿರುವ ಸೌಧಗಳು*

ನಾನು ಬೇರೆ ಬೇರೆ ಮಾತುಕತೆಗಳಲ್ಲಿ ತೊಡಗಿದ್ದ ಎಳೆಯ ವೈದ್ಯರಿಬ್ಬರನ್ನು ಗಮನಿಸಿದೆ. 'ಯಾವ ಮೋಹನ ಮುರಲಿ ಇವರನ್ನು ದೂರ ತೀರಕೆ ಕರೆಯಿತು' ಎನಿಸಿತು. 'ಮಾರುಕಟ್ಟೆ ಮೌಲ್ಯವೇ ಜೀವನ ಮೌಲ್ಯ,' 'ಸ್ವಾರ್ಥವೇ ಆದರ್ಶ,' 'ತ್ಯಾಗ ಬಲಿದಾನಗಳ ಕಾಲ ಮುಗಿಯಿತು' ಇತ್ಯಾದಿ ಲೆಕ್ಚರ್ ಹೊಡೆಯುವ ಇಂದಿನ ದಿನಗಳಲ್ಲಿ ಸಾಮಾನ್ಯರಲ್ಲೂ ಕಂಡು ಬರುವ ಅಸಾಮಾನ್ಯ ಗುಣಗಳನ್ನು ನಾವು ಗುರುತಿಸದಿದ್ದರೆ ನಮಗೆ ಜೀವನೋತ್ಸಾಹ ಎಲ್ಲಿಂದ ಬರುತ್ತದೆ ?

ಕಿಟಕಿಯಿಂದ ಹೊರಗೆ ನೋಡಿದೆ. ಪಶ್ಚಿಮ ಘಟ್ಟದ ಕಾಡುಗಳಲ್ಲಿ ಮುತ್ತುಗದ ಮರಗಳು ಹೂ ಬಿಟ್ಟಿದ್ದವು. ಹಳೆಯ ಮಹಾಭಾರತದ ವರ್ಣನೆಯಲ್ಲಿ ಯುದ್ಧಭೂಮಿಯಲ್ಲಿ ವೀರರನ್ನು ವರ್ಣಿಸುವಾಗ 'ಹೂ ಬಿಟ್ಟ ಮುತ್ತುಗದ ಮರಗಳು' ಎಂಬ ಹೋಲಿಕೆ ಕಾಣುತ್ತದೆ. ಗುಜರಾತಿನಲ್ಲೂ ಭಾರತದ ವಿವಿಧ ಭಾಗಗಳಲ್ಲೂ ಅಸಂಖ್ಯಾತ ಜನಸಾಮಾನ್ಯರ ಹೋರಾಟಗಳಲ್ಲಿ ಇಂಥ ಮುತ್ತುಗದ ಮರಗಳು ಅರಳುತ್ತಿರುತ್ತವೆ. ಒಂದು ದಿನ ಇಡಿಯ ಕಾಡೇ ಅಂಥ ಮರಗಳಿಂದ ತುಂಬಿಹೋಗುತ್ತದೆ.

ಯಾರಿಗೂ ಇದರ ಬಗ್ಗೆ ಎಳ್ಳಷ್ಟೂ ಸಂಶಯ ಬೇಡ.

**ಓಯಸಿಸ್‌ನಂಥ ಹೃದಯಗಳು**

ಮುಂಬೈನಲ್ಲಿ ನಮ್ಮ ಸಂಗಾತಿಗಳು ರೈಲ್ವೆ ನಿಲ್ದಾಣಕ್ಕೇ ಬಂದು ಭೇಟಿಯಾದರು. ಅವರು ಕೊಟ್ಟ ತಿಂಡಿ ಮತ್ತು ಚಹಾ ನಮ್ಮ ಆಯಾಸವನ್ನು ಪರಿಹರಿಸಿತು. ಅವರ ಶುಭ ಹಾರೈಕೆ ನಮ್ಮ ಬೆಂಗಾವಲಾಗಿತ್ತು.

ಅಹಮದಾಬಾದ್‌ನಲ್ಲಿ ರೈಲಿನಿಂದ ಇಳಿಯುವ ವೇಳೆಗೆ ಬಂದಿದ್ದ ಸಂಗಾತಿಗಳು ನಮ್ಮ ಸ್ನಾನ, ಊಟಗಳ ವ್ಯವಸ್ಥೆ ಮಾಡಿದ್ದರು. ಅಲ್ಲಿಂದ ಎರಡು ಜೀಪುಗಳಲ್ಲಿ ನಾವು ಇಬ್ಬರು ಮಾರ್ಗದರ್ಶಕ ಸಂಗಾತಿಗಳೊಂದಿಗೆ ೩೨೪ ಕಿ.ಮೀ. ದೂರದ ಭಚಾವ್ ಎಂಬ ಪಟ್ಟಣಕ್ಕೆ ಹೊರಟೆವು. ಭಚಾವ್ ಭುಜ್(ಕಛ್‌ಭುಜ್) ಜಿಲ್ಲೆಯಲ್ಲಿದೆ. ಇಲ್ಲಿನ ನೆಲ, ಹವಾಮಾನ ಎಲ್ಲವೂ ಮರುಭೂಮಿಗೆ ಹತ್ತಿರವಾದ ಹೋಲಿಕೆ ಇರುವಂಥವು.

ಮಾರ್ಗಮಧ್ಯದಲ್ಲಿ ಎರಡು ಜೀಪುಗಳಲ್ಲಿ ಒಂದು ಕೆಟ್ಟುಹೋಯಿತು. ಹೇಗೋ ರಿಪೇರಿ ಮಾಡಿಕೊಳ್ಳುವುದು, ಮುಂದೆ ಸಾಗುವುದು, ಹೀಗೆ ಸ್ವಲ್ಪ ಹಾದಿ ಕಳೆಯಿತು. ಈ ಸಮಸ್ಯೆಯಲ್ಲಿ ಸಿಕ್ಕಿದ ನಮ್ಮ ಚಾಲಕರು ಬಹಳ ಆತಂಕಕ್ಕೊಳಗಾದರು. ನಮಗೂ ಆತಂಕವೇ. ಕತ್ತಲಾಯಿತು. ಕಡೆಗೆ ಧ್ರಂಗಾಂಧ್ರ ಎಂಬ ಊರನ್ನು ತಲುಪಿದೆವು.

ಅಲ್ಲಿ ಒಂದು ಅಂಗಡಿಯ ಬಳಿ ನಿಂತಿದ್ದ ಪಡ್ಡೆ ಹುಡುಗರ ಗುಂಪನ್ನು ಜೀಪ್ ರಿಪೇರಿ ಮಾಡಬಲ್ಲ ಗರಾಜ್ ಎಲ್ಲಿದೆ ಎಂದು ವಿಚಾರಿಸಿದೆವು. ಅವರು ನಮಗೆ ಸಹಾಯ ಮಾಡಲು ತೋರಿದ ಆತುರ, ಪಟ್ಟ ಕಷ್ಟ ನಮ್ಮೊಳಗೆ ಕೆಲವರಲ್ಲಿ ಆತಂಕ ಹುಟ್ಟಿಸಿತು ! ಅವರು ಕರೆದುಕೊಂಡುಹೋದ ಮೆಕ್ಯಾನಿಕ್ ರಿಪೇರಿ ಮಾಡಿಕೊಟ್ಟರು. ಆದರೆ ಅದಕ್ಕೆ ಹಣ ತೆಗೆದುಕೊಳ್ಳಲು ಒಪ್ಪಲಿಲ್ಲ. ಇತ್ತ ಆ ಯುವಕರು ನಮ್ಮ ರಾತ್ರಿ ಊಟಕ್ಕೆ ವ್ಯವಸ್ಥೆ ಮಾಡಿದ್ದರು. ನಾವು ಊಟ ಮುಗಿಸಿದೆವು. ನಾವು ಪ್ರಯಾಣವನ್ನು ಮುಂದುವರೆಸ ಬೇಕಾಗಿತ್ತು. ಆದರೆ ನಮ್ಮ ಚಾಲಕರಿಗೆ ರಿಪೇರಿ ತೃಪ್ತಿಕರವಲ್ಲ ಎನಿಸಿತು. ಆಗ ಆ ಯುವಕರು ನಮಗಾಗಿ ಒಂದು ಹೊಸ ಜೀಪನ್ನು ಉಚಿತವಾಗಿ ವ್ಯವಸ್ಥೆ ಮಾಡಿದರು. ನಾವು ಮುಂದೆ ನಡೆದೆವು. ಆ ಯುವಕರು ನಮಗೆ ಮಾತ್ರ ನೆರವು ನೀಡುತ್ತಿರುವುದಲ್ಲ, ಅವರು ಆ ಊರಿನ ಮೂಲಕ ಹಾದುಹೋಗುವ ಎಲ್ಲ ರೈಲುಗಳ ಪ್ರಯಾಣಿಕರಿಗೂ ಆ ಭೂಕಂಪದ ದಿನಗಳಲ್ಲಿ ಉಚಿತವಾಗಿ ಊಟದ ಪೊಟ್ಟಣಗಳನ್ನು ಹಂಚುತ್ತಿದ್ದರು.

ಗುಜರಾತ್‌ನಲ್ಲಿ ನಾವು ಕೆಲಸ ಮಾಡಿದ ದಿನಗಳಲ್ಲಿ ಇಂಥ ಹೃದಯವಂತಿಕೆಯನ್ನು, ಸಹಕಾರವನ್ನು ನಾವು ಪದೇಪದೇ ನೋಡಿದೆವು. ಭಚಾವ್‌ನಿಂದ ೪೦ ಕಿ.ಮೀ. ದೂರದಲ್ಲಿರುವ ಗಾಂಧಿಧಾಮ ಎಂಬ ಊರಿಗೆ ನಾನು ಆಗಾಗ ಹೋಗಬೇಕಾಗಿ ಬಂತು. ಒಮ್ಮೆ ನಮ್ಮಲ್ಲಿ ಇಲ್ಲದ ಕೆಲವು ಔಷಧಗಳನ್ನು ಕೊಳ್ಳಲು ಗಾಂಧಿಧಾಮಕ್ಕೆ ಹೋಗಿದ್ದೆ. ಅಲ್ಲಿನ ಔಷಧಿ ಅಂಗಡಿಗಳಲ್ಲಿ ನಮಗೆ ಬಹಳ ಒಳ್ಳೆಯ ಸ್ವಾಗತ ದೊರೆಯಿತು. ಬೇರೆ ಬೇರೆ ಅಂಗಡಿಯ ಮಾಲಿಕರು ನಮ್ಮಿಂದ ಹಣ ತೆಗೆದುಕೊಳ್ಳದೆ ಔಷಧಗಳನ್ನು ಕೊಟ್ಟರು. ನಮ್ಮನ್ನು ಸತ್ಕರಿಸಿದರು. ನಾನು ಪ್ರಯಾಣ ಮಾಡಿದ ಬಡ ಲಾರಿ ಚಾಲಕರು ನನ್ನಿಂದ ಹಣ ಪಡೆಯಲಿಲ್ಲ. ಇಂತಹ ಅನುಭವಗಳಿಗೆ ಲೆಕ್ಕವಿಲ್ಲ.

ಟಾರು ರಸ್ತೆಗಳಲ್ಲಿ ಚಲಿಸುವಾಗಲೂ ಮರೀಚಿಕೆ ಕಾಣುವ ಆ ಬೆಂಗಾಡಿನಲ್ಲಿ ಮನಸ್ಸಿಗೆ ನೀರುಣಿಸಿದ ಓಯಸಿಸ್‌ಗಳು ಈ ಅನುಭವಗಳೇ.

**'ಭಚಾವ್' ಬಚಾವಾಗಲಿಲ್ಲ**

ಒಂದು ದೊಡ್ಡ ಮಣ್ಣಿನ ಗುಡ್ಡದ ಸುತ್ತುವರಿದು ಭಚಾವ್ ಊರಿದೆ. ವಾಸ್ತವವಾಗಿ ಈಗ ಇರುವುದು ಊರಲ್ಲ, ಊರಿನ ಅವಶೇಷಗಳು ಮಾತ್ರ. ಅಹಮದಾಬಾದಿನಿಂದ ಬಂದ ದೊಡ್ಡ ರಸ್ತೆ ಎಡಕ್ಕೆ ತಿರುಗಿ ಗಾಂಧಿಧಾಮವನ್ನು ಹಾದು ಕಾಂಡ್ಲಾ ಬಂದರನ್ನು ತಲುಪುತ್ತದೆ. ಇನ್ನೊಂದು ರಸ್ತೆ ನೇರವಾಗಿ ಸಾಗಿ ಭುಜ್ ಮುಟ್ಟುತ್ತದೆ.

ಭಚಾವ್ ರೈಲ್ವೇ ನಿಲ್ದಾಣದಲ್ಲಿ ಕಛೇರಿಯ ಕಟ್ಟಡ ನೆಲಕಚ್ಚಿದೆ. ಸ್ಟೇಶನ್ ಮಾಸ್ತರರು ಪ್ಲಾಟ್‌ಫಾರ್ಮಿನ ಮೇಲೆ ಒಂದು ಮೇಜು, ಕುರ್ಚಿಯೊಂದಿಗೆ ಕಛೇರಿ ಸ್ಥಾಪಿಸಿಕೊಂಡಿದ್ದಾರೆ. ಒಂದು ಹಾಳೆಯ ಪೆಟ್ಟಿಗೆಯಲ್ಲಿ ಟಿಕೇಟುಗಳಿವೆ.

ನಮ್ಮ ಶಿಬಿರದ ಆಜೂಬಾಜಿನಲ್ಲಿದ್ದ ಬಡವರ ಮನೆಗಳನ್ನು ಮೊದಲು ನೋಡಿದೆವು. ಅವೆಲ್ಲಾ ಸಂಪೂರ್ಣವಾಗಿ ನಾಶವಾಗಿದ್ದವು. ದೇವಸ್ಥಾನದ ಗೋಪುರಗಳು ನೆಲದ ಮೇಲೆ ಚಲ್ಲಾಪಿಲ್ಲಿಯಾಗಿದ್ದವು. ನಾವು ಅಲ್ಲಿ ಸಂಚರಿಸುತ್ತಿದ್ದಾಗಲೇ ಒಂದು ಮನೆಯಲ್ಲಿ ಭೂಕಂಪದಲ್ಲಿ ಏಟುಬಿದ್ದು ಅಸ್ವಸ್ಥರಾಗಿದ್ದ ಹಿರಿಯರೊಬ್ಬರು ಮೃತರಾದರು. ಅವರ ಮನೆಯ ಹೆಂಗಸರ ಮಕ್ಕಳ ಆರ್ತನಾದ ತೇಲಿಬಂತು. ನಾವು ಮುಂದೆ ಸಾಗಿದೆವು. ಅಲ್ಲಿ ಒಂದು ಬಡವರ ಮನೆಯ ಕಮಾನು ಬಿದ್ದಿತ್ತು. ಅದರಲ್ಲಿ ಒಂದು ಕಡೆ ಕೃಷ್ಣನ ಚಿತ್ರ. ಇನ್ನೊಂದೆಡೆ ಮುಸಲ್ಮಾನರ ಪವಿತ್ರಸ್ಥಳದ ಫೋಟೋ. ಭೂಕಂಪಕ್ಕೆ ಕೋಮು ತಾರತಮ್ಯವಿಲ್ಲ ಎಂದು ಆ ಮನೆ ಅಣಕಿಸುತ್ತಿತ್ತು. ಅಲ್ಲೇ ಇದ್ದ ಎಫ್‌ಸಿಐ ಗೋಡೌನು ಕುಸಿದುಬಿದ್ದಿತ್ತು. ಅದರ ತುಂಬಾ ಗೋಧಿಯ ಮೂಟೆಗಳಿದ್ದವು; ಕಳುವಾಗಿರಲಿಲ್ಲ! ಸುತ್ತಮುತ್ತಲಿನ ಮನೆಯ ಅವಶೇಷಗಳಿಂದ ಅವುಗಳ ಮಾಲಿಕರು ಕಿಟಕಿ, ಬಾಗಿಲು, ಕಬ್ಬಿಣಗಳನ್ನು ಒಂದು ಕಡೆ ಗುಡ್ಡೆ ಹಾಕಿಕೊಳ್ಳುತ್ತಿದ್ದರು.

ಮಧ್ಯಮವರ್ಗದ ಮನೆಗಳಿದ್ದ ಕಡೆ ಕಂಡ ದುರಂತ ಇನ್ನೊಂದು ಬಗೆಯದು. ಭದ್ರವಾದ ಕಾಂಕ್ರೀಟು ಮನೆಗಳು ಕಾಲಿನಲ್ಲಿ ತುಳಿದ ರಟ್ಟಿನ ಡಬ್ಬಿಗಳಂತೆ ಮುರಿದಿವೆ, ತಿರುಚಿವೆ, ಅಪ್ಪಚ್ಚಿಯಾಗಿವೆ. ಉದ್ದನೆಯ ಮಹಡಿ ಮೆಟ್ಟಿಲುಗಳು ಯದ್ವಾತದ್ವಾ ಸುತ್ತಿದ ಬಟ್ಟೆಯ ಟೇಪಿನಂತೆ ಮಡಿಚಿಕೊಂಡಿವೆ. ಮನೆಯ ಮುಂದೆ ನಿಂತಿದ್ದ ಕಾರುಗಳು ಗುರುತೂ ಸಿಗದಂತೆ ಚಪ್ಪಟೆಯಾಗಿವೆ. ಕೆಲವು ಮನೆಗಳಲ್ಲಿ ನೆಲದವರೆಗೂ ಬಂದು ನಿಂತಿರುವ ಚಾವಣಿಗಳಿಂದ ದೀಪದ ಗೊಂಚಲು, ಫ್ಯಾನುಗಳು ನೇತುಬಿದ್ದಿವೆ. ಎಷ್ಟೋ ಮನೆಗಳು ಅಂಗಳದಲ್ಲಿ ಹೆಣವನ್ನು ಸುಟ್ಟ ಗುರುತು, ಕರಕಲಾದ ಎಲುಬುಗಳು. ಮತ್ತೊಂದೆಡೆ ಒಂದು ಸುಂದರವಾದ ಮನೆ. ಅದು ಹಲವಾರು ಕಡೆ ಸೀಳಿಕೊಂಡಿದೆ. ಹೊರಗೆ ಉಯ್ಯಾಲೆಯೊಂದು ಗಾಳಿಗೆ ತೂಗುತ್ತಿದೆ. ಅಂಗಳದ ತುಂಬ ಗುಲಾಬಿ ಹೂ. ಮನೆಯ ಸುತ್ತಮುತ್ತ ಹೆಣ ಕೊಳೆಯುತ್ತಿರುವ ವಾಸನೆ. ದೊಡ್ಡ ದೊಡ್ಡ ಅಪಾರ್ಟ್‌ಮೆಂಟ್‌ಗಳು ಟೈಟಾನಿಕ್ ಚಿತ್ರದ ಹಡಗಿನಂತೆ ಮಧ್ಯದಲ್ಲಿ ಬಿರುಕುಬಿಟ್ಟು ಮೇಲಕ್ಕೆ ಜಿಗಿದಿವೆ. ಬಹಳಷ್ಟು

ಬಹುಮಹಡಿ ಕಟ್ಟಡಗಳಲ್ಲಿ ಮೊದಲನೆಯ, ಎರಡನೆಯ ಅಂತಸ್ತುಗಳು ಪುಡಿಪುಡಿಯಾಗಿ ಧೂಳಾಗಿವೆ.

ಭಚಾವ್ ಒಂದು ಭೀಭತ್ಸ ಊರು. ನನಗೆ ಬೇಂದ್ರೆಯವರ 'ಏಕೆ ಕುಣಿವೆ ತೂಕ ತಪ್ಪಿ ಸಾಕು ಕಾಲ ಭೈರವ' ಕವನದ ಸಾಲುಗಳು ನೆನಪಿಗೆ ಬಂದವು.

ಕೆಲವು ಮನೆಗಳ ಬಳಿ ಅವುಗಳಲ್ಲಿ ವಾಸವಾಗಿದ್ದವರು ಇದೀಗ ಮರಳಿ ಬಂದು ತಮ್ಮ ವಸ್ತುಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದರು. ಒಬ್ಬ ಮಧ್ಯವಯಸ್ಸಿನ ವ್ಯಕ್ತಿ ತಾವು ಹೆಕ್ಕಿ ತಂದ ವಸ್ತುಗಳನ್ನು ಒಂದು ಒಂಟೆಯ ಗಾಡಿಯಲ್ಲಿ ತೆಗೆದುಕೊಂಡು ಹೋಗಲೋಸುಗ ರಸ್ತೆಯಲ್ಲಿ ಜೋಡಿಸಿಟ್ಟುಕೊಳ್ಳುತ್ತಿದ್ದರು.

ನಮಗೆ ಇಂಥ ಸಂತ್ರಸ್ತರನ್ನು ದುರಂತದ ಬಗ್ಗೆ ಕೇಳಲು ಅಥವಾ ಅವರ ಎದುರು ಫೋಟೋ ತೆಗೆದುಕೊಳ್ಳಲು ಸಂಕೋಚವಾಗುತ್ತಿತ್ತು. ಆದರೆ ಅವರೇ ನಮ್ಮನ್ನು ಕರೆದು ಮಾತನಾಡಿಸಿದರು. ಅವರ ಹೆಸರು ದಿನೇಶ್. ಅವರ ಅಣ್ಣನ ಮಗ, ಮಗಳು ಮತ್ತು ತಾಯಿ ಕಟ್ಟಡದಡಿ ಸಿಲುಕಿ ಸತ್ತು ಹೋಗಿದ್ದಾರೆ. ಅವರು ವೃತ್ತಿಯಿಂದ ಛಾಯಾಚಿತ್ರಗಾರರು. ಭೂಕಂಪ ಸಂಭವಿಸಿದಾಗ ಅವರು ಶಾಲೆಯೊಂದರ ಗಣರಾಜ್ಯೋತ್ಸವದ ಫೋಟೋ ತೆಗೆಯುತ್ತಿದ್ದರಂತೆ. ಮನೆಯಲ್ಲಿ ಇನ್ನೂ ಕೆಲವರಿಗೆ ಗಾಯಗಳಾಗಿವೆ. ಅವರು ಸಂಗ್ರಹಿಸಿದ್ದ ವಸ್ತುಗಳಲ್ಲಿ ಅವರ ತಂದೆಯ ಮೆಚ್ಚಿನ ಹಾರ್ಮೋನಿಯಂ ಇತ್ತು. ದಿನೇಶರಿಗೆ ಲಯನ್ಸ್ ಕ್ಲಬ್ ನೀಡಿದ್ದ ಪ್ರಶಸ್ತಿ ಪದಕಗಳು ಇದ್ದವು. ಕಳೆದುಹೋದ ಒಳ್ಳೆಯ ದಿನಗಳ ಸುಂದರ ಕ್ಷಣಗಳನ್ನು ಅವು ನೆನಪಿಸುತ್ತಿದ್ದವು.

ಆ ಮನೆಗಳನ್ನು ನೋಡಿದಾಗ, ಅವು ಎಂಥ ಉಲ್ಲಾಸ, ಸಂತಸ, ಬದುಕಿನ ಹೋರಾಟಗಳ ಕೇಂದ್ರಗಳಾಗಿದ್ದಿರಬಹುದು ? ಭೂಕಂಪವಾದಾಗ ಆ ಜನ ಏನು ಮಾಡುತ್ತಿದ್ದರೋ ? ಈಗ ಎಲ್ಲಿದ್ದಾರೋ ಎಂಬ ಪ್ರಶ್ನೆಗಳು ನಮ್ಮನ್ನು ಕಾಡುತ್ತಿದ್ದವು.

ಭಚಾವ್‌ನಲ್ಲಿ ಹಲವಾರು ಧಾರ್ಮಿಕ ಸಂಸ್ಥೆಗಳು, ಸರ್ವೋದಯ ಸಂಘ ಇವರೆಲ್ಲಾ ಅನ್ನದಾನದ ಕೇಂದ್ರಗಳನ್ನು ತೆರೆದಿದ್ದಾರೆ. ಇವರಿಗೆ ವಿ.ಎಚ್.ಪಿ. ಮತ್ತು ಆರ್.ಎಸ್.ಎಸ್.ಗೆ ಸಿಕ್ಕಿದಂಥ ಅಬ್ಬರದ ಪ್ರಚಾರ ಸಿಕ್ಕಿಲ್ಲ. ಆದರೆ ಸದ್ದಿಲ್ಲದೆ ನಿಸ್ಪೃಹತೆಯಿಂದ ಇವರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಅಲ್ಲಿ ಒಂದು ಕಡೆ ಒಂದು ಮಧ್ಯಮವರ್ಗದ ಕುಟುಂಬ ಫುಟ್‌ಪಾತ್‌ನಲ್ಲಿ ಕುಳಿತು ಊಟ ಮಾಡುತ್ತಿದ್ದುದನ್ನು ಕಂಡೆವು. ಎರಡು ಮುದ್ದಾದ ಮಕ್ಕಳಿದ್ದವು. ಒಂದಕ್ಕೆ ಐದು ವರ್ಷ, ಇನ್ನೊಂದಕ್ಕೆ ಮೂರು ವರ್ಷ. ಧಾನ್ಯ ಹಂಚುತ್ತಿದ್ದ ಕಡೆಯಲ್ಲಿ ಒಂದು ಎರಡು ವಯಸ್ಸಿನ ಮಗು ಅಕ್ಕನ ಹೆಗಲ ಮೇಲೆ ಕೂತಿತ್ತು. ಭೂಕಂಪದಲ್ಲಿ ಬಿದ್ದ ಏಟಿನಿಂದ ಅದರ ಕೆನ್ನೆ ಊದಿತ್ತು. ಅದು ನಿಷ್ಕಾರಣವಾಗಿ ನನ್ನನ್ನು ನೋಡಿ ಮುಗುಳ್ನಗು ಬೀರಿತು. ನೆನ್ನೆಯವರೆಗೂ ಇದ್ದ ಮನೆ ಈಗ ಎಲ್ಲಿ ಎಂಬ ಪ್ರಶ್ನೆ ಈ ಮಕ್ಕಳಿಗೆ ಬರುವುದಿಲ್ಲವೇ ?

ನಿಜಕ್ಕೂ ಭಚಾವ್‌ನಲ್ಲಿ ಮಕ್ಕಳನ್ನು ನೋಡಲು ಸಂಕಟವಾಗುತ್ತದೆ. ನಮ್ಮ ಶಿಬಿರದಲ್ಲಿ ನೀಲೇಶ್ ಎಂಬ ಹದಿಮೂರು ವಯಸ್ಸಿನ ಹುಡುಗ ಬಂದು ಸೇರಿದ್ದಾನೆ. ಅವನ ಇಡಿಯ ಕುಟುಂಬ, ಅಣ್ಣನನ್ನು ಹೊರತುಪಡಿಸಿ, ಕುಸಿದ ಮನೆಯಡಿ ಸಮಾಧಿಯಾಯಿತು. ಈ ಹುಡುಗ ಪಾದರಸದಂತಿದ್ದಾನೆ. ಪರಿಹಾರ ಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾನೆ. ಅವನ ಚುರುಕುಬುದ್ಧಿ ಹಾಗೂ ಸೂಕ್ಷ್ಮ ಭಾವನೆಗಳು ನನ್ನಲ್ಲಿ ಅಚ್ಚರಿ ಹುಟ್ಟಿಸಿದವು.

ಭಚಾವ್ ಮತ್ತು ಸುತ್ತಮುತ್ತ ಬದುಕಿ ಉಳಿದವರಲ್ಲಿ ತೀವ್ರ ಆತಂಕದ ಲಕ್ಷಣಗಳಿವೆ. ಇಡಿಯ ಊರಿಗೆ ಈಗ ಒಂದೇ ಒಂದು ದೂರವಾಣಿ ಸೌಲಭ್ಯವಿದೆ. ಅಲ್ಲಿ ಕರೆಗಳು ಉಚಿತ. ಸೈನ್ಯದವರು ನಡೆಸುತ್ತಿದ್ದಾರೆ. ಅಲ್ಲಿನ ಉದ್ಯೋಗಿಯೊಬ್ಬರು ತೀವ್ರ ಆತಂಕದ ಮಾನಸಿಕ ಸ್ಥಿತಿಯಿಂದ ನರಳುತ್ತಿದ್ದರು. ನಾನು ಬಲವಂತದಿಂದ ಅವರ ಕೈಲಿ ರಜಾ ಹಾಕಿಸಿ, ಶಿಬಿರದಲ್ಲಿ ಚಿಕಿತ್ಸೆ ಕೊಡಿಸಿ ಮನೆಗೆ ಕಳಿಸಿದೆ. ಹಳ್ಳಿಯೊಂದರಲ್ಲಿ ಪರಿಹಾರದ ಸಾಮಗ್ರಿಯನ್ನು ವಿತರಿಸುವಾಗ ಲಾರಿಯ ಮೇಲಿನಿಂದ ಕಬ್ಬಿಣದ ಸಾಮಾನು ಕೆಳಗೆ ಬಿದ್ದು ಜೋರಾಗಿ ಸದ್ದಾಯಿತು. ಅಷ್ಟಕ್ಕೆ ನೂರಾರು ಜನ ಅಲ್ಲಿಂದ ಓಡಿಹೋದರು ! ಭೂಕಂಪ ಉಂಟುಮಾಡಿರುವ ಮಾನಸಿಕ ಗಾಯ ಬಹಳ ಆಳವಾಗಿದೆ.

### ಭರವಸೆಯ ಕೇಂದ್ರವಾದ ಶಿಬಿರ

ಗುಡ್ಡದ ಇನ್ನೊಂದು ಬದಿಯಲ್ಲಿ ಪ್ರವಾಸಿಮಂದಿರ ಹಾಗೂ ಗುಜರಾತ್ ವಿದ್ಯುಚ್ಛಕ್ತಿ ಮಂಡಳಿಯ ಕಛೇರಿಗಳು ಸಂಪೂರ್ಣವಾಗಿ ಧ್ವಂಸವಾಗಿವೆ. ಆ ಆವರಣದಲ್ಲಿಯೇ ಎಸ್‌ಯುಸಿಐ ಪಕ್ಷದ ಗುಜರಾತಿನ ಸಂಗಾತಿಗಳು ಪರಿಹಾರ ಹಾಗೂ ಚಿಕಿತ್ಸಾ ಶಿಬಿರವನ್ನು ನಡೆಸುತ್ತಿದ್ದಾರೆ. ಶಿಬಿರದಲ್ಲಿ ಪರಿಹಾರ ಸಾಮಗ್ರಿಗಳ ವಿತರಣೆ ನಡೆಯುತ್ತಿದೆ. ಪ್ರತಿದಿನ ಜನ ಬಂದು ಗೋಧಿಹಿಟ್ಟು, ಎಣ್ಣೆ, ಬೇಳೆ, ಆಲೂಗಡ್ಡೆ, ಹಾಲಿನಪುಡಿ, ಸಕ್ಕರೆ ಮುಂತಾದ ಸಾಮಾನುಗಳನ್ನು, ಬಟ್ಟೆ, ಬ್ಲಾಂಕೆಟ್, ಪ್ಲಾಸ್ಟಿಕ್ ಟೆಂಟಿನ ಸಾಮಗ್ರಿಗಳು ಇತ್ಯಾದಿಗಳನ್ನು ಪಡೆದುಕೊಳ್ಳುತ್ತಾರೆ.

ಭಚಾವ್‌ನ ಹವಾಮಾನದಲ್ಲಿ ತೀವ್ರವಾದ ವೈಪರೀತ್ಯಗಳಿವೆ. ಬೆಳಿಗ್ಗೆ ಉರಿಬಿಸಿಲು, ರಾತ್ರಿ ಕಡುಚಳಿ. ಟೆಂಟಿನಡಿ ಮಲಗಿದ್ದ ನಾವು ರಗ್, ಕಂಬಳಿ, ಸ್ವೆಟರ್, ಮಂಕಿಕ್ಯಾಪ್ ಎಲ್ಲವನ್ನೂ ಉಪಯೋಗಿಸಿದರೂ ರಾತ್ರಿಯ ಕಡೆಯ ಭಾಗದಲ್ಲಿ ಚಳಿಗೆ ಎಚ್ಚರವಾಗುತ್ತಿತ್ತು. ಮೊದಲ ಕೆಲವು ದಿನಗಳಲ್ಲಿ ತಿನ್ನಲು ಬಿಸ್ಕತ್ತು, ಚೌಚೌ, ಟೇಪ್ಲ ಎಂಬ ಒಣರೊಟ್ಟಿ ಮಾತ್ರ ಸಿಗುತ್ತಿತ್ತು. ನೀರಿಗೂ ಕಷ್ಟವಿತ್ತು. ನಂತರ ಟ್ಯಾಂಕರ್‌ಗಳು ಬಂದು ನೀರು ತುಂಬಿಸಿದವು.

ಶಿಬಿರದಲ್ಲಿ ಸ್ವಯಂಸೇವಕರ ಟೆಂಟುಗಳು, ಗಾಯಗಳಿಗೆ ಡ್ರೆಸ್ ಮಾಡುವ ಒಂದು ಟೆಂಟು, ಒಂದು ಹೊರರೋಗಿಗಳ ವಿಭಾಗ, ಒಂದು ಔಷಧಾಗಾರ ಹಾಗೂ ಹತ್ತು ಹಾಸಿಗೆಗಳ ಆಸ್ಪತ್ರೆಯನ್ನು ಸಂಗಾತಿಗಳು ನಿರ್ಮಿಸಿದ್ದರು. ಪ್ರತಿದಿನ ಮೂರು ಜೀಪುಗಳಲ್ಲಿ ಮೂರು ವೈದ್ಯರ ತಂಡಗಳು ಹಳ್ಳಿಗಳಿಗೆ ಭೇಟಿ ನೀಡಿ ಚಿಕಿತ್ಸೆ ಮಾಡುತ್ತಿದ್ದವು. ಬೆಳಗಿನಿಂದ ಸಂಜೆಯವರೆಗೆ ಬೇಸ್‌ಕ್ಯಾಂಪಿನ ಹೊರರೋಗಿಗಳ ವಿಭಾಗ ಬಿಡುವಿಲ್ಲದೆ ದುಡಿಯುತ್ತಿತ್ತು. ಜೊತೆಗೆ ಒಂದು ಸಂಚಾರ ಶಸ್ತ್ರಚಿಕಿತ್ಸೆಯ ಬಸ್ ಇತ್ತು. ಚಿಕಿತ್ಸೆಯ ಉಸ್ತುವಾರಿ ಮೆಡಿಕಲ್ ಸರ್ವಿಸ್ ಸೆಂಟರ್ ಸಂಘಟನೆಯ ಸಂಗಾತಿಗಳದ್ದು.

ಶಸ್ತ್ರಚಿಕಿತ್ಸೆಯ ಅಗತ್ಯವಿದ್ದವರನ್ನು ನಾವು ಉಕ್ರೇನ್ ದೇಶ ಆರಂಭಿಸಿದ್ದ ಆಸ್ಪತ್ರೆಗೆ ಕಳಿಸುತ್ತಿದ್ದೆವು. ಅದೂ ಕೂಡ ವಿಶಾಲವಾದ ಮೈದಾನದಲ್ಲಿ ಆರಂಭಿಸಲಾಗಿದ್ದ ಟೆಂಟುಗಳ ಸಮೂಹವೇ. ಒಂದು ದೊಡ್ಡ ಕೇಂದ್ರ ಟೆಂಟು ಸಂಪೂರ್ಣವಾಗಿ ಗಾಳಿ ತುಂಬಿದ ಗೋಡೆ ಚಾವಣಿಗಳಿಂದ ಮಾಡಿದ್ದು. ಅದರಲ್ಲಿ ಶಸ್ತ್ರಚಿಕಿತ್ಸಾ ಕೋಣೆ, ವಾರ್ಡು ಎಲ್ಲ ಇದ್ದವು. ಪ್ರಚಾರವೇ ಇಲ್ಲದೆ ಕೆಲಸ ಮಾಡಿದ ಅವರು ಶ್ಲಾಘನೆಗೆ ಅರ್ಹರು. ಅಷ್ಟು ಪುಟ್ಟ ದೇಶ ತೋರಿರುವ ಸಹಕಾರ ಹಾಗೂ ಶ್ರದ್ಧೆ ಅನನ್ಯವಾದದ್ದು. ಅದಕ್ಕೆ ಹೋಲಿಸಿದರೆ ಜಿ 7ಎನ್ನಿಸಿಕೊಂಡವರ ಪ್ರಯತ್ನ ತೃಪ್ತಿದಾಯಕವೇನಲ್ಲ. ಸೈನ್ಯದ ಆಸ್ಪತ್ರೆಗಿಂತ ಇದು ಉತ್ತಮವಾದದ್ದರಿಂದ ನಾವು ಅವರೊಂದಿಗೆ ಸಹಯೋಗವನ್ನು ಏರ್ಪಡಿಸಿಕೊಂಡೆವು. ನಮ್ಮ ಶಸ್ತ್ರಚಿಕಿತ್ಸೆಗಳು ಅಲ್ಲಿ ನಡೆಯುತ್ತಿದ್ದವು. ಅವರು ಜಾಗ ಸಾಲದಾದಾಗ ತಮ್ಮ ರೋಗಿಗಳನ್ನು ನಮ್ಮ ಆಸ್ಪತ್ರೆಗೆ ಕಳುಹಿಸುತ್ತಿದ್ದರು.

ಕೈಕಾಲು ಮುರಿದು ಚಿಕಿತ್ಸೆಯೇ ಆಗದಿದ್ದ ಎಷ್ಟೋ ಜನಕ್ಕೆ ನಾವು ಚಿಕಿತ್ಸೆ ನೀಡಿದೆವು. ಇದಲ್ಲದೆ ಅಸಮರ್ಪಕ ಚಿಕಿತ್ಸೆಯಾದವರಿಗೆ ಮರುಚಿಕಿತ್ಸೆ. ಎಲ್ಲಕ್ಕಿಂತ ಮಿಗಿಲಾಗಿ ವೈದ್ಯರು, ಆಸ್ಪತ್ರೆಗಳು ಇಲ್ಲವಾದ ಆ ಪ್ರದೇಶದಲ್ಲಿ ಬಂದ ಎಲ್ಲ ರೀತಿಯ ರೋಗಿಗಳನ್ನೂ ನಾವು ನೋಡುತ್ತಿದ್ದೆವು. ತೊಡೆ ಮುರಿದವರು, ಕೈ ಮುರಿದವರು, ಸೊಂಟ ಮುರಿದವರು, ವಿಪರೀತ ಚರ್ಮ ಕಿತ್ತ ಗಾಯಗಳು, ಸುಟ್ಟ ಗಾಯಗಳು ; ಇದಲ್ಲದೆ ಜ್ವರ, ಹೆರಿಗೆ ಇತ್ಯಾದಿ ಮಾಮೂಲು ಕೇಸುಗಳು ಹೇರಳವಾಗಿದ್ದವು.



ವೈದ್ಯರಿಗೆ ಒಂದು ಕ್ಷಣವೂ ಬಿಡುವಿಲ್ಲದಷ್ಟು ಕೆಲಸ



*ಡಾ|| ಬಿ. ಆರ್. ಮಂಜುನಾಥ್ ಮತ್ತು ಸಹ ವೈದ್ಯರು*

ಭೂಕಂಪದಲ್ಲಿ ಏಟು ಬಿದ್ದ ಮೇಕೆ, ಹಸು, ಒಂಟೆಗೂ ಚಿಕಿತ್ಸೆ ಮಾಡಿದ್ದುಂಟು !

ಊಟ ನಿದ್ದೆ ಇಲ್ಲದೆ, ಪ್ರತಿಕೂಲ ಹವಾಮಾನದಲ್ಲಿ ದುಡಿಯುತ್ತಿದ್ದರೂ ಶಿಬಿರದಲ್ಲಿ ಕಂಡ ಲವಲವಿಕೆ, ಸ್ಫೂರ್ತಿಗಳನ್ನು ಮರೆಯಲಾಗದು.

**ದುಷ್ಟ ರಾಜಕೀಯದ ದಾಳಗಳು**

ಭೂಕಂಪವಾದ ಕೂಡಲೆ ಗುಜರಾತ್‌ನ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರ ಪ್ರದರ್ಶಿಸಿದ ನಿಷ್ಕ್ರಿಯತೆ, ಅದಕ್ಷತೆ ಈಗ ಜಗಜ್ಜಾಹೀರಾಗಿದೆ. ಭೂಕಂಪವಾದ ಮೊದಲ ೭೨ ಘಂಟೆಗಳಲ್ಲಂತೂ ಭುಜ್ ಜಿಲ್ಲೆಯಲ್ಲಿ ಯಾವ ಸರ್ಕಾರವೂ ಇರಲಿಲ್ಲ. ವಿಶ್ವದಾದ್ಯಂತ ದುರಂತಗಳು ನಡೆದಾಗ ಸಂತ್ರಸ್ತರು ದಿನಗಟ್ಟಲೆ ಕಟ್ಟಡಗಳಡಿ ಬದುಕುಳಿದ ಉದಾಹರಣೆಗಳಿವೆ. ಆದರೆ ಈ ಪಾತಕೀ ಸರ್ಕಾರಗಳು ಐದನೆಯ ದಿನವೇ ಬದುಕುಳಿದವರನ್ನು ಹೊರತೆಗೆಯುವ ಕಾರ್ಯವನ್ನು ಕೈ ಬಿಟ್ಟವು. ವಿಶ್ವದ ಎಲ್ಲೆಡೆಯಿಂದ, ಭಾರತದ ಮೂಲೆಮೂಲೆಯಿಂದ ಪರಿಹಾರದ ತಂಡಗಳು ಹಾಗೂ ಸಾಮಗ್ರಿ ಹರಿದುಬಂದಿವೆ. ಆದರೆ ಪರಿಹಾರ ಕಾರ್ಯವನ್ನು ವ್ಯವಸ್ಥಿತವಾಗಿ ನಡೆಸುವ ಜವಾಬ್ದಾರಿಯನ್ನು ಸರ್ಕಾರ ನಿರ್ವಹಿಸುತ್ತಿಲ್ಲ.

ಬಹಳ ಬೆಲೆ ಬಾಳುವ ವಸ್ತುಗಳನ್ನು ಸರ್ಕಾರ ತನ್ನ ನೆಚ್ಚಿನ ಸಂಸ್ಥೆಗಳಿಗೆ ವರ್ಗಾಯಿಸಿಬಿಡುತ್ತದೆ ! ಆರ್. ಎಸ್. ಎಸ್. ಹಾಗೂ ವಿ.ಎಚ್.ಪಿ.ಗಳಂತೂ ಇಡಿಯ ಪರಿಹಾರ ಕಾರ್ಯದ ಏಕೈಕ ನಾಯಕರಂತೆ ಮಾಧ್ಯಮಗಳಿಂದ ವರ್ಣಿಸಲ್ಪಡುತ್ತಾರೆ. ಇನ್ನೊಂದೆಡೆ ಅಲ್ಪ ಸಂಖ್ಯಾತರು ಹಾಗೂ ದಲಿತರು ತಮಗೆ ಪರಿಹಾರ ದೊರೆತಿಲ್ಲವೆಂದು ಪ್ರತಿಭಟಿಸುತ್ತಾರೆ. ಆಳುವ ಪಕ್ಷದ ಒಳಗೇ ಒಡಕಿದ್ದು, ವಿರೋಧಿ ಬಣ ಮುಖ್ಯಮಂತ್ರಿಗಳನ್ನು ಕೆಳಗಿಳಿಸಲು ಇದೇ ಸೂಕ್ತ ಸಮಯ ಎಂದು ಹೊಂಚುಹಾಕುತ್ತಿದೆ ಎಂದು ಕೆಲವು ಪತ್ರಿಕೆಗಳು ಬರೆಯುತ್ತಿವೆ. ಇತ್ತ ಕಾಂಗ್ರೆಸ್ ಪಕ್ಷ, 'ಬಿಜೆಪಿ ಇನ್ನಷ್ಟು ಜನರ ಸಿಟ್ಟಿಗೆ ಪಾತ್ರವಾಗಲಿ' ಎಂದು ಹಾರೈಸುತ್ತಾ ಕುಳಿತಿದೆ. ಸೋನಿಯಾ ಗಾಂಧಿ ಆಗಮನದ ದಿನ, ಬೆಳಿಗ್ಗೆ ತಲೆ ಎತ್ತಿದ ಕಾಂಗ್ರೆಸ್‌ನ ದಿಢೀರ್ ಪರಿಹಾರ ಕೇಂದ್ರಗಳು ರಾತ್ರಿಯ ವೇಳೆಗೆ ಮಾಯವಾದವು.

ಗಾಂಧಿಧಾಮದಲ್ಲಿ ಕೇಂದ್ರ ಸರ್ಕಾರದ ಕಛೇರಿಯೊಂದರಲ್ಲಿ ಪಾಂಡೆ ಎಂಬ ಒಬ್ಬ ಹಿರಿಯ ಅಧಿಕಾರಿಯನ್ನು ಭೇಟಿಯಾಗಿದ್ದೆ. ಅವರು ನಮಗೆ ಬಹಳ ಸಹಾಯ ಮಾಡಿದವರು. ಅವರು ಪಕ್ಕದಲ್ಲಿ ದೊಡ್ಡ ಊದುಬತ್ತಿಯ ಕಟ್ಟನ್ನೇ ಹಚ್ಚಿಟ್ಟಿದ್ದರು. ಅದು ಆರುವ ಮುನ್ನ ಇನ್ನೊಂದನ್ನು ಹಚ್ಚುತ್ತಿದ್ದರು. 'ಉರಿಯುತ್ತಿರುವ ಊದುಬತ್ತಿ ಇರುವ ಕಡೆ ದೇವ ದೇವತೆಗಳು, ಪೀರ್ ಪೈಗಂಬರ್ ಇರುತ್ತಾರೆ. ನಮ್ಮನ್ನು ರಕ್ಷಿಸುತ್ತಾರೆ. ನಮ್ಮ ಪಾಲಿಗೆ ಯಾವ ಸರ್ಕಾರವೂ ಇಲ್ಲ. ನಿಮ್ಮಂಥ ಸಂಸ್ಥೆಗಳೇ ಈ ಬಾರಿ ನಮ್ಮ ಕಷ್ಟಕ್ಕಾದವರು. ಸರ್ಕಾರ ಈ ಬಾರಿ ಆದಾಯ ತೆರಿಗೆ ಪಾವತಿಯನ್ನಾದರೂ ಮನ್ನಾ ಮಾಡಬೇಕಿತ್ತು ಅಥವಾ ವಾಯಿದೆಯನ್ನು ಮುಂದೂಡಬೇಕಿತ್ತು. ಮನೆ ಬಿದ್ದಿದೆ. ಮಗನ ತಲೆಗೆ ಏಟು ಬಿದ್ದಿದೆ. ಇಂಥ ಸಂದರ್ಭದಲ್ಲಿ ಸಂಬಳ ಕಡಿತವಾಗಿ ಒಂದಿಷ್ಟು ಪುಡಿಗಾಸು ಹಿಡಿದುಕೊಂಡು ನಾನು ಈ ತಿಂಗಳು ಮನೆಗೆ ಹೋಗುತ್ತಿದ್ದೇನೆ' ಎಂದು ಭಾರವಾದ ಧ್ವನಿಯಲ್ಲಿ ಹೇಳಿದರು.

ಅತ್ತ ಅದೇ ಸಮಯದಲ್ಲಿ ವಾಜಪೇಯಿ ಲಕ್ನೋದಲ್ಲಿ ಅದ್ದೂರಿ ಸನ್ಮಾನಕ್ಕೆ ಒಳಗಾಗುತ್ತಿದ್ದರು. ಅವರನ್ನು ಸ್ವಾಗತಿಸಿದ ರತ್ನಗಂಬಳಿಗೆ ಒಂದು ಕೋಟಿ, ಪತ್ರಿಕಾ ಜಾಹಿರಾತುಗಳಿಗೆ ೫೫ಲಕ್ಷ ಖರ್ಚಾಯಿತಂತೆ. ಅವರಿಗೆ ೧೦ ಕೆ.ಜಿ. ಭಾರದ ಗುಲಾಬಿ ಹಾರ ಹಾಕಲಾಯಿತಂತೆ. ಗುಜರಾತಿನ ಜನರ ಗಾಯಕ್ಕೆ ಇದೆಲ್ಲಾ ಉಪ್ಪು ಹಚ್ಚಿದಂತೆ !

ಯಾವ ವಿದೇಶೀ ಸಹಾಯವನ್ನೂ ತೆಗೆದುಕೊಳ್ಳದೆ ಅಲ್ಪಕಾಲದಲ್ಲಿಯೇ ಇಡಿಯ ಪ್ರದೇಶವನ್ನೇ ಭೂಕಂಪದ ನಂತರ ಪುನರ್ನಿರ್ಮಿಸಿದ ಚೀನಾದ ಕ್ರಾಂತಿಕಾರಿ ಸರ್ಕಾರ ಒಂದು ಜನಪರ ಸರ್ಕಾರ. ದುರಂತಕ್ಕೆ ಹೇಗೆ ಪ್ರತಿಕ್ರಿಯಿಸಬಹುದು ಎಂಬುದಕ್ಕೆ ಒಳ್ಳೆಯ ಉದಾಹರಣೆ.

**ಭವಿಷ್ಯದ ದಿನಗಳು**

ಬೇಸಿಗೆ ಬಂದಂತೆ ಭುಜ್ ಜಿಲ್ಲೆ ಬೆಂಕಿಯಂಥ ಬಿಸಿಲಿಗೆ ಸಿಕ್ಕು ಬಳಲುತ್ತದೆ. ಆಗ ಅಲ್ಲಿ ಮನೆಗಳು ನಿರ್ಮಾಣವಾಗಿರುವುದಿಲ್ಲ. ಕುಡಿಯುವ ನೀರಿನ ವ್ಯವಸ್ಥೆ ಸಮರ್ಪಕವಾಗಿರುವುದಿಲ್ಲ. ಸಾಂಕ್ರಾಮಿಕ ರೋಗಗಳು ಆರಂಭವಾಗಬಹುದು. ಶಾಲೆಗಳು, ಆಸ್ಪತ್ರೆಗಳು ಶುರುವಾಗಬೇಕಿದೆ. ಸ್ವಾಭಿಮಾನಿಗಳಾದ ಇಲ್ಲಿನ ಜನ ಕೈ ಒಡ್ಡಲು ಇಷ್ಟಪಡುವುದಿಲ್ಲ. ಅವರಿಗೆ ಉದ್ಯೋಗ ವ್ಯವಸ್ಥೆಯಾಗಬೇಕು.

ಈ ಅಗಾಧ ಅಗತ್ಯತೆಗೆ ಹೋಲಿಸಿದರೆ ನಮ್ಮಂಥ ಸ್ವಯಂ ಸೇವಾ ಸಂಸ್ಥೆಗಳ ಕೆಲಸ ಬಹಳ ಕಡಿಮೆ, ಒಂದು ಬಿಂದುವಿನಷ್ಟು. ನಿಜವಾಗಿಯೂ ಪೂರ್ಣ ಪರಿಹಾರ ಅಪಾರ ಸಂಪನ್ಮೂಲಗಳಿರುವ ಸರ್ಕಾರದಿಂದ ಮಾತ್ರ ಸಾಧ್ಯ. ಆದರೆ ಲಾತೂರ್, ಒರಿಸ್ಸಾ ಮುಂತಾದ ಕಡೆ ಇಲ್ಲಿಯವರೆಗೂ ನಡೆದಿರುವ ಪರಿಹಾರದ ವೇಗ, ಪ್ರಮಾಣ, ಪ್ರಾಮಾಣಿಕತೆಯನ್ನು ನೋಡಿದರೆ ಯಾವ ಭರವಸೆಯೂ ಹುಟ್ಟುವುದಿಲ್ಲ.

ಆದ್ದರಿಂದಲೇ ನಾವು ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಜನಸಮಿತಿಗಳ ರಚನೆಗೆ ಈಗ ಆದ್ಯತೆ ನೀಡಬೇಕಾಗಿದೆ. ಪರಿಹಾರ ತಮ್ಮ ಹಕ್ಕು ಎಂದು ಜನ ಒತ್ತಾಯಿಸಿ ಅವುಗಳನ್ನು ಸಾಧಿಸಿಕೊಳ್ಳಬೇಕು. ಇಡಿಯ ದೇಶ ಸಮರ್ಪಕ ಪರಿಹಾರಕ್ಕಾಗಿ ಸರ್ಕಾರಗಳ ಮೇಲೆ ಒತ್ತಡ ಹೇರಬೇಕು. ಗುಜರಾತಿನ ಸಂಕಟವನ್ನು ನೆನಪಿನಿಂದ ಅಳಿಸಲು ಬಿಡಬಾರದು.

ತಾವೇ ಕಷ್ಟದಲ್ಲಿದ್ದರೂ ನಮಗಾಗಿ ಹಾಲು ಮೊಸರು ಕಳಿಸಿದ ಜನ, ತಮ್ಮ ಸಂಕಟ ಮರೆತು ಪರಿಹಾರಕ್ಕಾಗಿ ದುಡಿದ ನೀಲೇಶನಂಥ ಹುಡುಗರು, ಪರಿಹಾರಕ್ಕಾಗಿ ಯಾಚಿಸದೆ ಸ್ವಾಭಿಮಾನದಿಂದ ದೂರ ನಿಂತಿದ್ದ ವೃದ್ಧರು, ಸಮರೋತ್ಸಾಹ ತುಂಬಿದ ನಮ್ಮ ಶಿಬಿರ ಇವೆಲ್ಲಾ ಮನಃಪಟಲದಿಂದ ಅಳಿಸಲಾಗದಂಥವು.

**ಅಲ್ಲಿದ್ದಾಗ ಪ್ರತಿದಿನ ಕಂಪನಗಳ ಅನುಭವವಾಗಿ ಇರುವುದರಿಂದ ಈಗಲೂ ನನಗೆ ಒಮ್ಮೊಮ್ಮೆ ಕಂಪನದ ಭ್ರಮೆ ಆಗುತ್ತದೆ. ಅದರೊಂದಿಗೆ ಆ ಎಲ್ಲ ನೆನಪುಗಳು ಮತ್ತೆ ಬರುತ್ತವೆ.**

**ಗುಜರಾತ್‌ನಿಂದ ಮರಳುವಾಗ ರೈಲಿನ ಕಿಟಕಿಗಳಲ್ಲಿ ಮರಗಳು ಚಿಗುರೊಡೆಯುತ್ತಿರುವುದು ಕಂಡಿತು. ಋತುಗಳ ರಾಜ ವಸಂತ ಬರುತ್ತಿದ್ದಾನೆ. 'ನಗರದಲ್ಲಾಗಲೀ, ಹಳ್ಳಿಯಲ್ಲಾಗಲೀ ವಸಂತ ವಸಂತವೇ' ಎಂಬ ಟಾಲ್‌ಸ್ಟಾಯ್‌ರ ವರ್ಣನೆ ನೆನಪಿಗೆ ಬಂತು.**

ಗುಜರಾತ್‌ನಲ್ಲಿ, ಕರ್ನಾಟಕದಲ್ಲಿ ಹೋರಾಟಗಳ ವಸಂತ ಬಂದೇ ಬರುತ್ತದೆ.

**ಬಿ. ಆರ್. ಮಂಜುನಾಥ್**
ಸದಸ್ಯರು, ಕರ್ನಾಟಕ ರಾಜ್ಯ ಸಮಿತಿ, ಎಸ್.ಯು.ಸಿ.ಐ.
೩೧, ೩ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ಭೂಕಂಪವನ್ನು ಕುರಿತು ವರಾಹಮಿಹಿರ

*ಪ್ರಾಚೀನ ಭಾರತದ ಒಬ್ಬ ಪ್ರಸಿದ್ಧ ವಿಜ್ಞಾನಿ ವರಾಹಮಿಹಿರ. ಆರನೆಯ ಶತಮಾನದ ಆದಿಯಲ್ಲಿ ಅವನು ಉಜ್ಜಯಿನಿಯಲ್ಲಿದ್ದ. ಪರ್ಷಿಯಾದಿಂದ ವಲಸೆ ಬಂದಿದ್ದ ಕುಟುಂಬವೊಂದರಲ್ಲಿ ಜನಿಸಿದ್ದು ಜ್ಯೋತಿಷ್ಯದಲ್ಲಿ ಪ್ರಾವೀಣ್ಯ ಹೊಂದಿದ್ದನೆಂದು ಈತನ ಬಗ್ಗೆ ಹೇಳಲಾಗಿದೆ. ಹೀಗೆ ವಲಸೆ ಬಂದಿದ್ದವರನ್ನು ಶಾಕ ದ್ವೀಪಿಗಳು ಅಥವಾ ಮಗ ಬ್ರಾಹ್ಮಣರು ಎನ್ನುತ್ತಿದ್ದರು. ಸೂರ್ಯನ ಆರಾಧಕರಾಗಿದ್ದ ಇವರು ತಮ್ಮ ಹೆಸರುಗಳಲ್ಲಿ ಸೂರ್ಯನ ಹೆಸರನ್ನು ಸೇರಿಸಿಕೊಳ್ಳುತ್ತಿದ್ದರು. 'ಮಿಹಿರ' ಎಂದರೆ ಸೂರ್ಯ. ಇವನ ತಂದೆ ಆದಿತ್ಯದಾಸ. ಪರಂಪರೆಯ ಒಂದು ಐತಿಹ್ಯದಂತೆ ಇವನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ 'ನವರತ್ನ'ಗಳಲ್ಲಿ ಒಬ್ಬ. ಕಾಲಿದಾಸ, ಧನ್ವಂತರಿ, ಅಮರಸಿಂಹ ಮುಂತಾದವರು ಇತರರು. ಆದರೆ ವಸ್ತುತಃ ಇವರೆಲ್ಲಾ ಸಮಕಾಲೀನರೇ ಆಗಿರಲಿಲ್ಲ.*

ಡಾ|| ರಾಮಕೃಷ್ಣ ಭಟ್ಟಾಚಾರ್ಯ

ವರಾಹಮಿಹಿರನು ಅನೇಕ ಶಾಸ್ತ್ರಗಳಲ್ಲಿ ನೈಪುಣ್ಯವನ್ನು ಸಾಧಿಸಿದ್ದ. ಅವುಗಳಲ್ಲಿ ಖಗೋಳಶಾಸ್ತ್ರವೂ ಒಂದು. **ಪಂಚಸಿದ್ಧಾಂತಿಕಾ** ಎಂಬ ಅವನ ಕೃತಿಯು ಖಗೋಳಶಾಸ್ತ್ರದ ಐದು ಬೇರೆಬೇರೆ ಪದ್ಧತಿಗಳ ಸಾರಸಂಗ್ರಹ. ಅವುಗಳಲ್ಲಿ ಭಾರತೀಯ ಹಾಗೂ ವಿದೇಶಿ ಪದ್ಧತಿಗಳೆರಡೂ ಸೇರಿವೆ. ಯವನಾಚಾರ್ಯನೆಂದು ತನ್ನ ಹಿಂದಿನ ಒಬ್ಬ ಶಾಸ್ತ್ರಜ್ಞನನ್ನು ಹೆಸರಿಸುವುದಲ್ಲದೆ ಸ್ವತಃ ತಾನೇ ಅನೇಕ ಗ್ರೀಕ್ ಪದಗಳನ್ನು ಬಳಸುತ್ತಾನೆ. 'ಹೋರಾ' ಎಂಬುದು ಅಂತಹ ಒಂದು ಪದ.

ವರಾಹಮಿಹಿರನ ಅತಿ ಪ್ರಶಸ್ತವಾದ ಗ್ರಂಥವೆಂದರೆ **ಬೃಹತ್ಸಂಹಿತೆ.** ಹೆಸರೇ ಸೂಚಿಸುವಂತೆ ಅದೊಂದು ಅನನ್ಯವಾದ ವಿಶ್ವಕೋಶ. ಸುಮಾರು ನಾಲ್ಕು ಸಾವಿರ ಶ್ಲೋಕಗಳನ್ನುಳ್ಳ ಈ ಗ್ರಂಥದಲ್ಲಿ ಚರ್ಚೆಗೆ ಬರುವ ವಿಷಯಗಳು ಹಲವು. ಭಾರತದ ಭೂಗೋಳದಿಂದ ಹಿಡಿದು ಛತ್ರಿಗಳ ವೈಲಕ್ಷಣ್ಯಗಳವರೆಗೆ ಅವನು ಪ್ರಸ್ತಾಪಿಸದ ವಿಷಯಗಳೇ ವಿರಳವೆನ್ನಬಹುದು. ಕತ್ತಿಗಳ ಬಗೆಗಳಾಗಲಿ, ಸೌಂದರ್ಯ ಸಾಧನಗಳಾಗಲಿ, ವೃಕ್ಷಾಯುರ್ವೇದವಾಗಲಿ, ಪ್ರಶಸ್ತ ವಜ್ರಗಳ ತಪಾಸಣೆಯ ವಿಧಾನವಾಗಲಿ, ಯಾವುದೂ ಇವನ ಪರಿಧಿಯನ್ನು ಮೀರುವುದಿಲ್ಲ. ವಾಸ್ತು, ಶಿಲ್ಪ, ಮೂರ್ತಿಗಳನ್ನು ಕಡೆಯುವುದು ಇತ್ಯಾದಿಗಳನ್ನು ಕುರಿತಂತೆ ಸಹ ಅವನು ಅನೇಕ ಪ್ರಮುಖ ಅಂಶಗಳನ್ನು ದಾಖಲಿಸಿದ್ದಾನೆ. ಗುಪ್ತರ ಕಾಲದ ಜೀವನಶೈಲಿಯನ್ನು ಸಮಗ್ರವಾಗಿ ಗ್ರಹಿಸ ಬೇಕಾದರೆ ಇವನ ಕೃತಿಯನ್ನು ಓದಲೇಬೇಕು. ಸಮಾಜದ ಮೇಲ್ವರ್ಗಗಳ ಬಗೆಗೆ ಮಾತ್ರವೇ ವಿಶೇಷವಾಗಿ ತನ್ನ ಗಮನ ಹರಿಸುತ್ತಾನೆಂಬುದು ನಿಜವಾದರೂ ಅವನ ಕೃತಿ ಒಂದು ಅದ್ಭುತ ಪ್ರಪಂಚವನ್ನು ತೆರೆದಿಡುತ್ತದೆ.

ವರಾಹನು ಒಬ್ಬ ಜ್ಯೋತಿಷಿ ಕೂಡ ಆಗಿದ್ದ. ಜನ್ಮಕುಂಡಲಿಗಳ ರಚನೆಯ ಬಗ್ಗೆ ಅವನ ಅನೇಕ ಗ್ರಂಥಗಳಿವೆ. ಅಂತೆಯೇ ಪ್ರಯಾಣದ ಶುಭಾಶುಭಗಳು, ವಿವಾಹ ಪಟಲ ಮುಂತಾದ ವಿಷಯಗಳನ್ನು ಕುರಿತು ಸಹ ಬರೆದಿದ್ದಾನೆ. ಬೃಹತ್ಸಂಹಿತೆಯಲ್ಲೇ ಅಂಗವಿದ್ಯೆಗೆ ಸಂಬಂಧಿಸಿದ ಕೆಲವು ಅಧ್ಯಾಯಗಳಿವೆ. ಮಾನವ ಜೀವನದ ಮೇಲೆ ನೈಸರ್ಗಿಕ ಅಂಶಗಳು ಯಾವ ಪ್ರಭಾವ ಬೀರುತ್ತವೆಂಬುದು ಇಲ್ಲಿಯ ಶೋಧನೆಯ ವಿಷಯ. ಅದರಲ್ಲಿ ಗ್ರಹಗತಿಗಳು ಕೂಡ ಸೇರಿವೆ. ಒಬ್ಬ ವಿಜ್ಞಾನಿಯು ದಾರಿ ತಪ್ಪಿದಾಗ ಜನಸಾಮಾನ್ಯರಲ್ಲಿ ಎಂತಹ ಅರ್ಥರಹಿತ ಭಾವನೆಗಳನ್ನು ತುಂಬಬಹುದೆಂಬುದಕ್ಕೆ ಇವನು ಅಪ್ರತಿಮ ನಿದರ್ಶನ ಒದಗಿಸುತ್ತಾನೆಂದರೆ ಆಶ್ಚರ್ಯವೆನಿಸಬೇಕಾಗಿಲ್ಲ.

ಅದಕ್ಕೆ ಒಂದು ಉದಾಹರಣೆಯನ್ನು ನೋಡೋಣ: ಪ್ರಾಚೀನ ಭಾರತದ ನಮ್ಮ ವಿಜ್ಞಾನಿಗಳು ಭೂಕಂಪದ ಕಾರಣಗಳ ಬಗ್ಗೆ ಏನನ್ನೂ ಖಚಿತವಾಗಿ ತಿಳಿದಿರಲಿಲ್ಲ. ಆ ಬಗ್ಗೆ ಅವರು ಸಾಮಾನ್ಯವಾಗಿ ಮೌನ ವಹಿಸುತ್ತಾರೆ. ಆದರೆ ನಮ್ಮ ಪುರಾಣಗಳ ಕರ್ತೃಗಳು ರೈಲು ಬಿಡುವುದರಲ್ಲಿ ಅತಿ ಸಾಮರ್ಥ್ಯವನ್ನು ಮೆರೆದು ಎಂತೆಂಥವೋ ಕಗ್ಗಗಳನ್ನು ಕಟ್ಟುವುದರಲ್ಲಿ ವಿಶೇಷ ಪರಿಣತಿಯನ್ನು ಗಳಿಸಿ ಕೊಂಡಿದ್ದರು. ವಾಸುಕಿಯೆಂಬ ನಾಗನ ಮೇಲೆ ಭೂಮಿಯು ನಿಂತಿದೆಯೆಂಬ ಐತಿಹ್ಯಕ್ಕೆ ಕಾರಣಪುರುಷರೇ ಈ ಪುರಾಣದ ಕರ್ತೃಗಳು. ವಾಸುಕಿಯು ತನ್ನ ಹೆಡೆಯನ್ನು ಅಲುಗಿಸಿದಾಗ ಭೂಕಂಪ ಸಂಭವಿಸುತ್ತದೆಂದು ಅವರು ಸಾರಿ ಹೇಳಿದರು. ಜ್ಯೋತಿಷಿಗಳು ಪುರಾಣಗಳ ಕರ್ತೃಗಳಿಗಿಂತ ಹಿಂದೆ ಬೀಳಲಿಲ್ಲ. ಅವರೂ ವಿಕೃತ ಕತೆಗಳನ್ನು ಹೆಣೆಯುವುದರಲ್ಲಿ ಚಾತುರ್ಯವನ್ನು ತೋರಿದವರೇ. ಆದರೆ ಅವರಿಗೆ ಒಂದು ಮುಗ್ಗಟ್ಟಿನ ಸಂದರ್ಭವಿತ್ತು. ಅದೇನೆಂದರೆ, ಭೂಮಿಯು ಅಂತರಿಕ್ಷದಲ್ಲಿ ಸ್ವತಂತ್ರವಾಗಿ ಇರಬೇಕಾದ ಪ್ರಮೇಯವಿತ್ತು ; ಅದು ಯಾರ ತಲೆಯ ಮೇಲೂ ಕೂರುವಂತಿರಲಿಲ್ಲ, ಭೂಮಿ ತನ್ನ ಅಕ್ಷದ ಮೇಲೆ ಸುತ್ತಲಿ, ಬಿಡಲಿ, ಅದು ಸ್ಥಿರವಾಗಿ ವಾಸುಕಿಯ ಹೆಡೆಯ ಮೇಲಂತೂ ಕುಳಿತಿರುವಂತಿರಲಿಲ್ಲ. ಆದ್ದರಿಂದ ಭೂಕಂಪಕ್ಕೆ ಅವರು ಬೇರೆ ವಿವರಣೆಗಳನ್ನು ಕೊಡಬೇಕಾದ ಸನ್ನಿವೇಶವಿತ್ತು. ಪ್ರಮಾದವೋ ಅಲ್ಲವೋ, ಅಂತೂ ಅವರು ಸಹ ವಿಚಿತ್ರವಾದ ಕತೆಗಳನ್ನು ಕಟ್ಟಬೇಕಾಯಿತು. ಒಂದು ಗಮನಾರ್ಹ ವಿಷಯವೆಂದರೆ ಭೂಕಂಪಕ್ಕೆ ಸಂಬಂಧಿಸಿದ ಹೇಳಿಕೆಗಳು ಜ್ಯೋತಿಷ ಗ್ರಂಥಗಳಲ್ಲಿ ಮಾತ್ರವೇ ಉಪಲಬ್ಧವಿವೆ. ಅವನ್ನು ಬಿಟ್ಟರೆ ಪುರಾಣಗಳಲ್ಲಿ ಸಿಗುತ್ತವೆ. ಬೇರೆ ಪ್ರಾಚೀನ ಅಥವಾ ಮಧ್ಯಕಾಲೀನ ಯುಗಗಳ ಗಂಭೀರ ಶಾಸ್ತ್ರಗ್ರಂಥಗಳಲ್ಲಿ ಭೂಕಂಪದ ಬಗೆಗಿನ ಚರ್ಚೆ ಇಲ್ಲವೇ ಇಲ್ಲವೆಂಬಷ್ಟು ವಿರಳವಾಗಿದೆ.

ಬೃಹತ್ಸಂಹಿತೆಯ ಮೂವತ್ತೆರಡನೆಯ ಅಧ್ಯಾಯದಲ್ಲಿ ವರಾಹಮಿಹಿರನು ಭೂಕಂಪದ ಬಗೆಗಿನ ಕಟ್ಟುಕತೆಗಳನ್ನು ಶ್ರದ್ಧೆಯಿಂದ ಸ್ಮರಿಸುತ್ತಾನೆ : "ಕೆಲವರೆನ್ನುತ್ತಾರೆ, ಭೂಕಂಪವು ಅಗಾಧವಾದ ಜಲಚರ ಪ್ರಾಣಿಗಳಿಂದ ಸಂಭವಿಸುತ್ತದೆ, ಎಂದು; ಇನ್ನು ಕೆಲವರ ಪ್ರಕಾರ ಭೂಮಿಯನ್ನು ಹೊತ್ತು ನಿಂತಿರುವ ದಿಗ್ಗಜಗಳು ಸ್ವಲ್ಪಕಾಲ ವಿಶ್ರಾಂತಿಯಲ್ಲಿ ನಿರತರಾದಾಗ ಅದು ಸಂಭವಿಸುತ್ತದೆ. ಮತ್ತೆ ಕೆಲವರು ಹೇಳುತ್ತಾರೆ, ಗಾಳಿಯು ಪ್ರಚಂಡವಾಗಿ ಬೀಸಿದಾಗ ಪರಸ್ಪರ ಡಿಕ್ಕಿ ಹೊಡೆಯುವಂತಾಗಿ ಅದು ಭೂಮಿಗೆ ಅಪ್ಪಳಿಸುತ್ತದೆ ಮತ್ತು ಅದರಿಂದ ಭೂಕಂಪನವಾಗುತ್ತದೆ, ಎಂದು. ಇನ್ನು ಕೆಲವು ಮಂದಿ ಇದ್ದಾರೆ : ಅವರ ಅಭಿಪ್ರಾಯದಲ್ಲಿ ಭೂಕಂಪವು



ಸಂಭವಿಸುವುದು ಅದೃಷ್ಟದ ಕಾರಣದಿಂದ.'' ಈ ನಾಲ್ಕು ಅಭಿಪ್ರಾಯಗಳನ್ನು ಉಲ್ಲೇಖಿಸಿದ ನಂತರ ತಾನು ಸತ್ಯವೆಂದು ಭಾವಿಸುವ ಐದನೆಯ ಪರ್ಯಾಯವೊಂದನ್ನು ವರಾಹನು ಸೂಚಿಸಿದ್ದಾನೆ. ಅದಕ್ಕೆ ಪೂರಕವಾಗಿ ಒಂದು ಕತೆಯನ್ನು ನಿರೂಪಿಸುತ್ತಾನೆ : ಹಿಂದೆ ಪರ್ವತಗಳಿಗೆ ರೆಕ್ಕೆಗಳಿದ್ದುವು. ಅದರಿಂದಾಗಿ ಪರ್ವತಗಳು ಆಗಾಗ್ಗೆ ಮೇಲಕ್ಕೆ ಕೆಳಕ್ಕೆ ಹಾರುತ್ತಿದ್ದವು ಮತ್ತು ಅದರ ಪರಿಣಾಮವಾಗಿ ಭೂಮಿಯು ಅದುರುತ್ತಿದ್ದಿತು. ಆದ್ದರಿಂದ ವಸುಧೆಯು ಬ್ರಹ್ಮನ ಬಳಿಗೆ ಹೋಗಿ ನಿವೇದಿಸಿಕೊಂಡಳು : ''ಪ್ರಭುವೆ, ನೀನು ನನ್ನನ್ನು ಅಚಲಳೆಂದು ಕರೆದೆ; ಆದರೆ ಈಗ ಈ ಚಲಿಸುವ ಪರ್ವತಗಳ ಹೊರೆಯಿಂದ ದಣಿದುಹೋಗಿದ್ದೇನೆ.'' ದೇವತೆಗಳ ಅಧಿಪತಿಯಾದ ಇಂದ್ರನಿಗೆ ಬ್ರಹ್ಮನು ಹೇಳಿದ, ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿಹಾಕಿಬಿಡು, ಎಂದು. ವಜ್ರಾಯುಧದಿಂದ ರೆಕ್ಕೆಗಳು ಕತ್ತರಿಸಲ್ಪಟ್ಟವು. ಅದಾದ ಮೇಲೆ ವಾಯು, ಅಗ್ನಿ, ಇಂದ್ರ ಮತ್ತು ವರುಣರು ದಿನಂಪ್ರತಿ ಆರಾರು ಗಂಟೆಗಳ ಕಾಲ ಭೂಮಿಯನ್ನು ಅಲುಗಾಡಿಸಲು ಆರಂಭಿಸಿದರು. ಪ್ರಪಂಚದ ಭವಿಷ್ಯವು ಒಳಿತಾದುದೋ ಕೆಡುಕಿನದೋ ಎಂಬುದು ಇದರಿಂದ ನಿರ್ಧಾರವಾಗುತ್ತದೆಂದು ಅವರ ಅನಿಸಿಕೆಯಾಗಿತ್ತು.

ಆಶ್ಚರ್ಯವೆಂದರೆ ವರಾಹಮಿಹಿರನು ಈ ಕತೆಯನ್ನು ಗಂಭೀರವಾಗಿ ಪರಿಗಣಿಸಿ ವಿವಿಧ ಕಾಲಗಳಲ್ಲಿ ಸಂಭವಿಸಬಹುದಾದ ಭೂಕಂಪಗಳಿಂದ ಏನು ತರ್ಕ ಬೆಳೆಸಬಹುದೆಂಬುದನ್ನು ನಿರ್ದೇಶಿಸಿದ್ದಾನೆ. ಮೇಲೆ ಹೇಳಿದ ನಾಲ್ಕು ದೇವತೆಗಳನ್ನಾಧರಿಸಿ ಭೂಕಂಪಗಳನ್ನು ವಿಂಗಡಿಸಲಾಗಿದೆ. ವರಾಹಮಿಹಿರ ಹೇಳುತ್ತಾನೆ : ''ಭೂಕಂಪವು ಅಗ್ನಿ-ವಾಯುಗಳ ಲಕ್ಷಣವನ್ನು ಮೈಗೂಡಿಸಿಕೊಂಡರೆ ಆಯಾಕಾಲದ ಹೆಸರಾಂತ ರಾಜರು (ಪ್ರಥಿತ ನರೇಶ್ವರರು) ನಾಶವಾಗುತ್ತಾರೆ ಮತ್ತು ಜನರು ಹಸಿವು, ಭಯ, ಸಾವು ಮತ್ತು ಬರಗಳಿಂದ ಕಂಗೆಡುತ್ತಾರೆ.'' ವರುಣ ಮತ್ತು ಇಂದ್ರರ ಲಕ್ಷಣವನ್ನುಳ್ಳ ಭೂಕಂಪದ ಪರಿಣಾಮಗಳೆಂದರೆ ನಾಡಿನಲ್ಲಿ ಸುಭಿಕ್ಷತೆ, ಒಳ್ಳೆಯ ಮಳೆ, ಹೃದಯ ತುಂಬಿಬರುವುದು, ಹಸುಗಳು ವಿಪುಲವಾಗಿ ಹಾಲು ಕೊಡುವುದು ಮತ್ತು ರಾಜರು ವೈರತ್ವವನ್ನು ನೀಗಿಕೊಳ್ಳುವುದು.

ಮನುಷ್ಯನ ಮೆದುಳಿನ ಅಂದಾಜುಗಳು ಇದಕ್ಕಿಂತ ವಿಪರೀತವಾಗಿರಲು ಸಾಧ್ಯವೆ ! ವರಾಹಮಿಹಿರನು ಖಗೋಳಶಾಸ್ತ್ರದಲ್ಲಿ ನಿಷ್ಣಾತನಾಗಿದ್ದವನು. ಅಂಥವನು ಹೀಗೆ ನಗೆಪಾಟಲಿನ ಸಿದ್ಧಾಂತಗಳನ್ನು ಭೂಕಂಪದ ಸಂದರ್ಭದಲ್ಲಿ ಪ್ರತಿಪಾದಿಸುತ್ತಾನಲ್ಲ ಎಂದು ಮೂಗಿನ ಮೇಲೆ ಬೆರಳಿಡುವಂತಾಗಿದೆ. ಅವನು ನಿರಾಕರಿಸಿದ ನಾಲ್ಕು ಅಭಿಪ್ರಾಯಗಳಿಗಿಂತಲೂ ಅವನು ಪುರಸ್ಕರಿಸಿದ ಸಿದ್ಧಾಂತ ಹೇಗೆ ಮೇಲು ಎಂಬ ಅಚ್ಚರಿಯ ನಗೆ ಮೂಡುವುದು ಅನಿವಾರ್ಯ. ಅವುಗಳಷ್ಟೇ ಅಪಸಿದ್ಧಾಂತವಾದ ಅವನದನ್ನು ಪ್ರತಿಪಾದಿಸಿ ಭೂಕಂಪದಿಂದ ಘಟಿಸುವ ಭವಿಷ್ಯವನ್ನು ಈ ಜ್ಯೋತಿಷಿ ನುಡಿಯಲು ಉಪಕ್ರಮಿಸುತ್ತಾನೆಂಬುದು ಒಂದು ಸೋಜಿಗದ ಸಂಗತಿ.

ವರಾಹಮಿಹಿರನ ಈ ''ಭೂಕಂಪ ಭವಿಷ್ಯ'' ಒಂದು ರೀತಿಯಲ್ಲಿ ಜ್ಯೋತಿಷ್ಯದ ಅಪ್ರಯೋಜಕತೆಗೆ ಸಾಕ್ಷಿಯಾಗಿದೆ. ಆ ಜ್ಯೋತಿಷ್ಯವು ಭೂಕಂಪ ಎಂದು ಸಂಭವಿಸುತ್ತದೆಂದು ಭವಿಷ್ಯ ನುಡಿಯಲಾರದು, ಆದರೆ ಅದರ ಭೀಕರ ದುಷ್ಪರಿಣಾಮಗಳ ಬಗ್ಗೆ ಭವಿಷ್ಯ ನುಡಿಯಬಲ್ಲದು ! ವರಾಹಮಿಹಿರನಂತಹ ಪ್ರಗಲ್ಭಮತಿಯವನು ಇಂತಹ ಚಿಲ್ಲರೆ ಶಾಸ್ತ್ರಕ್ಕೆ ಜೋತುಬಿದ್ದರೆ, ಇನ್ನು ಬೀದಿಯ ಸಾಮಾನ್ಯರ ರಗಳೆ ಹೇಗಿರಬೇಡ ! ಒಬ್ಬ ಯಃಕಶ್ಚಿತ್ ಗಿಣಿಶಾಸ್ತ್ರದ ದಾರಿಹೋಕನಂತೆ ವರಾಹಮಿಹಿರನೂ ಮೌಢ್ಯದ ಪ್ರಸಾರಕ್ಕೆ ಸಿದ್ಧನಾದನಲ್ಲ ಎಂದಷ್ಟೇ ನಾವು ಪರಿತಪಿಸಬಹುದು.

**ಡಾ॥ ರಾಮಕೃಷ್ಣ ಭಟ್ಟಾಚಾರ್ಯ**
೩, ಮೋಹನಲಾಲ್ ಸ್ಟ್ರೀಟ್, ಕೊಲ್ಕಾಟ - ೭೦೦ ೦೦೪.
(ಅನುವಾದ : ಜಿ. ರಾಮಕೃಷ್ಣ)

(೩ನೇ ಪುಟದಿಂದ)

ಬದಲು ಆ ಸರಕುಗಳನ್ನು ತಯಾರಿಸುವವರ ತಲೆಹಿಡುಕರು ಏನು ಮಾರುತ್ತಾರೋ ಅವನ್ನು ಕೊಳ್ಳುವ ರಾಜಕೀಯ ನಾಯಕರು ನಮ್ಮ ನೇತಾರರು. ನಮ್ಮ ಸೈನಿಕರನ್ನು ಬಲಿಪಶುಗಳನ್ನಾಗಿ ಮಾಡುವ ಪಾಪದ ಹೊರೆಯ ಪ್ರಜ್ಞೆ ಈ ಪಾತಕಿಗಳಿಗಿರುವುದಿಲ್ಲ. ಅವರು ಒಂದು ವಿದೇಶಿ ಕಾರಿನಲ್ಲಿ ಕುಳಿತು ಓಡಾಡುವ ಸಂಭ್ರಮಕ್ಕಾಗಿ ದೇಶದ ರಕ್ಷಣೆಯು ಗೌಣವಾಗುತ್ತದೆ, ಸೈನಿಕರ ಪ್ರಾಣ ಲಘುವಾಗುತ್ತದೆ. ಭಾಜಪದ ಭಯಂಕರ ಕೊಡುಗೆ ಇದು. ಆಮೇಲೆ ಕಾರ್ಗಿಲ್‌ನಲ್ಲಿ ಹತರಾದವರಿಗೆ ಇವರು ಅಶ್ರುತರ್ಪಣ ನೀಡುತ್ತಾರೆ! ಒಟ್ಟು ಎಷ್ಟು ಕೋಟಿ ನುಂಗಿದ್ದಾರೋ ಹೇಳುವವರಾರು ? ಆದರೆ ನುಂಗುವ ಸಂಸ್ಕೃತಿ ತಮ್ಮದೆಂಬುದನ್ನು ಡಾಟ್ ಕಾಮ್‌ನಲ್ಲಿ ದಾಖಲಿಸಿದ್ದಾರೆ. ಬಫೋರ್ಸ್ ಹಗರಣದ ಬಗ್ಗೆ ಬೊಗಳುತ್ತಾ ಅದನ್ನು ಮೀರಿಸುವ ದ್ರೋಹ ಎಸಗುವವರ ರಾಷ್ಟ್ರಪ್ರೇಮಕ್ಕೆ ಏನನ್ನೋಣ ?

ಬಂಗಾರು, ಸಿಂಗಾರು, ಇವರೆಲ್ಲರ ಹಿಂದೆ ಇರುವ ವ್ಯಕ್ತಿ ದೇಶದ ರಕ್ಷಣಾ ಸಚಿವರ ಸ್ಥಾನಕ್ಕೇರಿದ ಡೈನಮೈಟ್ ವೀರ ಜಾರ್ಜ್ ಫರ್ನಾಂಡೀಸ್. ನೌಕಾಪಡೆಯ ಅಧಿಕಾರಿ ವಿಷ್ಣು ಭಾಗವತ್‌ರನ್ನು ಓಡಿಸಿದ ಈ ಸಚಿವರು ವಿನಮ್ರ ವ್ಯಕ್ತಿ; ಸಿಯಾಚಿನ್‌ಗೆ ಹದಿನೇಳು ಬಾರಿ ಹೋಗಿಬಂದಿರುವುದಾಗಿ ಮಾಹಿತಿ ನೀಡುತ್ತಾರೆ. ಆದರೆ ಅಲ್ಲಿಯ ಸೈನಿಕರಿಗೆ ಬೇಕಾದ ಸರಂಜಾಮನ್ನು ಕೊಳ್ಳುವಾಗ ಅದೆಷ್ಟು ನುಂಗಣ್ಣಗಳನ್ನು ಪೋಷಿಸುತ್ತಾರೆ! ಕ್ರಿಕೆಟ್ ಕ್ರೀಡೆಯ ಧಾಂಡಿಗನೊಬ್ಬನ ಬಗ್ಗೆ ಆಪಾದನೆಗಳು ಬಂದಾಗ ಆತನಿಗೆ ಬೆಂಬಲ ನೀಡಿದ ಜಯಾ ಜೈಟ್ಲಿ ನೇರವಾಗಿ ಫರ್ನಾಂಡೀಸರ ಅಧಿಕೃತ ನಿವಾಸದಲ್ಲೇ ಮಾಧ್ಯಮದವರನ್ನುದ್ದೇಶಿಸಿ ಹೇಳಿಕೆಗಳನ್ನು ನೀಡಿದ್ದರು. ತನ್ನ ಸ್ಥಾನದ ಶಕ್ತಿಯನ್ನು ತಮ್ಮ ಪಕ್ಷದ ಅಧ್ಯಕ್ಷರಿಗೆ ಹಸ್ತಾಂತರಿಸಿದ ಜಾರ್ಜ್ ಒಮ್ಮೆಯೂ ಆ ಬಗ್ಗೆ ವ್ಯಥಿಸಲಿಲ್ಲ, ಅಡ್ಡಿಯೊಡ್ಡಲಿಲ್ಲ. ತಮ್ಮ ಪೂರ್ವಾಶ್ರಮದಲ್ಲಿ ಪಶ್ಚಿಮ ಜರ್ಮನಿಯಿಂದ ಆರ್ಥಿಕ 'ನೆರವು' ಪಡೆಯುತ್ತಿದ್ದರೆಂದು ಜಾರ್ಜ್ ಬಗ್ಗೆ ಅಭಿಪ್ರಾಯಗಳಿವೆ. ಆದರೂ ಅವರು ಸಜ್ಜನರೇ! ನಮ್ಮ ದೇಶದಲ್ಲಿ ರಕ್ಷಣಾ ಖಾತೆ ಖರ್ಚು ಮಾಡುವಷ್ಟು ಹಣ ಬೇರಾವ ಖಾತೆಗೂ ಲಭ್ಯವಿಲ್ಲ. ಆದ್ದರಿಂದ ಆಮದು ಮಾಡಿಕೊಳ್ಳಲಾಗುವ ಶಸ್ತ್ರಾಸ್ತ್ರಗಳ ಬಗೆಗಿನ ಅವ್ಯವಹಾರಗಳು ಇಲ್ಲಿ ಹೇರಳವಾಗಿರುವುದು ಸಾಧ್ಯ. - ಅದನ್ನು ತಗ್ಗಿಸಿದ್ದೇವೆನ್ನುವ ಜಾರ್ಜ್ ಸ್ವತಃ ತಮ್ಮ ಅಧಿಕೃತ ನಿವಾಸವನ್ನು ಕೆಟ್ಟ ವ್ಯವಹಾರವನ್ನು ಕುದುರಿಸಲು ಬಿಟ್ಟುಕೊಟ್ಟರೆಂಬುದು ಕೋಪಕ್ಕೆ ಕಾರಣವಾಗುವುದು ಸಹಜ. ದೇಶದ ರಕ್ಷಣೆ ಹಾಗೂ ಆಯುಧ ಸಾಮಗ್ರಿಗಳ ವಹಿವಾಟು ಇಷ್ಟು ಕಠೋರ ಸ್ಥಿತಿಗೆ ಬಂದಿರುವುದು ಭಾಜಪ ನೇತೃತ್ವದ ಸರ್ಕಾರಕ್ಕೆ ಹಿಡಿದ ಕನ್ನಡಿಯಾಗಿದೆ. ಇದನ್ನು ಸರಿಪಡಿಸಲು ಯಾವ ಮತ್ತು ಎಂತಹ ಹೋರಾಟಕ್ಕಾದರೂ ಸಾರ್ವಜನಿಕರು ಸಿದ್ಧರಾಗಬೇಕು, ಆಗುತ್ತಾರೆ.

ಖಾಸಗಿತನವೆಂದರೆ ಶ್ರೇಷ್ಠವೆಂದು ಡಂಗೂರ ಹೊಡೆಯುವವರಿಗೆಲ್ಲಾ ಈ ವರ್ಷದ ಯಶವಂತ ಸಿನ್ಹಾ ಬಜೆಟ್ ಬಲವಾದ ಪ್ರಹಾರ ನೀಡಿದೆ. ಒಳ್ಳೆಯ ಲಾಭ ಮಾಡುವ ಸಾರ್ವಜನಿಕ ಉದ್ದಿಮೆಗಳನ್ನು ಕೊಳೆತ ಮೊಟ್ಟೆಯೋ ಎಂಬಂತೆ ಬೇಕಾಬಿಟ್ಟಿ ಖಾಸಗಿ ಮಾಲಿಕರಿಗೆ ವಹಿಸಿಕೊಡುವುದು ಭಾಜಪ ಸರ್ಕಾರದ ಕಟುನೀತಿ. ಅದರಂತೆ ಭಾರತ ಅಲ್ಯುಮಿನಿಯಂ ಕಂಪೆನಿಯನ್ನು ಲೂಟಿಮಾಡಲು ಕೇಂದ್ರ ಸರ್ಕಾರ ಹೊರಟಿದೆ. ಶೌರಿಯ ಶೌರ್ಯ ಪ್ರದರ್ಶನವಾಗುವುದು ಇಂತಹದರಲ್ಲೇ! ಖಾಸಗಿಯಾಗಿ ನಡೆಸುತ್ತಿರುವ ಷೇರುಪೇಟೆಯ ಈಚಿನ ಪರಿಸ್ಥಿತಿಯನ್ನು ನೋಡಿದರೆ ಖಾಸಗಿತನದ "ಶ್ರೇಷ್ಠತೆಯು" ಮುಖಕ್ಕೆ ರಾಚುತ್ತದೆ. ಸಾವಿರಾರು ಮಂದಿ ರಾತ್ರೋರಾತ್ರಿ ನಿರ್ಗತಿಕರಾಗುವಂತೆ ಮಾಡುವ ಜಾಣತನ ಷೇರುಪೇಟೆಯ ಖಾಸಗಿ ದಲ್ಲಾಳಿಗಳಿಗಿದೆ. ಅವರ ಆಟಗಳು ಇನ್ನೂ ಚೆನ್ನಾಗಿ ನಡೆಯಲೆಂದು ಸಿನ್ಹಾ ತಮ್ಮ ಬಜೆಟ್‌ನಲ್ಲಿ ಜೂಜಿನ ಪ್ರಸಂಗಗಳಿಗೆ ಆಹ್ವಾನ ನೀಡಿದ್ದಾರೆ. ಉದ್ದಿಮೆಗಳ ಅಭಿವೃದ್ಧಿಗೆ ತೊಡಗಿಸಲೆಂದು ಬಂಡವಾಳವನ್ನು ಸಾರ್ವಜನಿಕರಿಂದ ಸಂಗ್ರಹಿಸುವ ಸಲುವಾಗಿ ಉಳಿತಾಯಗಾರರಿಗೆ ಸಿನ್ಹಾ ಷೇರುಪೇಟೆಯ ಹಾದಿ ತೋರಿಸಿದ್ದಾರೆ. ಮನಮೋಹನ ಸಿಂಗ್ ಪ್ರಾರಂಭಿಸಿದ ಚಾಳಿ ಈಗ ಇನ್ನೂ ಪ್ರಬಲವಾಗಿ ಹಬ್ಬಿ ಹರ್ಷದ್ ಮೆಹ್ತಾಗಳ ಸಂತಾನವನ್ನು ವರ್ಧಿಸಲಿದೆ. ಬೇರೆ ಕಡೆಗಳಲ್ಲಿ ಉಳಿತಾಯ ಮಾಡಿದರೆ ದಕ್ಕುತ್ತಿದ್ದ ಬಡ್ಡಿಯನ್ನು ಮೊಟಕು ಗೊಳಿಸಿ ಲಾಭದಾಯಕ ಉಳಿತಾಯಕ್ಕೆ ಷೇರು ಪೇಟೆಗೆ ಹೋಗಿರೆಂದು ಸಿನ್ಹಾ ನಿರ್ದೇಶಿಸಿದ್ದಾರೆ. ಇವರ ಹಣದಲ್ಲಿ ಹರ್ಷದ್ ಮೆಹ್ತಾಗಳು ಹರ್ಷದಿಂದ ಹಣ ಮಾಡಿಕೊಂಡು ಇವರನ್ನು ಬೀದಿಪಾಲು ಮಾಡುತ್ತಾರೆ. ಉದ್ದಿಮೆಗಳಲ್ಲಿ ತೊಡಗಿಸಲು ಈ ಉಳಿತಾಯದ ಹಣ ಉಳಿಯುವುದೇ ಇಲ್ಲ. ಎಲ್ಲಾ ಷೇರುಪೇಟೆಯ ತಿಮಿಂಗಲಗಳ ಪಾಲಾಗುತ್ತದೆ. ಸಿನ್ಹಾ ಬಜೆಟ್ ಪೂರ್ತಿಯಾಗಿ ಜೂಜಾಟದ ಬಜೆಟ್ ಆಗಿರುವುದು ಈ ಕಾರಣದಿಂದ.

ಇದೇ ಬಜೆಟ್‌ನ ಬೇರೆ ಪರಿಣಾಮಗಳು ಸಮಾಜಘಾತುಕವಾಗುವುದರಲ್ಲಿ ಸಂಶಯವಿಲ್ಲ. ನಾವು ಸ್ವತಃ ಉತ್ಪಾದಿಸುವ ಯಾವ ಸರಕಿಗೂ ಮಾರುಕಟ್ಟೆ ಸಿಗದ ರೀತಿಯಲ್ಲಿ ಎಲ್ಲವನ್ನೂ ವಿದೇಶಿ ಯಜಮಾನರಿಗೆ ಬಳುವಳಿಯಾಗಿ ನೀಡಿ ಹೊಸ ಶತಮಾನದ ಆದಿಯಲ್ಲಿ ಜನರ ಎದೆಗಳಿಗೆ ಬೆಂಕಿ ಇಟ್ಟಿರುವುದು ಸಿನ್ಹಾ ವೈಶಿಷ್ಟ್ಯ. ಕೃಷಿಕ್ಷೇತ್ರವನ್ನು ನಾಶ ಮಾಡುವುದೇ ತಮ್ಮ ಉದ್ದೇಶವೆಂಬ ರೀತಿಯಲ್ಲಿ ಸಿನ್ಹಾ ಬಜೆಟ್ ತಯಾರಿಸಿದ್ದಾರೆ. ರಾಷ್ಟ್ರೀಯತೆಯ ಹೆಸರಿನಲ್ಲಿ ಇಂತಹ ಅಪಚಾರವನ್ನು ಯಾರೂ ನಿರೀಕ್ಷಿಸಿರಲಿಲ್ಲ. ಅಮೆರಿಕಾದ ರಾಯಭಾರಿ ಇತ್ತೀಚೆಗೆ ಹೈದರಾಬಾದಿನ ಒಂದು ಸಭೆಯಲ್ಲಿ ಈ ಬಜೆಟ್ಟನ್ನು ಸ್ವಾಗತಿಸಿ ಇದು 'ಅಭಿವೃದ್ಧಿಶೀಲ' ಬಜೆಟ್ ಎಂದು ಶ್ಲಾಘಿಸಿದರು. ಯಾರ ಅಭಿವೃದ್ಧಿ ಎಂಬುದನ್ನು ಆತ ಹೇಳಲಿಲ್ಲ. ಆದರೆ ಅದು ಗೋಪ್ಯವಲ್ಲ. ನಮ್ಮ ದೇಶದಲ್ಲಿ ಮನಮೋಹನ ಸಿಂಗ್ ಉದ್ಘಾಟಿಸಿದ ನೀಚ ಪರಂಪರೆ ಈಗ ಪರಾಕಾಷ್ಠೆಯನ್ನು ಮುಟ್ಟಿದೆ. ಅದು ವಿದೇಶಿ ಬಂಡವಾಳವನ್ನು ಒಲಿಸುವುದು, ಮಾರುಕಟ್ಟೆಯನ್ನು ಅವರ ಅನುಕೂಲಕ್ಕೆ ತಕ್ಕಂತೆ ಪರಿವರ್ತಿಸುವುದು, ನಮ್ಮ ದೇಶದ ಉತ್ಪಾದಕರ ತಲೆಯ ಮೇಲೆ ಬಂಡೆ ಎಳೆಯುವುದು. ಸಿನ್ಹಾ ಬಜೆಟ್ ಬೇರೆಲ್ಲ ಹಿಂದಿನ ಬಜೆಟ್‌ಗಳಿಗಿಂತಲೂ ಹೆಚ್ಚು ಜನವಿರೋಧಿಯಾಗಿದೆ, ರಾಷ್ಟ್ರ ವಿರೋಧಿಯಾಗಿದೆ. ಇಂತಹ ಬಜೆಟ್‌ಗಳಿಗೆ ಪರ್ಯಾಯವಾಗಿ ಜನರ ಬಜೆಟ್ ಬರುವಂತಾಗಲು ಈ ತಿಂಗಳ ವಿದ್ಯಮಾನಗಳು ಪ್ರಚಂಡವಾಗಿ ಜನರನ್ನು ಉದ್ಬೋಧಿಸಿವೆ. - ಪಶ್ಚಿಮ ಬಂಗಾಲದಲ್ಲಿ 'ಮಹಾಜ್ಯೋತಿ' ಹೊತ್ತಿಕೊಳ್ಳಲಿಲ್ಲವಾದ್ದರಿಂದ ಮಮತಾ ಬ್ಯಾನರ್ಜಿ ಹೊಸ ಪಟ್ಟು ಹಾಕಿದ್ದಾರೆ. ಈವರೆಗಿನ ವಾಜಪೇಯಿ ಸರ್ಕಾರದ ನಿರ್ಧಾರಗಳನ್ನು ವಿರೋಧಿಸದೆ ಈಗ ಚುನಾವಣೆಯಲ್ಲಿ ಇಡೀ ಕಾಂಗ್ರೆಸ್ ತನ್ನಡಿಗೆ ಬರಲೆಂದು ಆಕೆ ಲೆಕ್ಕಾಚಾರದ ತಂತ್ರ ಹೂಡಿದ್ದಾರೆ. ಎಲ್ಲ ರಾಜ್ಯಗಳಲ್ಲೂ ಇಂತಹ ಸಾಮಯಿಕ ಬದಲಾವಣೆಗಳನ್ನು ಜನ ನೋಡುತ್ತಿದ್ದಾರೆ. ಪ್ರಜ್ಞಾವಂತರಾಗಿ, ಕ್ರಿಯಾಶೀಲರಾಗಿ ಈಗ ಇವರು ಜನರ ಶತ್ರುಗಳನ್ನು ಹಿಮ್ಮೆಟ್ಟಿಸಬೇಕಾಗಿದೆ.

(೫ನೇ ಪುಟದಿಂದ)

ಬಂಡವಾಳ ಹೂಡಿಕೆಯನ್ನು ಹಿಂತೆಗೆದುಕೊಳ್ಳುವಂತಹ ಮಹತ್ವದ ವಿಷಯದ ಸಂದರ್ಭದಲ್ಲಾಗಲಿ, ಅಣುಬಾಂಬ್‌ನ ಪ್ರಯೋಗದಂತಹ ಗಂಭೀರ ವಿಷಯದಲ್ಲಾಗಲಿ, ಇಲ್ಲವೆ ಇತ್ತೀಚಿನ ಬಾಲ್ಕೊ ಪ್ರಕರಣ ಸಂಬಂಧಿಸಿಯಾಗಲಿ ಆಳುವ ಪಕ್ಷ ಸರ್ವಪಕ್ಷಗಳ ಒಮ್ಮತ ಪಡೆದಿದೆಯೇ ? ಇವು ಯಾವುದಕ್ಕೂ ಅನ್ವಯಿಸದ 'ಒಮ್ಮತ'ದ ನಾಟಕ ಮಹಿಳೆಯರ ಮೀಸಲಾತಿಗಾಗಿ ಮಾತ್ರ ಏಕೆ ಬೇಕು ? ಮಹಿಳಾ ಸಮುದಾಯಕ್ಕೆ ಆಳುವ ಪಕ್ಷ ತೋರುತ್ತಿರುವ ಮೊಸಳೆ ಕಣ್ಣೀರಿನ ಕಾಳಜಿ ಇದರಿಂದ ಸೂರ್ಯಸ್ಪಷ್ಟವಾಗುತ್ತದೆ. ಬಹುಮತದ ಆಧಾರದ ಮೇಲೆ ಈ ಮಸೂದೆಯನ್ನು ಮಂಡಿಸಬೇಕೆಂದು ವಿರೋಧ ಪಕ್ಷಗಳು ಒತ್ತಾಯಿಸುತ್ತಿರುವಾಗಲೂ ಆಳುವ ಪಕ್ಷ 'ಸರ್ವಪಕ್ಷಗಳ ಒಮ್ಮತ'ದ ನಾಟಕ ಆರಂಭಿಸುತ್ತಿರುವುದೇಕೆ ? ಮುಂದಿನ ಚುನಾವಣೆಗಳಿಗೆ ಇದು ಪೂರ್ವಸಿದ್ಧತೆಯೇ ?

ಚುನಾವಣಾ ಸಂದರ್ಭದಲ್ಲಿ ರಾಜಕೀಯ ಪಕ್ಷಗಳು ನೀಡುವ ಆಶ್ವಾಸನೆಗಳಲ್ಲಿ 'ಮಹಿಳಾ ಮೀಸಲಾತಿ'ಯೂ ಒಂದಂಶವಾಗಿ ಸೇರಿಹೋಗಿದೆ. ಈ ವಿಷಯದ ಬಗ್ಗೆ ರಾಜಕೀಯ ಪಕ್ಷಗಳಿಗಿರುವ ಕಳಕಳಿಯ ಬಗ್ಗೆ ಮಾತ್ರ ಎಲ್ಲ ಮತದಾರರಿಗೂ ಅನುಮಾನವಿದ್ದೇ ಇದೆ. 'ಮಹಿಳಾ ಕಾಳಜಿ'ಯನ್ನು ಪ್ರದರ್ಶಿಸಲು ಎಲ್ಲ ರಾಜಕೀಯ ಪಕ್ಷಗಳಿಗೂ 'ಮಹಿಳಾ ದಿನಾಚರಣೆ'ಯೂ ಸದವಕಾಶವಾಗಿ, ಎಲ್ಲರೂ ಮಹಿಳೆಯರ ಪರ ತಮ್ಮ ಪಕ್ಷಗಳ ಕಾಳಜಿಯ ಮಹಾಪೂರ ಹರಿಸಿದ್ದೇ ಬಂತು. ಈ ತಿಂಗಳಲ್ಲೇ ಪಾರ್ಲಿಮೆಂಟು ಅಧಿವೇಶನವೂ ನಡೆಯುತ್ತಿದೆ. 'ಸರ್ವ ಪಕ್ಷಗಳ ಒಮ್ಮತದ ನಾಟಕ'ವೂ ಆರಂಭವಾಗಿದೆ. ಎಂದಿನಂತೆ ಆಳುವ ಪಕ್ಷ ಅಧಿವೇಶನದ ಕೊನೆಯ ದಿನ ಚರ್ಚೆಗೆ ಆಸ್ಪದವಿಲ್ಲದಂತೆ ಮಾಡಿ ಮಸೂದೆಯ ಮಂಡನೆಯ ನಾಟಕವಾಡುವುದೇ ಎಂದು ಅದೇ ಹಳೆಯ ನಾಟಕ ನೋಡಲು ನಾವೆಲ್ಲ ಸಿದ್ಧರಾಗಬೇಕಿದೆ! ನಾಚಿಕೆಯಿಲ್ಲದ ಈ ಭಾಜಪ ರಾಜಕೀಯ ಪ್ರಹಸನಕ್ಕೆ ಇತಿಶ್ರೀ ಹಾಡಬೇಕು.

- ಡಾ|| ಎನ್. ಗಾಯತ್ರಿ

# ನೀರು : ಭೂಮಿತಾಯಿಯ ಎದೆ ಹಾಲು

ವಿ. ಚಂದ್ರಶೇಖರ ನಂಗಲಿ

**ಇ**ಪ್ಪತ್ತನೆಯ ಶತಮಾನವನ್ನು 'ವೈಜ್ಞಾನಿಕ ಯುಗ'ವೆಂದು ಕರೆಯಲಾಗಿದೆ. ಅಣುಬಾಂಬಿನಿಂದ ಹಿಡಿದು ಮಾನವ ಜೀನೋಮ್‌ವರೆಗೆ ನಡೆದಿರುವ ಮತ್ತು ನಡೆಯುತ್ತಿರುವ ಬಗೆಬಗೆಯ ಅನುಷ್ಠಾನಗಳು ಮತ್ತು ಅಧ್ಯಯನಗಳು ಪ್ರತಿಯೊಂದು ವಸ್ತು ವಿಷಯವನ್ನು ವಿಜ್ಞಾನದ ಒರೆಗಲ್ಲಿಗೆ ಹಚ್ಚಿ ನೋಡಲು ಒತ್ತಾಯಿಸುತ್ತಿವೆ... ಬುದ್ಧಿಜೀವಿಯಾದ ಮನುಷ್ಯನು ವಿಚಾರ-ವಿಮರ್ಶೆ - ಆಲೋಚನೆ - ಚಿಂತನೆ - ತರ್ಕಬುದ್ಧಿಗಳೆಂಬ ಕಣ್ಣುಗಳಿಂದಲೇ ಸಕಲ ವಿದ್ಯಮಾನಗಳನ್ನೂ, ಸಮಸ್ತ ಅನುಭವಗಳನ್ನೂ ಅರ್ಥಮಾಡಿಕೊಳ್ಳುತ್ತಿದ್ದಾನೆ. 'ಭೂಮಿ' ಎಂದರೆ 'ಗ್ರಹ'ವೆಂದೂ 'ನೀರು' ಎಂದರೆ 'ಸಂಯುಕ್ತ ಪದಾರ್ಥ' ($H_2O$)ವೆಂದೂ, 'ನಿಸರ್ಗ' ಎಂದರೆ 'ಸಂಪನ್ಮೂಲ'ಗಳೆಂದೂ ಭಾವಿಸಿ, ತನಗೋಸ್ಕರವೇ ಇವುಗಳಿವೆಯೆಂಬ ತೀರ್ಮಾನಕ್ಕೆ ಬಂದುಬಿಟ್ಟಿದ್ದಾನೆ. ದಾಂಡೇಲಿ ಅಭಯಾರಣ್ಯಕ್ಕೆ ಸೇರಿದ 'ಕುಳಗಿ ನಿಸರ್ಗಧಾಮ'ದ ಪ್ರವೇಶದ್ವಾರದಲ್ಲಿ ವಿರಾಜಿಸುತ್ತಿರುವ ಕಮಾನು ಫಲಕದಲ್ಲಿ ನಮ್ಮ ಅರಣ್ಯ ಇಲಾಖೆಯವರು ಬಿತ್ತರಿಸಿದ 'ಹಸಿರು ಸಂದೇಶ' ಹೀಗಿದೆ : **"ನಿಸರ್ಗ ನಗುತಿದೆ ಹಸಿರಾಗಿ, ಮಾನವನ ಪ್ರಗತಿಗಾಗಿ"**

ಇಂಥ ಮನೋಭ್ರಾಂತಿಗೆ ಮೇಲೆ ವಿವರಿಸಿದ ಆಧುನಿಕ ಚಿಂತನಾ ಕ್ರಮಗಳು ಮತ್ತು ಪ್ರಗತಿ ಮೀಮಾಂಸೆಯನ್ನು ಕುರಿತ ಅಪವ್ಯಾಖ್ಯಾನಗಳೇ ಕಾರಣವೆಂದರೆ ತಪ್ಪಾಗಲಾರದು. ಮನುಷ್ಯನನ್ನು 'ಇಡಿಯಾದ ಶರೀರ'ವನ್ನಾಗಿ ನೋಡುವುದಕ್ಕಿಂತಲೂ ಮನುಷ್ಯನ ಅಂಗಾಂಗಗಳನ್ನು ಬಿಡಿ-ಬಿಡಿಯಾಗಿ, ಸೂಕ್ಷ್ಮಾತಿಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿ ಒಂದೊಂದು ಅಂಗಭಾಗಕ್ಕೆ ಒಬ್ಬೊಬ್ಬ ಸ್ಪೆಶಲಿಸ್ಟ್ ಇರುವಂತೆಯೇ ಇಂದಿನ ಶೈಕ್ಷಣಿಕ ವ್ಯಾಸಂಗದಲ್ಲಿ ಒಂದೊಂದು ಕ್ಷೇತ್ರಕ್ಕೆ ಒಬ್ಬೊಬ್ಬ 'ವಿಷಯ ಪರಿಣತರ' ವಿಶೇಷ ಪಡೆಯೇ ಇದೆ. ಉದಾಹರಣೆಗೆ, 'ಪ್ರಾಕೃತಿಕ ವಿಜ್ಞಾನಗಳು' ಎಂಬ ವಿಭಾಗವನ್ನೇ ನೋಡಿ : ಭೂಗೋಳಶಾಸ್ತ್ರ, ಭೂಗರ್ಭಶಾಸ್ತ್ರ, ಖನಿಜಶಾಸ್ತ್ರ, ಅರಣ್ಯವಿಜ್ಞಾನ, ಸಾಗರವಿಜ್ಞಾನ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಪಕ್ಷಿಶಾಸ್ತ್ರ, ಕೀಟವಿಜ್ಞಾನ, ಮಾನವಶಾಸ್ತ್ರ ಇನ್ನೂ ಮುಂತಾದ ಬಿಡಿ ಬಿಡಿಯಾದ ಮತ್ತು ಸೂಕ್ಷ್ಮಾತಿಸೂಕ್ಷ್ಮ ಅಧ್ಯಯನಗಳು ಒಂದಕ್ಕೊಂದು ಸಂಬಂಧವಿಲ್ಲದಂತೆ ಬೃಹತ್ತಾಗಿ ಬೆಳೆದುಬಿಟ್ಟಿವೆ. ಒಂದೊಂದು ಖನಿಜವನ್ನು ಕುರಿತು ಒಂದೊಂದು ಅಧ್ಯಯನ ವಿಧಾನಗಳು ಬೆರಗು ಹುಟ್ಟಿಸುವಷ್ಟು ಭವ್ಯವಾಗಿ ಬೆಳೆದುಬಿಟ್ಟಿವೆ. 'ಭೂಮಿ' ಎಂದರೆ ಒಂದು 'ಸಂಪನ್ಮೂಲ'ದ ಭಂಡಾರದಂತೆ ಕಾಣುತ್ತದೆ. ಭೂಮಿಯು ಒಡವೆಯಲ್ಲ ಅಥವಾ ಗ್ರಹವಲ್ಲ! ಭೂಮಿಯು ಜೀವ ಸಂಕುಲದ ತಾಯಿ. ಭೂಮಿಯನ್ನು ನೋಡುವ ವೈಜ್ಞಾನಿಕ ದೃಷ್ಟಿಗೆ ಇಂದು ಮಾನವೀಯತೆಯ ಅಥವಾ ಹೃದಯದ ಸ್ಪರ್ಶ ಬೇಕಾಗಿದೆ. 'ಚಿಗರಿಗಂಗಳ ಚೆಲುವಿ' ಎಂಬ ಕವಿತೆಯಲ್ಲಿ ವರಕವಿ ದ.ರಾ.ಬೇಂದ್ರೆ ಭೂಮಿಯನ್ನು ಒಡವೆಯನ್ನಾಗಿ ನೋಡುವ ದೃಷ್ಟಿ ಬದಲಾಗಬೇಕೆಂದು ಪ್ರತಿಪಾದಿಸಿದ್ದಾರೆ.

**"ಒಡವ್ಯಲ್ಲೋ ಮಗನೆ! ಉಸಿರಿದ್ದ ಒಡಲೊ"** - ಎಂಬ ಭೂಮಿತಾಯಿಯ ಮಾತುಗಳು ಹೃದಯಸ್ಪರ್ಶಿಯಾಗಿದೆ. ಎಷ್ಟೋ ವೇಳೆ, ಬರಿಯ ಭೌತಿಕ ದೃಷ್ಟಿಯ, ಪ್ರಾಪಂಚಿಕ ವ್ಯವಹಾರಗಳಲ್ಲೇ ಸವೆದುಹೋಗುವ ಬುದ್ಧಿಜೀವಿಗಳು ಮತ್ತು ವಿಜ್ಞಾನಿಗಳಿಗಿಂತಲೂ, ಭೂಮಿ ಮತ್ತು ಆಕಾಶಗಳನ್ನು ತಾಯಿ-ತಂದೆಯರೆಂದು ಭಾವಿಸುವ ರೈತಾಪಿ ಜನಸಮುದಾಯಗಳು ನನ್ನ ಕಣ್ಣಿಗೆ ವಿವೇಕಿಗಳಾಗಿಯೂ, ಮಾನವಂತ ಮನುಷ್ಯರಾಗಿಯೂ ಕಂಡಿದ್ದಾರೆ. ಕನ್ನಡದ ಈ ಪ್ರಸಿದ್ಧ ಜನಪದ ತ್ರಿಪದಿಯನ್ನು ಆಲಿಸಿ :

ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಲಿ ?  
ಎಳ್ಳು ಜೀರಿಗೆ ಬೆಳೆಯೋಳ ಭೂಮಿತಾಯ  
ಎದ್ದೊಂದು ಗಳಿಗೆ ನೆನೆದೇನ ॥

'ಭೂಗ್ರಹ'ವೆಂಬ ವೈಜ್ಞಾನಿಕ ದೃಷ್ಟಿಗಿಂತಲೂ 'ಭೂಮಿತಾಯಿ' ಎಂಬಂಥ ಜಾನಪದ ಚಿಂತನಾಕ್ರಮ ನಮಗಿಂದು ತುಂಬಾ ಪ್ರಸ್ತುತವೆನಿಸುತ್ತದೆ. ನಮ್ಮ ಕೋಲಾರ ಜಿಲ್ಲೆಯ 'ನಂದಿ ಹಿಲ್ಸ್' ನಲ್ಲಿ ಹುಟ್ಟುವ ನದಿಗಳಲ್ಲಿ 'ಪಾಲಾರ್' ಕೂಡ ಒಂದು. ಸ್ಥಳೀಯರಾದ ತೆಲುಗು ಮಾತನಾಡುವ ಜನಸಮುದಾಯಗಳು 'ಪಾಲೇರು' (ಪಾಲು + ಏರು : ಹಾಲಿನ ಹೊಳೆ) ಎನ್ನುತ್ತಾರೆಯೆ ಹೊರತು 'ಪಾಲಾರ್' ಎಂದು ಉಚ್ಚರಿಸುವುದಿಲ್ಲ. ಇದು ಇಂಗ್ಲಿಷ್ ಮೂಲಕ ನಾಗರಿಕರ ಬಾಯಲ್ಲಿ ಪಡೆದುಕೊಂಡ ಉಚ್ಚಾರವಾಗಿದೆ. ಇದನ್ನಿಲ್ಲಿ ಪ್ರಸ್ತಾಪಿಸಲು ಕಾರಣವೇನೆಂದರೆ ನಮ್ಮ ಜನಪದರು ನೀರನ್ನು ವಿಜ್ಞಾನಿಗಳಂತೆ $H_2O$ ಎಂದು ವಿಶ್ಲೇಷಿಸದೆ, 'ಹಾಲು' ಎಂದೇ ಕರೆದಿದ್ದಾರೆ. ಜನಪದ ಚಿಂತನಾ ಕ್ರಮದಲ್ಲಿ **'ನದಿಗಳೆಲ್ಲವೂ ಭೂಮಿತಾಯಿಯ ಎದೆಹಾಲು'** ಎಂಬುದನ್ನಿಲ್ಲಿ ಗ್ರಹಿಸಬೇಕು. ಜನಪದರಿಂದ ಧಾತು-ಧೋರಣೆಗಳನ್ನು ಪಡೆದುಕೊಂಡಿರುವ ಕವಿ ಬೇಂದ್ರೆ ಅವರು ಪರ್ವತ ಪ್ರದೇಶಗಳಲ್ಲಿ ಹುಟ್ಟುವ ನಮ್ಮ ದೇಶದ ನದಿಗಳನ್ನು ಲಕ್ಷಿಸಿ ಹೀಗೆ ಹೇಳಿದ್ದಾರೆ : **"ಹೊಳೆಗೆ ತಾಯಿ ಮೊಲೆಯಾಗಿ ಬಾಳುತಿವೆ ಸರ್ವ ಪರ್ವತಾಗ್ರ"** - ಅಂದರೆ ಎಲ್ಲ ಬೆಟ್ಟಗುಡ್ಡಗಳು ಭೂಮಿತಾಯಿಯ ಮೊಲೆಗಳಿದ್ದಂತೆ. ಅಲ್ಲಿ ಹುಟ್ಟುವ ಹೊಳೆ, ಉಕ್ಕುವ ಊಟೆಗಳೆಲ್ಲ ಆ ತಾಯಿಯ ಎದೆ ಹಾಲು. ಆದರೆ, ಇಂದು ಆಧುನಿಕ ನಾಗರಿಕತೆಯ ಅತ್ಯಾಚಾರ ಮತ್ತು ಅನಾಚಾರಗಳಿಂದ ಬಹುತೇಕ ನಗರ ಪ್ರದೇಶಗಳಲ್ಲಿ ನದಿಗಳ ಅಂತರ್‌ಜಾಲ ಮತ್ತು ಕೆರೆಗಳ ಬೃಹತ್ ಸರಪಳಿ ಡೋ-ಡೋ ಪಕ್ಷಿಯಂತೆ ಕಣ್ಮರೆಯಾಗುತ್ತಿದೆ. ಇದನ್ನು ನಿರ್ದಿಷ್ಟವಾಗಿ ಗ್ರಹಿಸಲು ಕೋಲಾರ ಜಿಲ್ಲೆಯ ಉದಾಹರಣೆ ನೀಡುತ್ತೇನೆ.

ಪಶ್ಚಿಮದಿಂದ ಪೂರ್ವಕ್ಕೆ ಕೊಂಚ ಇಳಿಜಾರಾಗಿರುವ ದಖ್ಖನ್ ಪ್ರಸ್ಥಭೂಮಿಯ ಒಂದು ಸಣ್ಣ ಬಿಂದುವಾಗಿರುವ ಕೋಲಾರ ಜಿಲ್ಲೆಯಲ್ಲಿ 'ನಂದಿ'ಯ ಪಂಚಗಿರಿಗಳು, ಶತಶೃಂಗ ಪರ್ವತ, ಕುರುಡು ಮಲೆ ಮುಂತಾದವು ಸುಪ್ರಸಿದ್ಧ ಪರ್ವತಪ್ರದೇಶಗಳಾಗಿವೆ. ಇಲ್ಲಿ ಅಸಂಖ್ಯಾತ ದೋಣೆಗಳು, ಉಕ್ಕುವ ಊಟೆಗಳು, ಚಿಲುಮೆಗಳು, **'ನದಿ ಮೂಲ'**ಗಳೆಂದು ಹೆಸರಾಗಿವೆ. 'ನಂದಿ ಹಿಲ್ಸ್'ನಲ್ಲಿ ಅರ್ಕಾವತಿ, ಪಾಲಾರ್, ಪೆನ್ನಾರ್, ಉತ್ತರ ಪಿನಾಕಿನಿ, ದಕ್ಷಿಣ ಪಿನಾಕಿನಿ ನದಿಗಳು ಹುಟ್ಟಿ ಹರಿದರೆ, ಕೋಲಾರ ನಗರದ ಶತಶೃಂಗ ಪರ್ವತದಲ್ಲಿ 'ಅಂತರಗಂಗೆ' ಎಂಬ ನಿಸರ್ಗ ಸಹಜ ಚಿಲುಮೆಯಿದೆ. ಕುರುಡು ಮಲೆಯಲ್ಲಿ 'ಕೌಂಡಿನ್ಯ ನದಿ'ಯು ಹುಟ್ಟುತ್ತದೆ. ಇಂಥ ಉದಾಹರಣೆಗಳು ಇನ್ನೂ ಸಾಕಷ್ಟಿವೆಯಾದರೂ ನಾನಿಲ್ಲಿ ಚಿಂತನೆಗಾಗಿ ಕೆಲವನ್ನು ಮಾತ್ರ ಪ್ರಸ್ತಾಪಿಸುತ್ತಿದ್ದೇನೆ. ಕೋಲಾರ ಜಿಲ್ಲೆಯ ಪೂರ್ವಕ್ಕೆ ಆಂಧ್ರ ಪ್ರದೇಶ ಮತ್ತು ತಮಿಳುನಾಡಿಗೆ ಸೇರಿದ ಎರಡು ಬೃಹತ್ ಕಣಿವೆಗಳಿವೆ. ೧. ಮೊಗಿಲಿ ಕಣಿವೆ ೨. ಕೈಗಲ್ ಕಣಿವೆ. ಕೋಲಾರದ ಭೂಮೇಲ್ಮೈ ಲಕ್ಷಣಗಳು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿರುವುದರಿಂದ ಈ ಜಿಲ್ಲೆಯಲ್ಲಿ ಸುರಿಯುವ ಮಳೆ ಹರಿಯುತ್ತಾ, ಹರಿಯುತ್ತಾ ಮೇಲಿನ ಎರಡೂ ಕಣಿವೆಗಳಿಗೆ ತಲುಪುತ್ತದೆ. ಹೀಗಾಗಿ, ಮೇಲಿನೆರಡೂ ಕಣಿವೆಗಳಿಗೆ ಕೋಲಾರ ಜಿಲ್ಲೆಯು **'ಹನಿ ಹನಿ ಗೂಡಿದರೆ ಹಳ್ಳ'** ಎಂಬಂತೆ ನೀರು ಪೂರೈಸುವ ಜಲಾನಯನ ಪ್ರದೇಶವಾಗಿದೆ. ಕೋಲಾರ ಜಿಲ್ಲೆಯಲ್ಲಿ ಇಂದು ಯಾವುದೇ ಜೀವ ನದಿಗಳು ಇಲ್ಲದಿದ್ದರೂ ಜಲಮೂಲಗಳನ್ನುಳ್ಳ ಅತ್ಯಧಿಕ ಪರ್ವತ ಪ್ರದೇಶಗಳು, ನೀರನ್ನು ಸ್ಪಂಜಿನಂತೆ ಹಿಡಿದಿಟ್ಟುಕೊಳ್ಳುವ ಮರಳರಾಶಿಯ ಹಾಸುಗೆಗಳು, ಬೋಗುಣಿಯಾಕಾರದ ತಗ್ಗು ದಿಣ್ಣೆಗಳು ಸಮೃದ್ಧವಾಗಿವೆ. ಮಳೆಗಾಲದಲ್ಲಿ ಇಲ್ಲಿ ಬಿದ್ದ ನೀರು ಪೂರ್ವಾಭಿಮುಖವಾಗಿ ಹರಿಯುತ್ತಾ ಮೊಗಿಲಿ ಕಣಿವೆ ಮತ್ತು ಕೈಗಲ್ ಕಣಿವೆಗಳತ್ತ ಮೆಲ್ಲಗೆ ಜಿನುಗಲಾರಂಭಿಸುತ್ತದೆ. ಆದ್ದರಿಂದಲೇ, ಕೌಂಡಿನ್ಯ ವನ್ಯಜೀವಿಧಾಮವು (= ಪಲಮನೇರ್ ರೇಂಜ್) ವರ್ಷಪೂರ್ತಿ ಮಳೆಗಾಲದ ವೈಭವವೂ ಸೇರಿ, ಬತ್ತಿ ಹೋಗದ ಜಲ ಮೂಲಗಳುಳ್ಳ ದಟ್ಟ ಕುರುಚಲು ಕಾಡುಗಳನ್ನು ಹೊಂದಿದೆ. ಈ ಅರಣ್ಯ ಪ್ರದೇಶದಲ್ಲಿರುವ ಜಲಸಮೃದ್ಧಿ ಮತ್ತು ಮೇವಿನ ಕಾರಣವಾಗಿ ಸದಾ ಆನೆಯ

*ದಿನಾಂಕ ೨೮. ೧೧. ೨೦೦೦ ದಂದು ಬೆಂಗಳೂರಿನ ಭಾರತೀಯ ವಿಜ್ಞಾನ ಭವನದಲ್ಲಿ 'ಕೆರೆಗಳು : ೨೦೦೦' ಯೋಜನೆಯಡಿ ಜರುಗಿದ 'ಕೆರೆಗಳು ಮತ್ತು ಜಲವಲಯಗಳ ಪುನರುಜ್ಜೀವನ'ವೆಂಬ ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣವನ್ನಾಧರಿಸಿದ ಲೇಖನ. ಏಪ್ರಿಲ್ ೨೨ರಂದು ಭೂಮಿ ದಿನಾಚರಣೆ ಎನ್ನುವುದು ವಿಶ್ವಸಂಸ್ಥೆಯ ಸಂಪ್ರದಾಯ ಎಂಬುದನ್ನೂ ಇಲ್ಲಿ ಸ್ಮರಿಸಬಹುದು.*

ಹಿಂಡುಗಳು ಕೂಡ ಈಗಲೂ ಓಡಾಡಿಕೊಂಡಿರುತ್ತವೆ. ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಹರಿಯುವ ಕೋಲಾರದ ಭೂಮಿಯ ಮೇಲ್ಮೈಯನ್ನು ಗಮನಿಸಿಯೇ ನಮ್ಮ ಪೂರ್ವಿಕರು ಹರಿವ ನೀರಿನಗುಂಟ ಕೆರೆಗಳನ್ನೂ, ಕೋಡಿ ಕಾಲುವೆಗಳನ್ನೂ ನಿರ್ಮಿಸಿ ಪರಸ್ಪರ ಸಂಪರ್ಕ ಮತ್ತು ಕಿರುತೊರೆಗಳ ಅಂತರ್‌ಜಾಲದ ಸಂಯೋಜನೆಯನ್ನು ನಿಸರ್ಗಕ್ಕೆ ಪೂರಕವಾಗಿ ಯೋಜಿಸಿದ್ದರು.

ಆದರೆ ಹೆಚ್ಚುತ್ತಿರುವ ಜನಸಂಖ್ಯಾಸ್ಫೋಟ, ನಗರೀಕರಣ, ಕೃಷಿಭೂಮಿಗಾಗಿ ಒತ್ತುವರಿ ಮುಂತಾದ ಕಾರಣಗಳಿಂದ ಕೋಲಾರ ಜಿಲ್ಲೆಯ ಕೆರೆಗಳ ಸುದೀರ್ಘ ಸರಪಳಿ ತುಂಡುತುಂಡಾಗಿ ಹೋಗಿದೆ. ಒಂದು ಕೆರೆ ತುಂಬಿ ಕೋಡಿ ಹೋದರೆ ಮತ್ತೊಂದು ಕೆರೆ ತುಂಬುವ - **ಕೆರೆಗೆ ಕೆರೆ, ಕೆರೆಗೆ ಕೆರೆ** ಎಂಬಂಥ ಸಹಜ ಸರಪಳಿ ಇಂದು ಕಣ್ಮರೆಯಾಗಿಹೋಗಿದೆ. ಮಳೆ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವ ನಿಸರ್ಗ ನಿರ್ಮಿತ ಕೊಳಗದಪ್ಪಲೆಗಳು ಮತ್ತು ಬೋಗುಣಿಯಾಕಾರದ ಪರ್ವತ ಪ್ರದೇಶಗಳೆಲ್ಲ ಗ್ರಾನೈಟ್ ಗಣಗಾರಿಕೆಯಿಂದ ನೆಲಸಮವಾಗುತ್ತಾ ನಡೆದಿವೆ. ಮಹಾನಗರಗಳಿಗೆ ಕೋಲಾರ ಜಿಲ್ಲೆಯಿಂದ ಹಗಲಿರುಳು ನಿತ್ಯ ನಿರಂತರವಾಗಿ ಸಾಗಿಸಲ್ಪಡುತ್ತಿರುವ ಮರಳು ಲಾರಿಗಳ ಎಡೆಬಿಡದ ಪ್ರಯಾಣ ರಾಷ್ಟ್ರೀಯ ಹೆದ್ದಾರಿಗಳಲ್ಲಿ ಸಾಮಾನ್ಯ ದೃಶ್ಯ. ಇದರಿಂದ ನೀರು ಸಹಜವಾಗಿ ಶೇಖರವಾಗುವ ನೈಸರ್ಗಿಕ ಸ್ಪಂಜಿನಂಥ ಹಾಸುಗೆಗಳು ಇಲ್ಲವಾಗುತ್ತವೆ. ಹೀಗೆ ಗ್ರಾನೈಟ್ ಮತ್ತು ಮರಳು ದರೋಡೆಗೊಳಗಾದ ಭೂ ಪ್ರದೇಶಗಳಲ್ಲೆ ಅಂತರ್ಜಲ ಕುಸಿತ ಮತ್ತು ಫ್ಲೂರೋಸಿಸ್ ಪಿಡುಗು ತಲೆದೋರಿರುವುದು ಇನ್ನಾದರೂ ಎಚ್ಚತ್ತುಕೊಳ್ಳಬೇಕೆಂಬ ಸೂಚನೆಯಾಗಿದೆ.

ಬೆಂಗಳೂರು ಮಾದರಿಯಲ್ಲಿ ಕೋಲಾರ ಜಿಲ್ಲೆಯ ಬಹುತೇಕ ಕೆರೆಯಂಗಳಗಳು ಬಸ್ ನಿಲ್ದಾಣಗಳಾಗಿ, ವಿಸ್ತರಿಸಲ್ಪಟ್ಟ ಬಡಾವಣೆಗಳಾಗಿ, ಕ್ರೀಡಾಂಗಣಗಳಾಗಿ ಪರಿವರ್ತನೆಗೊಳ್ಳುತ್ತಿರುವುದರಿಂದ ಸರಪಳಿ ಸಂಬಂಧವಿಲ್ಲದೆ ಅಳಿದುಳಿದ ಕೆರೆಗಳೆಲ್ಲ ಹೂಳು ತುಂಬಿಕೊಂಡು ವಿನಾಶದತ್ತ ಮುಖ ಮಾಡಿವೆ. ಇಡೀ ಕೋಲಾರ ನಗರದ ಕೊಳಚೆಯನ್ನು ತನ್ನ ಒಡಲಿನಲ್ಲಿ ತುಂಬಿಸಿಕೊಳ್ಳುತ್ತಿರುವ ಸುವಿಸ್ತಾರವಾದ ಕೋಲಾರಮ್ಮ ಕೆರೆ ಎಂದಿಗೂ ಬತ್ತದೆ, ಒಣಗದೆ ಮತ್ತೆ ಮೈದುಂಬಿಕೊಳ್ಳದೆ ಪುನರ್‌ನವೀಕರಣಗೊಳ್ಳುವ ಆಂತರಿಕ ಕಾಯಕಲ್ಪದಿಂದ ದೂರವಾಗಿದೆ. ಕೆರೆಗೆ ಮಳೆ ನೀರನ್ನು ಪೂರೈಸುತ್ತಿದ್ದ ಕಿರುಹಳ್ಳಗಳೆಲ್ಲ ಬೆಂಗಳೂರು ಮಾದರಿಯಲ್ಲೆ ದೊಡ್ಡ ಮೋರಿಗಳಾಗಿ, ಚರಂಡಿ ನೀರನ್ನು ಸಮೃದ್ಧವಾಗಿ ಹರಿಸುತ್ತಾ, ಕೋಲಾರಮ್ಮ ಕೆರೆಯನ್ನು ಕೊಳೆತು ನಾರುವ ರೋಗಿಷ್ಠ ಜಲವನ್ನಾಗಿ ಮೃತ್ಯುಕೂಪಕ್ಕೆ ತಳ್ಳಿವೆ. ಈ ಕೆರೆಯ ದಡದುದ್ದಕ್ಕೂ ಬಡಾವಣೆಗಳು, ಮಹಿಳಾ ಕಾಲೇಜು, ಮಹಿಳಾ ಹಾಸ್ಟೆಲು, ಖಾಸಗಿ ಗೊಬ್ಬರ ಗುಂಡಿಗಳು, ಕುಡಿವ ನೀರಿನ ಬೋರ್‌ವೆಲ್‌ಗಳು, ಮತ್ಸ್ಯಾಗಾರ, ಇಟ್ಟಿಗೆಗೂಡಿನ ಕಾರ್ಯಾಗಾರಗಳು ಇವೆಲ್ಲ ಒತ್ತೊತ್ತಾಗಿ ಹರಡಿಕೊಂಡಿರುವುದು ನಮ್ಮ ದೇಶದ ಅಸಂಬದ್ಧ ನಗರ ಯೋಜನೆಗೊಂದು ಪ್ರತ್ಯಕ್ಷ ಸಾಕ್ಷಿಯಾಗಿದೆ. ಇದನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದರೆ 'ಅಭಿವೃದ್ಧಿ'ಯ ಹೆಸರಿನಲ್ಲಿ ಪ್ರಕಟಗೊಳ್ಳುತ್ತಿರುವ ನಾಗರಿಕತೆಯ ಮತಿವಿಕಾರಗಳಿವು ಎನ್ನದೆ ವಿಧಿಯಿಲ್ಲ!

ನಮ್ಮ ದೇಶದಲ್ಲಿ ನಗರ ಮತ್ತು ಗ್ರಾಮಗಳ ನಡುವೆ ಯಾವುದೇ ವಿಧವಾದ ಯೋಜನಾತ್ಮಕ ಸೇತುವೆಗಳಿಲ್ಲದೆ, ಅವೆರಡು ಪ್ರತ್ಯೇಕ ದಡಗಳಂತೆ ಉಳಿದುಬಿಟ್ಟಿವೆ. ಗ್ರಾಮಗಳಲ್ಲಿ ಬೆಳೆಯುವ ಸಕಲ ಪದಾರ್ಥಗಳನ್ನು ಕಬಳಿಸುತ್ತಿರುವ ನಗರಗಳು, ಇದಕ್ಕೆ ಬದಲಿಯಾಗಿ ಹಳ್ಳಿಗಳಿಗೆ ಗಲೀಜು ಮತ್ತು ಕೊಳಚೆಯನ್ನು ದೇಣಿಗೆಯಾಗಿ ಕೊಡುತ್ತಿವೆ. ನಗರಗಳು ಮನಸ್ಸು ಮಾಡಿದರೆ ತನ್ನ ಕಸದ ರಾಶಿ ಮತ್ತು ಪರಿತ್ಯಾಜ್ಯಗಳ ಸಮರ್ಪಕ ನಿರ್ವಹಣೆಯಿಂದ ಹಳ್ಳಿಗಳಿಗೆ ಅತ್ಯುತ್ತಮವಾದ ಪರಿಸರ ಸ್ನೇಹಿಯಾದ ಜೈವಿಕ ಗೊಬ್ಬರವನ್ನು ನೀಡಬಹುದು. ಆದರೆ ಇಂಥ ಯೋಜನೆಯುಳ್ಳ ಒಂದೇ ಒಂದು ನಗರ ಇಂದು ಉದಾಹರಣೆಗಾದರೂ ನಮ್ಮ ದೇಶದಲ್ಲಿದೆಯೇ ? ನಮ್ಮ ದೇಶದ ವಿಶ್ವವಿದ್ಯಾಲಯಗಳಲ್ಲಿ ನಡೆಯುತ್ತಿರುವ ಸೂಕ್ಷ್ಮದೃಷ್ಟಿಯ ಅಧ್ಯಯನಗಳು ಮತ್ತು ನಾಡಿನ ಅಭಿವೃದ್ಧಿಗೆ ಸಂಬಂಧಪಟ್ಟ ವಿವಿಧ ಯೋಜನೆಗಳು ನನ್ನ ಕಣ್ಣಿಗೆ ಒಬ್ಬನೇ ಆಡಿಕೊಳ್ಳುವ 'ಕೋಲಾಟ'ದಂತೆ ವಿಲಕ್ಷಣವಾಗಿ ಕಾಣುತ್ತಿದೆ. ಇವೆಲ್ಲ ಕ್ಷೇತ್ರಗಳು ಪರಸ್ಪರ ಒಂದರೊಡನೊಂದು ಮೇಳೈಸಿ ಒಂದನ್ನೊಂದು ಆಧರಿಸಿದ ಮತ್ತು ಬೆಂಬಲಿಸುವ 'ಜಡೆ ಕೋಲಾಟ'ದಂಥ ಅಪೂರ್ವ ಸಹಯೋಗವನ್ನು ಸಾಧಿಸಬೇಕು.

ನಗರೀಕರಣ - ಕೈಗಾರಿಕೀಕರಣ - ಒಳಚರಂಡಿ ವ್ಯವಸ್ಥೆ - ಕಸದ ವಿಲೇವಾರಿ - ಗೊಬ್ಬರಗಳ ಉದ್ಯಮ - ಕೃಷೀಕರಣ - ಅರಣ್ಯೀಕರಣ - ಗ್ರಾನೈಟ್ ಗಣಗಾರಿಕೆ - ಮರಳು ಸಾಗಾಣಿಕೆ - ಅಂತರ್ಜಲ ಕುಸಿತ - ಜನಸಂಖ್ಯಾ ಸ್ಫೋಟ - ಅಂತರ್ ರಾಜ್ಯ ನದಿ ವಿವಾದಗಳು - ಇವೆಲ್ಲ ತೋರಿಕೆಗೆ ಬೇರೆ ಬೇರೆಯಾಗಿ ಕಂಡರೂ ಆಂತರ್ಯದಲ್ಲಿ ಅವಿಭಾಜ್ಯ ಸಂಬಂಧ ಹೊಂದಿರುವ ಸರಪಳಿ ಸಂಬಂಧದ ಕ್ಷೇತ್ರಗಳಾಗಿವೆ. ಇದನ್ನರಿತು ನಿರ್ವಹಿಸುವ, ಸುರಿಯುವ ಮಳೆ ನೀರನ್ನು ಹರಿಯಲು ಬಿಡದೆ ಭೂಮಿಯಲ್ಲಿ ಇಂಗಿಸುವ, ಇಡೀ ಭೂ ಪ್ರದೇಶವನ್ನು ತೇವಭರಿತವನ್ನಾಗಿ ಮಾಡುವ ವಿಕೇಂದ್ರೀಕೃತ ಯೋಜನೆಗಳತ್ತ ನಾವು ಇನ್ನಾದರೂ ಗಮನ ಹರಿಸಬೇಕಾಗಿದೆ. ಈ ದೃಷ್ಟಿಯಿಂದ ಅಮೂಲ್ಯವೆನ್ನಬಹುದಾದ ಮಾತುಗಳಿವು :

ಎಲ್ಲಿ ನೀರು ಓಡುತ್ತದೆಯೋ ಅಲ್ಲಿ ಅದನ್ನು ನಡೆಯುವಂತೆ ಮಾಡಿರಿ

ಎಲ್ಲಿ ನೀರು ನಡೆಯುತ್ತದೆಯೋ ಅಲ್ಲಿ ಅದನ್ನು ತೆವಳುವಂತೆ ಮಾಡಿರಿ

ಎಲ್ಲಿ ನೀರು ತೆವಳುತ್ತದೆಯೋ ಅಲ್ಲಿ ಅದನ್ನು ನಿಲ್ಲುವಂತೆ ಮಾಡಿರಿ.

-ಫಾದರ್ ಕ್ರಿಸ್ಟಿನೊ ಲೋಬೊ

ಎ. ಚಂದ್ರಶೇಖರ ನಂಗಲಿ
೩೮೮, ಪಿ. ಸಿ. ಬಡಾವಣೆ
ಕೋಲಾರ - ೫೬೩ ೧೦೧




### ಲೇಖಕರ ಗಮನಕ್ಕೆ

ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.

*- ಸಂಪಾದಕ, 'ಹೊಸತು'*



# ಉತ್ಸಾಹದ ಚಿಲುಮೆ ಎಚ್. ಎಸ್. ದೊರೆಸ್ವಾಮಿ

ಗೀತಾ ಡಿ. ಸಿ.

ಸಣ್ಣ ಹುಡುಗ. ಭಾರಿ ಜ್ವರ ಬಂದು ಮಲಗಿದ್ದಾನೆ. ಏನೇನು ವೈದ್ಯ ಮಾಡಿದರೂ ವಾಸಿಯಾಗುತ್ತಿಲ್ಲ. ಅದು ಸನ್ನಿಗೆ ತಿರುಗಿ, ಮನೆಯವರೆಲ್ಲ ಹುಡುಗನ ಆಸೆ ಕೈಬಿಟ್ಟಾಗಿದೆ. ತಾವು ಪ್ರೀತಿಯಿಂದ ಸಾಕಿ ಸಲಹುತ್ತಿದ್ದ ಮೊಮ್ಮಗನದೇ ಚಿಂತೆಯಲ್ಲಿ ಬೆಳಿಗ್ಗೆ ಮನೆ ಬಿಟ್ಟು ಆಚೆ ಹೊರಟ ತಾತ ಶ್ಯಾನುಭೋಗ ಶಾಮಣ್ಣನವರಿಗೆ ಎದುರಾದದ್ದು ಅದೇ ಊರಿನ ಹನುಮಂತ ದೇವರ ಗುಡಿಯ ಪೂಜಾರರು, ವೋಷ್ಯವರು - ನಾಟಿ ವೈದ್ಯರೂ ಕೂಡ. ಊಟ ಬಿಟ್ಟು ಪಾರವಾಗಿದ್ದ ಶಾಮಣ್ಣನವರ ಮುಖದ ಚಿಂತೆಯ ಗೆರೆಗಳನ್ನು ಕಂಡವರು ಅವರು 'ಏನಾಯ್ತು?' ಎಂದು ಕೇಳಿದಾಗ, ಮೊಮ್ಮಗನ ವಿಷಯ ಹೇಳಿದರು. ಕೂಡಲೇ ಮನೆಗೆ ಬಂದ ಆ ವೈದ್ಯರು ಎಂಥದೋ ಒಂದು ಬೀಜವನ್ನು ಸಾಣೆಕಲ್ಲ ಮೇಲೆ ಅರೆದು ಲೇಪ ಮಾಡಿ ಹಲ್ಲು ಬಿಗಿ ಹಿಡಿದಿದ್ದ ಹುಡುಗನ ಬಾಯನ್ನು ಬಲವಂತವಾಗಿ ಬಿಡಿಸಿ ಹುಯ್ದರು. ಪವಾಡವೋ ಅದೃಷ್ಟವೋ ಮಾರನೇ ದಿನವೇ ಶರೀರ ಬೆವರಿತ್ತು; ಜ್ವರ ಇಳಿದಿತ್ತು, ಹುಡುಗ ಎದ್ದು ಕೂತ ! ಆಗ ಬದುಕುಳಿದ ಹುಡುಗನೇ ಮುಂದೆ ಭಾರತ ಸ್ವಾತಂತ್ರ್ಯ ಸಂಗ್ರಾಮ, ಕರ್ನಾಟಕ ಏಕೀಕರಣ ಚಳುವಳಿ, ಭೂದಾನ ಚಳುವಳಿ, ಕೈಗಾ ಅಣುಸ್ಥಾವರದ ವಿರುದ್ಧದ ಚಳುವಳಿಗಳಲ್ಲಿ ಭಾಗವಹಿಸುವ ಪ್ರಮುಖ ವ್ಯಕ್ತಿಯಾಗುತ್ತಾನೆಂದು ಯಾರೂ ಎಣಿಸಿರಲಿಲ್ಲ. ಆ ಹುಡುಗ ಎಚ್. ಎಸ್. ದೊರೆಸ್ವಾಮಿ (ಹುಟ್ಟಿದ್ದು ೧೦.೪.೧೯೧೮). ೧೯೩೦ರಷ್ಟು ಹಿಂದೆಯೇ ಮಹಾತ್ಮಾ ಗಾಂಧಿಯವರಿಂದ ಪ್ರೇರಿತರಾಗಿ ಸ್ವಾತಂತ್ರ್ಯ ಸಂಗ್ರಾಮಕ್ಕಿಳಿದವರು. ರಾಷ್ಟ್ರದ ಇಂದಿನ ದಿಕ್ಕೆಟ್ಟ ಪರಿಸ್ಥಿತಿಯಲ್ಲೂ ರಾಷ್ಟ್ರದ ಹಿತಕ್ಕಾಗಿ ನಿಸ್ವಾರ್ಥವಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟಿದ್ದಾರೆ. ಇದೇ ಏಪ್ರಿಲ್ ೧೦ಕ್ಕೆ ತಮ್ಮ ೮೪ನೇ ವರ್ಷಕ್ಕೆ ಕಾಲಿಡುತ್ತಿರುವ ದೊರೆಸ್ವಾಮಿಯವರ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರಿಗೆ 'ಹೊಸತು' ಓದುಗರೆಲ್ಲರ ಅಭಿನಂದನೆಗಳು, ಶುಭಾಕಾಂಕ್ಷೆಗಳು ಸಲ್ಲುತ್ತವೆ. ಸಹಸ್ರಚಂದ್ರ ದರ್ಶಕ ಶತಾಯುವಾಗಲಿ.

★ ★ ★

ದೊರೆಸ್ವಾಮಿಯವರ ಪೂರ್ವಿಕರು ತಮಿಳುನಾಡಿನ ಪಾಂಡಿಚೇರಿಯ ಸಮೀಪದ ಒಂದು ಹಳ್ಳಿ ಪಾಣಾಂಪಟ್‌ನಿಂದ ಬಂದು, ಹಾರೋಹಳ್ಳಿ (ಕನಕಪುರ ತಾಲ್ಲೂಕು)ಯಲ್ಲಿ ನೆಲೆನಿಂತವರು. ವ್ಯವಸ್ಥಿತವಾಗಿದ್ದ ಈ ಹಳ್ಳಿಯಲ್ಲಿ ಒಗ್ಗಟ್ಟಿತ್ತು. ಎಲ್ಲರೂ ಎಲ್ಲ ಕೆಲಸಗಳಿಗೂ ಭಾಗಿಗಳಾಗುತ್ತಿದ್ದರು. ಬದುಕಿನ ಕಷ್ಟ ಸುಖಗಳಿಗೆ ಪರಸ್ಪರ ಭಾಗಿಗಳಾಗಬೇಕೆಂಬುದನ್ನು ಕಲಿಸಿದ್ದು ಈ ಹಾರೋಹಳ್ಳಿಯೇ.

ತಮ್ಮ ಐದನೇ ವಯಸ್ಸಿಗೇ ತಂದೆಯನ್ನು ಕಳೆದುಕೊಂಡ ದೊರೆಸ್ವಾಮಿಯವರು ಬೆಳೆದದ್ದು ಚಿಕ್ಕತಾತ ಶಾಮಣ್ಣನವರ ನೆರಳಿನಲ್ಲಿ. ಅವರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ನಾಮಕರಣಗೊಂಡ ಸದಸ್ಯರಾಗಿದ್ದರು. ಅವರ ರಾಜಕೀಯ ಹಾಗೂ ಜನಸಂಪರ್ಕದ ಪ್ರಭಾವ ಇವರ ಮೇಲೆ ಸಾಕಷ್ಟಾಗಿದೆ. ತಾತ ಶಾಮಣ್ಣನವರ ಶಿಫಾರಸ್ಸಿನ ಮೇಲೆ ದೊರೆಸ್ವಾಮಿಯವರ ತಂದೆ ಪಟೇಲಗಿರಿ ಬಿಟ್ಟು ಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ತಿಂಗಳಿಗೆ ಆರು ರೂ. ಸಂಬಳದ ಮೇಲೆ ಜಿಲ್ಲಾ ಬೋರ್ಡ್ ಕಚೇರಿಯಲ್ಲಿ ಗುಮಾಸ್ತೆ ಕೆಲಸಕ್ಕೆ ಸೇರಿ ಬೆಂಗಳೂರಿಗೆ ಬಂದು ನೆಲೆನಿಂತದ್ದು.

ಚಿಕ್ಕ ವಯಸ್ಸಿನಿಂದಲೇ ಅತೀ ಚುರುಕಾಗಿದ್ದ ಇವರು ಹೈಸ್ಕೂಲಿನಲ್ಲಿದ್ದಾಗಲೇ 'ಕಿರಿಯ ಕನ್ನಡ ಸಂಘ'ವನ್ನೂ ಕಾಲೇಜಿನಲ್ಲಿ 'ಯುವಕ ಸಂಘ'ವನ್ನೂ ಕಟ್ಟಿ ಆ ಮೂಲಕ ಚರ್ಚಾಸ್ಪರ್ಧೆ, ಹಿರಿಯ ಸಾಹಿತಿಗಳಿಂದ ಭಾಷಣ, ಚಿಕ್ಕ ಮಕ್ಕಳಿಗೆ ಆಟ ಪಾಠ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಅಷ್ಟೇ ಅಲ್ಲ, ಇವರು ಒಳ್ಳೆಯ ವಾಲಿಬಾಲ್-ಹಿಟ್ಟರ್ ಆಗಿ - ಪಟುವಾಗಿದ್ದರೆಂಬುದು ಸಾಕಷ್ಟು ಜನರಿಗೆ ತಿಳಿದಿರಲಿಕ್ಕಿಲ್ಲ.

ಕನ್ನಡದ ಖ್ಯಾತ ವಿದ್ವಾಂಸರಾಗಿದ್ದ ಬಿ.ಎಂ.ಶ್ರೀ., ಎ. ಆರ್. ಕೃಷ್ಣಶಾಸ್ತ್ರಿ, ವಿ. ಸೀತಾರಾಮಯ್ಯ ಮುಂತಾದವರ ಪ್ರಭಾವದಿಂದ ಸಾಹಿತ್ಯದಲ್ಲಿ ಆಸಕ್ತಿಯನ್ನೂ ಬೆಳೆಸಿಕೊಂಡ ದೊರೆಸ್ವಾಮಿಯವರು ಪದವೀಧರರಾದ ಮೇಲೆ (ಬಿ.ಎಸ್ಸಿ) ಆದರ್ಶ ಉಪಾಧ್ಯಾಯನಾಗ ಬೇಕೆಂಬ ಕನಸು ಕಾಣುತ್ತಿದ್ದರೆ, ಅವರ ಅಣ್ಣಂದಿರು ಜೀವ ವಿಮಾ ಕಂಪೆನಿಯೊಂದರಲ್ಲಿ ಅಧಿಕಾರಿಯನ್ನಾಗಿ ಮಾಡಬೇಕೆಂದು ಕನಸುತ್ತಿದ್ದರು. ಕೊನೆಗೂ ತಮ್ಮ ಆಸೆಯಂತೆ ಬೆಂಗಳೂರಿನ ಗಾಂಧೀನಗರದ ಹೈಸ್ಕೂಲೊಂದರಲ್ಲಿ ಅಧ್ಯಾಪಕರಾಗಿ ಕೆಲಸಕ್ಕೆ ಸೇರಿಯೇಬಿಟ್ಟರು. ಆಗ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ದೇಶದೆಲ್ಲೆಡೆ ಹರಡಿತ್ತು. ಅದೇ ಸಮಯಕ್ಕೆ 'ಕ್ವಿಟ್ ಇಂಡಿಯಾ ಚಳುವಳಿ'ಯೂ ಆರಂಭವಾಯಿತು. ಅಧ್ಯಾಪಕರಾಗಿ ಕೆಲಸ ಮಾಡುತ್ತಲೇ ಚಳುವಳಿಯಲ್ಲಿ ಭಾಗವಹಿಸಿದರು. ಎ. ಜಿ. ರಾಮಚಂದ್ರರಾಯರು ಮತ್ತು ಸರ್ದಾರ್ ವೆಂಕಟರಾಮಯ್ಯ ನವರಂಥವರು ಭೂಗತರಾಗಿ ಕೆಲಸ ಮಾಡಿದರೆ, ಹೊರಗಿದ್ದು ಅವರಿಗೆ ಎಲ್ಲ ವಿಧದಿಂದ ನೆರವು ನೀಡಿದವರಲ್ಲಿ ದೊರೆಸ್ವಾಮಿಯವರು ಪ್ರಮುಖರು. ಪೊಲೀಸರ ಹದ್ದಿನ ಕಣ್ಣು ತಪ್ಪಿಸಿ ಭೂಗತರಾಗಿದ್ದವರನ್ನು ರಕ್ಷಿಸುವ ಜವಾಬ್ದಾರಿ ಇವರದಾಗಿತ್ತು. ಆಗೆಲ್ಲ ಜನ ಬೆಂಬಲವೂ ಸಾಕಷ್ಟಿತ್ತು. ವಿದ್ಯಾರ್ಥಿಗಳನ್ನು ಪ್ರಚೋದಿಸಲು ಒಳ್ಳೆಯ ವೃತ್ತಿಯೂ ಇತ್ತು. ಆದರೆ, ಅದರಲ್ಲಿ ಆಗಷ್ಟೇ ತೃಪ್ತಿಯನ್ನು ಕಾಣುತ್ತಿದ್ದ ಅವರೆದುರಿಗೆ ಇದ್ದಕ್ಕಿದ್ದಂತೆ ಪೊಲೀಸರು ಪ್ರತ್ಯಕ್ಷರಾಗಿದ್ದರು ! ಕಾರಣ ಇವರಿಂದ ಕೈ ಬಾಂಬುಗಳನ್ನು ಪಡೆದವರೊಬ್ಬರು - ರಾಮರಾವ್ - ಪೊಲೀಸ್ ಕೈಗೆ ಸಿಕ್ಕು ಒದೆತ ತಿಂದು ಇವರ ಹೆಸರು ಹೇಳಿದ್ದರು ! ಇದರಿಂದ ಸಿಕ್ಕಿದ್ದು ಸ್ಥಾನ ಬದ್ಧತೆಯಲ್ಲಿ ಒಂದು ವರ್ಷ ನಾಲ್ಕು ತಿಂಗಳ ಜೈಲುವಾಸ ! ಅಲ್ಲಿಗೆ ಮುಗಿಯಿತು ಅವರ ಅಧ್ಯಾಪನ ವೃತ್ತಿ.

★ ★ ★

ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ಆಗಲೇ ಸ್ಥಾನಬದ್ಧತೆಯಲ್ಲಿ ಐನೂರಕ್ಕೂ ಹೆಚ್ಚಿದ್ದ ಮಂದಿಯನ್ನು ಕೂಡಿಕೊಂಡು - ಸಾಕಷ್ಟು ಜನ ಪರಿಚಿತರೇ ಅಲ್ಲಿದ್ದದ್ದು - ಅಲ್ಲೂ ಹೋರಾಟವನ್ನು ಮುಂದುವರಿಸಿದ್ದರು. ಜೈಲುವಾಸವನ್ನು ಶಿಕ್ಷೆ ಎಂದು ಪರಿಗಣಿಸದೆ (ಸಿಸಿಫಸ್‌ನಂತೆ ?) ಬೆಳಗ್ಗೆ ಸಂಜೆ ವಾಲಿಬಾಲ್ ಆಡುತ್ತ, ಮಧ್ಯಾಹ್ನ ಹಿಂದಿ-ತಮಿಳು ಭಾಷೆಗಳನ್ನು ಕಲಿಯುತ್ತಾ ಬೌದ್ಧಿಕ ತರಗತಿಗಳಲ್ಲಿ ಪಾಲ್ಗೊಳ್ಳುತ್ತ ಒಟ್ಟಾರೆ ಇಡೀ ಸೆರೆಮನೆಯನ್ನೇ ಸಂತಸದ ತಾಣವನ್ನಾಗಿ ಪರಿವರ್ತನೆ ಮಾಡಿಕೊಂಡದ್ದು ವಿಶೇಷ.

ಸೆರೆಮನೆಯಿಂದ ಈಚೆಗೆ ಬಂದಾಗ ಎದುರಾದ್ದು ಬದುಕಿನ ಪ್ರಶ್ನೆ. ಜೀವನಕ್ಕೆ ಒಂದು ಸ್ವತಂತ್ರ ಉದ್ಯೋಗವನ್ನು ಹಿಡಿಯದಿದ್ದರೆ ಬೇರೆಯವರ ಹತ್ತಿರ ಯಾಚಿಸಬೇಕಾಗಿ ಬಂದೀತು. ಅದರಿಂದ ವರ್ಚಸ್ಸೂ ಕಡಿಮೆಯಾಗುತ್ತದೆಂದು ಯೋಚಿಸಿ ಆರಂಭಿಸಿದ್ದು 'ಸಾಹಿತ್ಯ ಮಂದಿರ' ಎಂಬ ಹೆಸರಿನಲ್ಲಿ ಪುಸ್ತಕ ಪ್ರಕಾಶನ ಮತ್ತು ಮಾರಾಟದ ಕೆಲಸ. ಎಸ್. ಅನಂತನಾರಾಯಣರ ಕವನ ಸಂಗ್ರಹ 'ಮೇಘನಾದ', 'ಗಾಂಧೀಜಿ ಕಥೆ', 'ವಿಷ ವೃಕ್ಷ', 'ಸರ್ವೋದಯ ದೃಷ್ಟಿ' ಇತ್ಯಾದಿ ದೊರೆಸ್ವಾಮಿಯವರು ಪ್ರಕಟಿಸಿದ ಪುಸ್ತಕಗಳಾದರೆ, ಲೇಖಕರಾಗಿ ಹೊರತಂದ ಪುಸ್ತಕಗಳು : *From Princely Autocracy to People's Rule, ಸ್ವಾತಂತ್ರ್ಯ ಸಂಗ್ರಾಮ - ಕರ್ನಾಟಕ, ಸುಭಾಷ್‌ಚಂದ್ರಬೋಸ್, ಬಿ.ಸಿ.ರಾಯ್, ಆತಂಕಕಾರಿ ಡಂಕೆಲ್ ಪ್ರಸ್ತಾವನೆ, ವಿನೋಬಾ ಭಾವೆ, ವಿಚಾರ ಮಂಥನ, ನಮ್ಮ ಆಹಾರದಲ್ಲಿ ವಿಷ, ನೆನಪಿನ ಸುರುಳಿ ತೆರೆದಾಗ.....* ಇತ್ಯಾದಿ.

**೧೯೪೨ರ ಚಳುವಳಿಯಲ್ಲಿ :** ರಾಷ್ಟ್ರೀಯ ಚಳುವಳಿ ಹಾಗೂ ಏಕೀಕರಣ ಚಳುವಳಿಗಳು ನಮ್ಮ ನಾಡು ಕಂಡ ಈ ಶತಮಾನದ ಪ್ರಮುಖ ಚಾರಿತ್ರಿಕ ಘಟನೆಗಳು. ದೊರೆಸ್ವಾಮಿಯವರು ಈ ಚಳುವಳಿಗಳೊಂದಿಗೆ ತಮ್ಮನ್ನು ತೊಡಗಿಸಿಕೊಂಡವರು. ೧೯೪೨ರ ಚಳುವಳಿಯಲ್ಲಿ ಬೇರೆ ಬೇರೆ ಪಕ್ಷದ ಕಾರ್ಯಕರ್ತರನ್ನು, ಕಾರ್ಮಿಕ ಮುಖಂಡರನ್ನು ಒಗ್ಗೂಡಿಸಿದ ಹೆಗ್ಗಳಿಕೆ ಇವರದು. ಇದೇನೂ ಸುಲಭದ ಕೆಲಸವಾಗಿರಲಿಲ್ಲ. ಕಮ್ಯುನಿಸ್ಟರೂ, ಕಾರ್ಮಿಕ ಸಂಘದ ಕಾರ್ಯದರ್ಶಿಗಳೂ,

ಕಾರ್ಮಿಕ ನಾಯಕರೂ ಆಗಿದ್ದ ಎನ್. ಡಿ. ಶಂಕರ್ ಅವರೊಡನೆ, ದೇಶಕ್ಕೆ ಒದಗಿರುವ ಗಂಡಾಂತರದಿಂದ ಪಾರಾಗಲು ಇದು ಸಕಾಲ, ಈ ಅವಕಾಶ ತಪ್ಪಿದರೆ ಮುಂದೆ ದೇಶ ಸ್ವತಂತ್ರವಾದೀತೋ ಇಲ್ಲವೋ ! ಈಗ ಭಾರತೀಯರೆಲ್ಲರೂ ಒಂದಾಗಿ ಹೋರಾಟಕ್ಕೆ ಧುಮುಕಿದ್ದಾರೆ. ಈ ಸಮಯದಲ್ಲಿ ಪಕ್ಷ, ಪಾರ್ಟಿ ಎಲ್ಲವನ್ನೂ ಮರೆತು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕುವುದು ನಿಮ್ಮ ಕರ್ತವ್ಯ ಎಂದು ವಾದಿಸಿ, ಮನವೊಲಿಸಿದ ನಂತರವೇ ಶಂಕರ್ ಅವರಿಗೆ ವಸ್ತುಸ್ಥಿತಿಯ ಅರಿವಾಗಿ ಕಮ್ಯುನಿಸ್ಟ್ ಪಾರ್ಟಿಗೆ ರಾಜಿನಾಮೆ ನೀಡಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರು. ಇವರನ್ನು ಬಳಸಿಕೊಂಡು ಬಿನ್ನಿ-ರಾಜಾ-ಮಿನರ್ವ ಮಿಲ್ ಕಾರ್ಮಿಕ ಮುಖಂಡರೂ ಹೋರಾಟಕ್ಕಿಳಿಯುವಂತೆ ಮಾಡಿದ ಕೀರ್ತಿ ದೊರೆಸ್ವಾಮಿಯವರಿಗೆ ಬಹುಪಾಲು ಸಲ್ಲುತ್ತದೆ.

**ಕರ್ನಾಟಕ ಏಕೀಕರಣ ಚಳುವಳಿಯಲ್ಲಿ** : ಸ್ವಾತಂತ್ರ್ಯಾನಂತರ ಏಕೀಕರಣಕ್ಕೆ ಹಳೇ ಮೈಸೂರಿನಲ್ಲಿ ಒಕ್ಕಲಿಗರ ವಿರೋಧವಿತ್ತು. ಕರ್ನಾಟಕ ಏಕೀಕರಣವಾದರೆ, ರಾಜ್ಯದಲ್ಲಿ ಲಿಂಗಾಯತರು ಬಹುಸಂಖ್ಯಾತರಾಗುವುದರಿಂದ ತಮಗೆ ಮುಂದೆಂದೂ ರಾಜ್ಯದ ಅಧಿಕಾರ ದೊರೆಯದೆಂಬ ಭಯ ಒಕ್ಕಲಿಗರಲ್ಲಿದ್ದಂತೆ ತೋರುತ್ತದೆ. ಹೀಗಾಗಿ ದೊರೆಸ್ವಾಮಿಯವರು, ಭಾಷಾವಾರು ಪ್ರಾಂತ್ಯ ರಚನೆಗಾಗಿ ನೆಹರು ರಚಿಸಿದ್ದ ತ್ರಿಮೂರ್ತಿ ಸಮಿತಿಯ ಮುಂದೆ ''ಎಲ್ಲ ಜನಾಂಗ ಹಾಗೂ ಎಲ್ಲ ಕೋಮಿನವರಿಗೂ ನ್ಯಾಯ ಒದಗಿಸುವ ಜಾತ್ಯತೀತ ಸರ್ಕಾರ ರಚನೆಯಾಗಬೇಕು'' ಎಂದು ತಮ್ಮ ಅಭಿಪ್ರಾಯವನ್ನು ಪ್ರತಿಪಾದಿಸಿದ್ದು ಅವರು ಸಮಾನತೆಯ ಪರವಾಗಿದ್ದುದಕ್ಕೆ ಸಾಕ್ಷಿಯಂತಿದೆ. ಅಷ್ಟೇ ಅಲ್ಲ, ಮೈಸೂರು ಸಂಸ್ಥಾನದ ಜನತೆಯ ಬೆಂಬಲವನ್ನು ಗಳಿಸಲು ಪ್ರಚಾರ ಪ್ರವಾಸ ಕೈಗೊಂಡರು. ಏಕೀಕರಣಕ್ಕಾಗಿ ಒತ್ತಾಯಿಸಲು ದೆಹಲಿಗೆ ತೆರಳಿದ ನಿಯೋಗದಲ್ಲಿ ಒಬ್ಬರಾಗಿ ಸರ್ದಾರ್ ಪಟೇಲ್ ಮುಂತಾದ ರಾಷ್ಟ್ರ ನಾಯಕರನ್ನು ಆಗ್ರಹಪಡಿಸಿದರು. ಅಲ್ಲಿಂದ ವಾಪಸ್ಸಾಗಿ 'ಕರ್ನಾಟಕ ಏಕೀಕರಣವನ್ನು ಸುಗಮಗೊಳಿಸಲು ಶ್ರೀಮನ್ಮಹಾರಾಜರು ತಮ್ಮ ಸಿಂಹಾಸನವನ್ನು ತೆರವು ಮಾಡಬೇಕೆಂದು' ಒಂದು ಪತ್ರಿಕಾ ಹೇಳಿಕೆಯನ್ನು ಕೊಟ್ಟರು. ದೊರೆಸ್ವಾಮಿಯವರ ಈ ಹೇಳಿಕೆಯು ಮಹಾರಾಜರ ಆಳ್ವಿಕೆಯನ್ನು ಒಪ್ಪಿಕೊಂಡವರಲ್ಲಿ ತಳಮಳ, ಆಕ್ರೋಶವನ್ನುಂಟು ಮಾಡಿತು. ಇಂಥ ಹೇಳಿಕೆಯನ್ನು ಕೊಟ್ಟಿದ್ದಕ್ಕಾಗಿ ದಂಡನೆಗೂ ಗುರಿಯಾಗಬೇಕಾಯಿತು.

ಇಂದು ಏಕೀಕರಣದ ನಂತರ ಕರ್ನಾಟಕದಲ್ಲಿ ಜಾತ್ಯತೀತವಾಗಿ, ಎಲ್ಲರೂ ಒಂದಾಗಿ ಬಾಳಬಹುದೆಂಬ ಕನಸಿದ್ದ ಗಾಂಧೀ ಅನುಯಾಯಿಗಳಾದ ದೊರೆಸ್ವಾಮಿಯಂಥವರಿಗೆ ಜಾತಿ, ದ್ವೇಷ ತುಂಬಿ ತುಳುಕುತ್ತಿರುವುದಕ್ಕಾಗಿ ನೋವಿದೆ. ''ಏಕೀಕರಣದಿಂದ ಕನ್ನಡ ನಾಡು ವಿಶಾಲವಾಯಿತು. ಆದರೆ ಕನ್ನಡಿಗರ ಮನಸ್ಸು ವಿಶಾಲವಾಗಲಿಲ್ಲ. ನಾವೆಲ್ಲ ಒಂದು ಎಂಬ ಭಾವನೆಯಾಗಲಿ, ಜಾತ್ಯತೀತವಾಗಿ ಬಾಳಬೇಕೆಂಬ ಇಚ್ಛೆಯಾಗಲಿ ಬೆಳೆಯಲಿಲ್ಲ'' ಎಂದು ವಿಷಾದದಿಂದ ಮತ್ತು ದುಃಖದಿಂದ ಹೇಳುತ್ತಾರೆ. ಸರ್ವೋದಯದ ಕಾರ್ಯಕರ್ತರಾಗಿ - ಸರ್ವೋದಯದ ಬ್ಯಾನರ್ ಇರಲಿ, ಇಲ್ಲದಿರಲಿ - ಸರ್ವೋದಯ ಕಾರ್ಯಕ್ಕಾಗಿ ರಾಜ್ಯಾದ್ಯಂತ ತಿರುಗಾಡಿ ಜಾತೀಯ ದ್ವೇಷಪೂರಿತ ಗುಂಪುಗಳ ನಡುವೆ ಸೌಹಾರ್ದವೇರ್ಪಡಿಸಿದ್ದೂ ಇವರ ಮಹತ್ವದ ಸಾಧನೆಗಳೇ. – ಕೃಷ್ಣರಾಜಪೇಟೆ, ಬೆಳ್ಳೂರು, ಮಳವಳ್ಳಿಗಳಲ್ಲಿ ನಡೆದ ಕೋಮು ಗಲಭೆ ಜಾತಿಗಲಭೆಗಳ ಸಂದರ್ಭಗಳಲ್ಲಿ ಶಾಂತಿ ಸ್ಥಾಪನೆಗೆ ಅವರು ಸಕ್ರಿಯವಾಗಿ ದುಡಿದಿದ್ದಾರೆ.

**ಪೌರವಾಣಿ ಸಂಪಾದಕರಾಗಿ** : ಮೈಸೂರು ಕಾಂಗ್ರೆಸ್ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ 'ಪೌರವಾಣಿ' ಸಂಪಾದಕರಾಗಿ ಇವರು ಮಾಡಿದ ಕೆಲಸ ಗಮನಾರ್ಹ. ಅದನ್ನು ಮೈಸೂರು ಮಹಾರಾಜರ ಸರ್ಕಾರ ಮುಟ್ಟುಗೋಲು ಹಾಕಿಕೊಂಡಾಗ ಹಿಂದೂಪುರದಿಂದ ಬೇರೆ ಬೇರೆ ಹೆಸರಿನಲ್ಲಿ ಪತ್ರಿಕೆಯನ್ನು ಪ್ರಕಟಿಸಿದ ಸಾಹಸ ಇವರದು. ಜನತೆಯ ಪರವಾಗಿದ್ದ 'ಪೌರವಾಣಿ' ಬೇಜವಾಬ್ದಾರಿ ಸರ್ಕಾರವನ್ನು ಟೀಕಿಸುವಲ್ಲಿ ಎಂದೂ ಹಿಂಜರಿಯಲಿಲ್ಲ. ಸರ್ಕಾರದ ಹೊಣೆಗಾರಿಕೆಯನ್ನು ನೆನಪಿಸುತ್ತಲೇ ತನ್ನ ಹೊಣೆ ಮರೆತಾಗಲೆಲ್ಲ ಎಚ್ಚರಿಸುವ ಕೆಲಸವನ್ನು ಆ ಮೂಲಕ ಮತ್ತು ಈಗಲೂ ಮಾಡುತ್ತಲೇ ಬಂದಿದ್ದಾರೆ. ಆದರೆ, ಈಗಿನ ಸರ್ಕಾರಗಳಿಗೆ ಕಿವಿಗಳೇ ಇಲ್ಲ !

**ಕರ್ನಾಟಕ ಸರ್ವೋದಯ ಚಳುವಳಿಯಲ್ಲಿ**: ದೊರೆಸ್ವಾಮಿಯವರ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದು ಭೂದಾನ ಮತ್ತು ಸರ್ವೋದಯ ಚಳುವಳಿಗಳು. ವಿನೋಬಾ ಭಾವೆಯವರ ಭೂದಾನ ಯಜ್ಞ ಚಳುವಳಿ ಆರಂಭವಾದಾಗ ಕರ್ನಾಟಕದಲ್ಲೂ ಭೂದಾನ, ಪಾದಯಾತ್ರೆಗಳು ನಡೆಯತೊಡಗಿದವು. ಇದರಲ್ಲಿ ಭಾರಿ ಕೆಲಸ ಮಾಡಿದ ಕಾರ್ಯಕರ್ತರನ್ನು ಉತ್ಸಾಹದಿಂದ ನೆನೆಯುತ್ತಾರವರು : ಟಿ. ಎಸ್. ಅನಂತರಂಗಾಚಾರ್, ಬಿ. ನಾರಾಯಣಪ್ಪ, ಪಿ. ವೆಂಕೋಬರಾವ್, ಸತ್ಯವ್ರತ, ಪಾವಗಡದ ಗಂಗಪ್ಪ, ಗುಂಡ್ಲುಪೇಟೆಯ ನಾಯ್ಕ, ನೀಲಕಂಠ ಗಣಾಚಾರ್ಯರು, ವಾಸುದೇವಾಚಾರ್, ಹರಪನಹಳ್ಳಿ ನಾರಾಯಣ ಭಟ್ಟರು ಇತ್ಯಾದಿ. ಇಂತಹ ಅನೇಕ ಗೆಳೆಯರೊಂದಿಗೆ ಕೆಲಸ ಮಾಡಿದ ತೃಪ್ತಿ ಅವರಿಗಿದೆ.

* * *

ಕೈಗಾ ಅಣುಸ್ಥಾವರ ಸ್ಥಾಪನೆಯ ವಿರುದ್ಧ ಮತ್ತು ಕಾರ್ಗಿಲ್ ಕಂಪೆನಿಯ ವಿರುದ್ಧ ನಡೆಸಿದ ಸತ್ಯಾಗ್ರಹಗಳೂ ಮುಖ್ಯವಾದುವೇ. ಇವುಗಳಲ್ಲದೆ ನೀರಿನ ಸತ್ಯಾಗ್ರಹ, ಕುಡಿತದ ಅಂಗಡಿ ವಿರುದ್ಧ, ಗೋಹತ್ಯಾ ವಿರೋಧ ಚಳುವಳಿ, ಕೇಂದ್ರ ಸರ್ಕಾರದ ನೂತನ ಆರ್ಥಿಕ ನೀತಿಯನ್ನು ಪ್ರಶ್ನಿಸಿದ್ದು, ಗ್ಯಾಟ್ ಒಪ್ಪಂದ..... ಹೀಗೆ ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ, ಯುವ ಸಂಘಟನೆ ಮತ್ತು ಗಾಂಧಿವಿಚಾರ ಪ್ರಚಾರಾಂದೋಲನದಲ್ಲಿ ಈಗಲೂ ಸಕ್ರಿಯವಾಗಿ ತೊಡಗಿಕೊಂಡಿರುವ ದೊರೆಸ್ವಾಮಿಯವರ ಸಾಧನೆ ಅಪಾರ.

ದೊರೆಸ್ವಾಮಿಯವರು ತಮ್ಮ ಆದರ್ಶಗಳ ಸಾಧನೆಗಾಗಿ ತಮ್ಮನ್ನು ತೊಡಗಿಸಿಕೊಂಡವರು. ಸ್ವಯಂ ಪ್ರಶಂಸೆಯಾಗಲಿ, ಬೇರೆಯವರನ್ನು ವಿನಾಕಾರಣ ದೂರುವುದಾಗಲಿ ಎಲ್ಲೂ ಎಂದೂ ಅವರ ಮಾತಿನಲ್ಲಿ ವ್ಯಕ್ತವಾಗುವುದಿಲ್ಲ. ಆದರೆ, ತಮಗೆ ಸರಿ ಕಾಣದ್ದನ್ನು - ಎಷ್ಟೇ ದೊಡ್ಡವರಿರಲಿ - ನೇರವಾಗಿ ನುಡಿದುಬಿಡುವ ಸ್ವಭಾವ ಅವರದು. ಈ ನೇರ ನುಡಿಯ ಸ್ವಭಾವದಿಂದಾಗಿಯೇ ಹನುಮಂತಯ್ಯನವರ ಕಾಲದಲ್ಲಿ ವಿಧಾನ ಪರಿಷತ್ತಿನಲ್ಲಿ ಕೌನ್ಸಿಲ್ ಸದಸ್ಯತ್ವವನ್ನು ಕಳೆದುಕೊಂಡದ್ದು ! ಆಗ ಪತ್ರಕರ್ತರ ಸಂಘದ ಅಧ್ಯಕ್ಷರಾಗಿದ್ದ ದೊರೆಸ್ವಾಮಿಯವರನ್ನು ವಿಧಾನ ಪರಿಷತ್ತಿನ ಸದಸ್ಯರನ್ನಾಗಿ ನಾಮಕರಣ ಮಾಡಬೇಕೆಂದು ಮೈಸೂರು ಸಂಸ್ಥಾನದ ಪತ್ರಕರ್ತರ ಸಂಘ ಮುಖ್ಯಮಂತ್ರಿ ಹನುಮಂತಯ್ಯನವರಲ್ಲಿ ಮನವಿ ಮಾಡಿಕೊಂಡಿತ್ತು. ಅದರಂತೆ ಕೆಂಗಲ್ ಅವರನ್ನು ಭೇಟಿಯಾದ ದೊರೆಸ್ವಾಮಿಯವರಿಗೆ ''ನಿಮಗೆ ವಿಧಾನ ಪರಿಷತ್ತಿನ ಸದಸ್ಯತ್ವ ಬೇಕಾದರೆ ನೀವು ನನಗೆ ಲಾಯಲ್ ಆಗಿ ಇರುತ್ತೇನೆಂದು ಮಾತು ಕೊಡಬೇಕು. ನಾನೇನು ಮಾಡಿದರೂ ಅದನ್ನು ನೀವು ಬೆಂಬಲಿಸಬೇಕು ಮತ್ತು ಸಮರ್ಥಿಸಬೇಕು'' ಎಂದಾಗ, ''ನೀವು ತಪ್ಪು ಮಾಡಿದಾಗ ನಿಮ್ಮ ಕಿವಿಯಲ್ಲಾದರೂ ಹೇಳಬೇಕಲ್ಲವೆ ?'' ಎಂದ ದೊರೆಸ್ವಾಮಿಯವರ ಮಾತನ್ನ, ಸ್ವಭಾವವನ್ನ ಬಲ್ಲ ಹನುಮಂತಯ್ಯನವರು ಕೌನ್ಸಿಲ್ ಸದಸ್ಯತ್ವವನ್ನು ಕೊಡಲಿಲ್ಲ. ಅತೀ ಸರಳವಾಗಿ, ನಿರಾಡಂಬರವಾಗಿ ಬದುಕುತ್ತಿರುವ ದೊರೆಸ್ವಾಮಿಯವರು ಬಯಸಿದ್ದರೆ ಏನೆಲ್ಲಾ ಆಗಬಹುದಿತ್ತು ! ಹೇಗೆಲ್ಲಾ ಬದುಕಬಹುದಿತ್ತು ! ಆದರೆ, ಅವರ ಬದುಕಿನ ಆಯ್ಕೆ ನಿಚ್ಚಳವಾಗಿತ್ತು.

ಸ್ವಾತಂತ್ರ್ಯಾನಂತರ ಬೆಂಗಳೂರು ನಗರ ಕಾಂಗ್ರೆಸ್ಸಿನ ಕಚೇರಿ ಕಾರ್ಯದರ್ಶಿಯಾಗಿ ಸಾಕಷ್ಟು ಕೆಲಸ ಮಾಡಿರುವ ಇವರು ಸರ್ಕಾರದ ಹೊಣೆಗಾರಿಕೆಯನ್ನು ನೆನಪಿಸುತ್ತಲೇ ಅದು ಹಾದಿ ತಪ್ಪಿದಾಗಲೆಲ್ಲಾ ಎಚ್ಚರಿಸುತ್ತಲೇ ಬಂದವರು.

ದೊರೆಸ್ವಾಮಿಯವರು ಇದ್ದಕ್ಕಿದ್ದಂತೆ ಚಳುವಳಿಗಳಿಗೆ, ಸಮಾಜದ ಕೆಲಸಗಳಿಗೆ ಮನೆಬಿಟ್ಟು ಹೊರಟುಬಿಟ್ಟಾಗ ಚಿಕ್ಕಮಕ್ಕಳನ್ನು ಸಾಕಿ, ಸಲಹಿ ದೊಡ್ಡವರನ್ನಾಗಿ ಮಾಡುವ ಕೆಲಸ ಸುಲಭದ್ದೇನೂ ಆಗಿರಲಿಲ್ಲ. ಅಂಥ ಹೊಣೆಯನ್ನು ಹೊತ್ತ ಕುಟುಂಬ, ಅದರಲ್ಲೂ ಸಹಧರ್ಮಿಣಿಯನ್ನು ತುಂಬು ಹೃದಯದಿಂದ ಸ್ಮರಿಸುತ್ತಾರೆ. ಅವರ ಸಹಕಾರವೇ ತನ್ನೆಲ್ಲ ಸಾಧನೆಗೆ ಪರೋಕ್ಷವಾಗಿ ಕಾರಣವೆಂಬುದನ್ನು ಮರೆಯುವುದಿಲ್ಲ.

**ಪ್ರಶಸ್ತಿಗಳು** : ಇಂಥೆಲ್ಲ ಸಾಧನೆಯಲ್ಲಿ ತೊಡಗಿಸಿಕೊಂಡಿರುವ ದೊರೆಸ್ವಾಮಿಯವರಿಗೆ ಯಾವ ಪ್ರಶಸ್ತಿಗಳೂ ಕಡಿಮೆಯೇ. ಕರ್ನಾಟಕ ಪತ್ರಿಕಾ ಅಕಾಡೆಮಿ ಪುರಸ್ಕಾರ, ರಾಜ್ಯೋತ್ಸವ ಪ್ರಶಸ್ತಿ ಪುರಸ್ಕಾರ, ಕೋಮುಸೌಹಾರ್ದಕ್ಕಾಗಿ ದುಡಿದವರಿಗೆ ನೀಡುವ ರಾಷ್ಟ್ರಮಟ್ಟದ ದಾಲ್ಮಿಯ ಪ್ರಶಸ್ತಿ (೧೯೯೮), ಗಾಂಧೀಜಿ ಜೀವನ-ಮೌಲ್ಯಗಳನ್ನು ಹಾಗೂ ಸರ್ವೋದಯ ಕಾರ್ಯವನ್ನು ಪ್ರಚುರಪಡಿಸಲು ಮತ್ತು ಸ್ವಂತ ಜೀವನದಲ್ಲಿ ಈ ಮೌಲ್ಯಗಳನ್ನು ಆಚರಣೆಯಲ್ಲಿ ತರಲು ಜೀವನ ಪರ್ಯಂತ ಶ್ರಮಿಸಿದ ಸರ್ವೋದಯ ಕಾರ್ಯಕರ್ತರನ್ನು ಗೌರವಿಸಲೆಂದೇ ಸ್ಥಾಪಿತವಾಗಿರುವ 'ಮೂಡೇ ಪ್ರತಿಷ್ಠಾನ ಪುರಸ್ಕಾರ'ಗಳು ದೊರೆಸ್ವಾಮಿಯವರಿಗೆ ಸಂದಿವೆ.

''ಅಹಿಂಸೆ, ಸತ್ಯನಿಷ್ಠೆ ಹಾಗೂ ಸರಳ ಜೀವನ ಗಾಂಧಿ ಅನುಸರಿಸಿದ ಮಾರ್ಗ. ಇದು ಎಂದೆಂದಿಗೂ ಪ್ರಸ್ತುತ. ಇಂದು ಎಲ್ಲ ಕಡೆ ಹಿಂಸೆ, ಭೋಗ ಜೀವನ ಮನೆ ಮಾಡಿದೆ. ಒಬ್ಬ ವ್ಯಕ್ತಿ ತನ್ನ ಆಸೆಗಳ ಪ್ರಮಾಣವನ್ನು ತಾನೇ ಪರೀಕ್ಷೆ ಮಾಡಿಕೊಳ್ಳುವುದೇ ನಾಗರಿಕತೆ ಎಂಬುದು ಗಾಂಧಿವಾದವಾಗಿತ್ತು. ಆದರೆ ಇಂದು ಇದೆಲ್ಲವನ್ನೂ ಜನ ಮರೆಯುತ್ತಿದ್ದಾರೆ. ಜೀವನವನ್ನು ಭೋಗ ಜೀವನದೊಂದಿಗೆ ಇದೇ ರೀತಿ ಅಳೆಯುತ್ತಾ ಸಾಗಿದಲ್ಲಿ, ಭವಿಷ್ಯ ಭಯಾನಕವಾಗುವುದು. ಗಾಂಧಿಯನ್ನು ಮರೆತು ನಾವು ಬದುಕುಳಿಯುವಂತಿಲ್ಲ'', ಎಂದು ಹೇಳಿ ಮೌನ ವಹಿಸಿದ ದೊರೆಸ್ವಾಮಿಯವರ ಮನಸ್ಸಿನಲ್ಲಿ ತಮ್ಮೆಲ್ಲ ಹೋರಾಟದ ಶ್ರಮ ಸಾರ್ಥಕವಾಗಲಿಲ್ಲವೆಂಬ ನೋವು ಮಡುಗಟ್ಟಿದ್ದು ಎದ್ದುಕಾಣುತ್ತಿತ್ತು.

ಆ ದುಃಖವನ್ನು ನಾವು ಹೋಗಲಾಡಿಸಬಲ್ಲೆವೆ ?

ಗೀತಾ ಡಿ. ಸಿ.
ದೊಡ್ಡ ಹೆಜ್ಜಾಜಿ - ಅಂಚೆ, ದೊಡ್ಡಬಳ್ಳಾಪುರ - ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ - ೫೬೧ ೨೦೪

# ಸಂಕಟದಲ್ಲಿ ಸಿಲುಕಿದವರು

ಅರಬ್ಬೀ ಮೂಲ : ಅಲಿ ಮೊಹಮ್ಮದ್ ರಾಶಿದ್

**ಬೆ**ಳಗಿನ ಏಳರ ಸಮಯ. ಪಟ್ಟಣದ ಸಣ್ಣ-ಪುಟ್ಟ ಬೀದಿಗಳಲ್ಲಿ ಅಂಥ ಯಾವ ಚಟುವಟಿಕೆಯೆಂಬುದಿರಲಿಲ್ಲ. ಮುತ್ತು ಹುಡುಕಲು ಸಮುದ್ರದಲ್ಲಿ ಮುಳುಗು ಹಾಕುವ ದಿನಗಳೂ ಹತ್ತಿರ ಬಂದಿದ್ದ ಕಾರಣ ಕೆಲವು ಮನೆಗಳಲ್ಲಿ ಮಾತ್ರ ಭರದಿಂದ ಸಿದ್ಧತೆಗಳು ನಡೆದಿದ್ದವು.

ಆತ ಕಿರಿ ಅಗಲವಾದ ಓಣಿಯೊಂದರಲ್ಲಿದ್ದ ತನ್ನ ಮನೆಯತ್ತ ನಡೆದಿದ್ದ. ಮೈಮೇಲೆ ಶುಭ್ರವಾದ ಬಟ್ಟೆಗಳು; ತಲೆಯ ಮೇಲೊಂದು ಬಣ್ಣಗೆಟ್ಟ 'ಗುಟ್ರಾ' ಟೋಪಿ. ತನ್ನ ಆಸುಪಾಸು ಏನು ನಡೆದಿದೆಯೆಂಬುದರ ಪರಿವೆಯೇ ಇಲ್ಲದಂತೆ ತನ್ನ ಗುಂಗಿನಲ್ಲಿಯೇ ಆತ ಹೆಜ್ಜೆ ಹಾಕುತ್ತಲಿದ್ದ. ಮುಖದ ಮೇಲೊಂದು ಗಂಭೀರತೆ ಆವರಿಸಿತ್ತು. ಆತ ಸುಮಾರು ಐವತ್ತು ವರ್ಷದವನಾಗಿದ್ದರೂ ಅದಕ್ಕಿಂತ ಹೆಚ್ಚು ವಯಸ್ಸಾದವನಂತೆ ಕಾಣುತ್ತಲಿದ್ದ.

ಆ ಓಣಿಯ ಕೊನೆಯಲ್ಲಿ ಅವನ ಮನೆ; ಆಚೀಚಿನ ಮನೆಗಳಂಥದ್ದೆ. ಆತ ನೇರವಾಗಿ ತನ್ನ ಮನೆ ತಲುಪಿ ಬಾಗಿಲು ತಟ್ಟಿದ. ಅದು ತೆರೆಯಲಿಲ್ಲ. ಮತ್ತೆ ಮತ್ತೆ ತಟ್ಟಿದ. ಒಳಗಿನಿಂದ ಆತನ ಮಡದಿಯ ಸ್ವರ ಕೇಳಿಸಿತು :

''ಯಾರವರು ?''

''ನಾನೇ ಬಂದಿದೇನೆ : ಅಬೂ ಅಹ್ಮದ್.''

ಕ್ಷಣಾರ್ಧದಲ್ಲಿ ಬಾಗಿಲು ತೆರೆಯಿತು. ಹಿಂದಿನಿಂದಲೇ ಆತನ ಮಡದಿ ಉಮ್ಮ ಅಹ್ಮದಳೂ ಕಾಣಿಸಿಕೊಂಡಳು.

ಅಬೂ ಅಹ್ಮದ್ ಒಳಗೆ ಕಾಲಿಟ್ಟು ಮಡದಿಗೆ ಸಲಾಂ ಮಾಡಿ ನೇರ ಒಳಕೋಣೆಗೆ ನಡೆದ. ಅಲ್ಲಿ ಹೋಗಿ ನೆಲದ ಮೇಲೆ ಹಾಸಿದ ಹುಲ್ಲಿನ ಚಾಪೆಯ ಮೇಲೆ ಕುಳಿತು ಗೋಡೆಗೆ ಬೆನ್ನೂರಿದ.

ಕೆಲವು ಕ್ಷಣ ಮನೆಯೊಳಗೆಲ್ಲ ಗಂಭೀರ ಮೌನ. ಅಂತವೇ ಇಲ್ಲದ ಅನಂತ ಮೌನವೆನಿಸುವ ಮಾದರಿಯದು. ಉಮ್ಮ ಅಹ್ಮದಳೇ ಮುಂದಾಗಿ ಈ ಮೌನವನ್ನು ಭೇದಿಸಿದಳು :

''ಏನ್ರೀ, ಏನು ಸಮಾಚಾರ ? ಏನು ನಡೆಯಿತು ?''

ಉಮ್ಮ ಅಹ್ಮದಳ ಧ್ವನಿ ಅವನನ್ನು ಅವನ ಚಿಂತಾತುರ ಮನೋಸ್ಥಿತಿಯಿಂದ ಹೊರಗೆಳೆದಂತಾಯಿತು. ತಾನೊಂದು ತಳವೇ ಇಲ್ಲದ ಗುಂಡಿಯಿಂದ ಕೆಳಗಿಳಿದಂತೆ ಅವನಿಗೆ ಭಾಸವಾಯಿತು.

ಆತನ ಮಡದಿ ಕದಡಿದ ಮನೋಭಾವ ದೊಂದಿಗೆ ಆತನೆಡೆಗೆ ದೃಷ್ಟಿ ಬೀರಿದಳು. ಮರುಕ್ಷಣವೇ ತುಟಿಗಳ ಮೇಲೊಂದು ಮುಗುಳುನಗೆ ತಂದುಕೊಳ್ಳುತ್ತ ಅವನ ಬದಿಗೆ ಬಂದು ಕುಳಿತು ಕೇಳಿದಳು:

''ನೀವು ಯಾವುದನ್ನೂ ಹಚ್ಚಿಕೊಳ್ಳುವುದಿಲ್ಲ ಅಂತ ಹೇಳ್ತಿರ್ತೀರಲ್ಲ. ಆದರೆ ಇಂದು ಬೇರೆ ಥರಾನೇ ಕಾಣ್ತಿದ್ದೀರಿ. ಏನು ಅಂಥಾ ಚಿಂತೆ ಅಂತ ನನಗೂ ಹೇಳಬಾರದೇ ? ಯಾರಾದರೂ ನಿಮ್ಮನ್ನೀಗ ನೋಡಿದರೆ ಜಗತ್ತಿನ ಭಾರವೆಲ್ಲ ನಿಮ್ಮ ಮೇಲೆಯೇ ಬಿದ್ದಿದೆಯೇನೋ ಅಂತ ಅಂದ್ಕೊಳ್ಳಬಹುದು !''

ಅಬೂ ಅಹ್ಮದ್ ಸಾವರಿಸಿಕೊಂಡು ಹೇಳಿದ : ''ನಾಳೆಯಿಂದಲೇ ಮುತ್ತು ಹುಡುಕಲು ಸಮುದ್ರಕ್ಕಿಳಿಯುವ ಒಮ್ಮು ಕೆಲಸ ಆರಂಭವಾಗಬೇಕು. ಅದಕ್ಕಾಗಿ ಎಲ್ಲಾ ತಯಾರಿ ಆಗಬೇಕು. ಈ ಹೊತ್ತು ಅಬೂ ಸಲೇಹ್‌ನ ಕೆಫೆಯಲ್ಲಿ ಕೆಲವು ಕಪ್ತಾನರೂ ಸಮುದ್ರಕ್ಕಿಳಿಯುವ ಹುದ್ದರಿಗಳೂ ನನಗೆ ಭೇಟಿಯಾದರು. ನಮ್ಮ ಕೆಲವು ಹಳೆಯ ಹುದ್ದರಿಗಳು ಈ ಬಾರಿ ನಮ್ಮ ಜತೆ ಕೆಲಸಕ್ಕೆ ಬರುವುದಿಲ್ಲವಂತೆ. ಅವರು ತಮ್ಮ ಸಾಲ ತೀರಿಸಿದ್ದಾರೆ. ಮತ್ತೆ ಕೆಲವರು ಬೇರೆ ಹಡಗನ್ನು ಸೇರಿಕೊಳ್ಳುವವರಿದ್ದಾರಂತೆ. ಅದರಿಂದ ನನ್ನ ಚಿಂತೆ ಹೆಚ್ಚಾಗಿದೆ !''

ಉಮ್ಮ ಅಮ್ಮಳಿಗೆ ಅಚ್ಚರಿಯಾಯಿತು. ಆಕೆ ಕೇಳಿದಳು :

''ನೀವೇನು ಮಾಡಬೇಕೆನ್ನುತ್ತೀರಿ ?''

''ಇನ್ನೂ ಏನೂ ನಿರ್ಧರಿಸಿಲ್ಲ. ನಮ್ಮ ಜತೆ ಬರುವ ಹುದ್ದರಿಗಳು ಹೆಚ್ಚು ಕೆಲಸ ಮಾಡಬೇಕಾಗುವುದು. ನಮ್ಮ ಜತೆ ಬಾರದಿರುವ ಹುದ್ದರಿಗಳ ಗೈರು ಹಾಜರಿಯಿಂದ ನಮಗಾಗುವ ಹಾನಿಯ ಕೊಂಚ ಭಾಗವಾದರೂ ಇದರಿಂದ ತುಂಬಿಬರಬಹುದು. ಅಲ್ಲದೆ, ಬೇರೆ ಹೊಸಬರು ಸಿಕ್ಕರೆ ನೋಡಲು ಈ ಹೊತ್ತು ಅಬೂ ಖಾಲ್ಬಾನನಿಗೆ ಹೇಳಿದ್ದೇನೆ.''

ಕ್ಷಣಗಳು ಉರುಳಿದವು. ಈಗ ತನ್ನ ಪತಿಯ ಮನೋಸ್ಥಿತಿ ಹೇಗಿರಬೇಕೆಂದು ಉಮ್ಮ ಅಹ್ಮದ್ ಕಲ್ಪಿಸಿಕೊಂಡಳು. ಅವನ ಆಯಾಸವನ್ನು ಗಮನಿಸಿದ್ದ ಅವಳು ಮೆಲ್ಲನೆ ನುಡಿದಳು :

''ನಿಮಗೀಗ ಆಯಾಸವಾಗಿದೆ. ಕೊಂಚ ವಿಶ್ರಾಂತಿ ತಗೊಳ್ಳಿ. ಬಹಳ ಚಿಂತಿಸಬೇಡಿ. ನೀವು ಮಾಡಬೇಕಾದ ಸಿದ್ಧತೆಗಾಗಿ ಇಡಿಯ ದಿನವೇ ನಿಮ್ಮೆದುರಿಗಿದೆ !''

ಆತ ನಿಟ್ಟುಸಿರು ಬಿಟ್ಟ. ಅವನ ವಿಚಾರಗಳು ಹಿನ್ನೆಲೆಗೆ ಸರಿದಂತಾಗಿ, ಅವನು ತನ್ನಷ್ಟಕ್ಕೆ ಗೊಣಗಿಕೊಂಡ :

''ನಿಜ, ನಿಜ, ನಾಳೆಯಿಂದ ಮುತ್ತು ಹುಡುಕಲು ಸಮುದ್ರಕ್ಕಿಳಿಯುವ ಹಂಗಾಮು ಶುರುವಾಗುವುದು. ಮುಂದಿನ ನಾಲ್ಕು ತಿಂಗಳ ನಮ್ಮ ಪರಿಶ್ರಮ ಆಕಾಶ-ಸಮುದ್ರದ ನಡುವಿನ ಹೋರಾಟವಿದ್ದಂತೆ !''

ಉಮ್ಮ ಅಹ್ಮದ್ ಅವನತ್ತ ನೋಡುತ್ತ ನುಡಿದಳು :

''ನಿಮ್ಮ ಪರಿಶ್ರಮ ಸಫಲವಾಗಲಿ, ನೀವು ಹಾಗೂ ನಿಮ್ಮ ಸಂಗಡಿಗರು ಸುರಕ್ಷಿತವಾಗಿ ಮರಳಿ ಬರುವಂತಾಗಲಿ ಎಂದು ಅಲ್ಲಾಹನಲ್ಲಿ ನಾನು ಪ್ರಾರ್ಥಿಸುತ್ತೇನೆ.''

★ ★ ★

'ಇಶಾ' ನಮಾಜಿನ ಸಮಯವಾದುದನ್ನು ಅನುಲಕ್ಷಿಸಿ ಅಬೂ ಅಹ್ಮದ್ ತನ್ನ ಮಗ ಅಹ್ಮದನನ್ನು ಕರೆದುಕೊಂಡು ಮಸೀದಿಗೆ ಹೋದ. ಅವರಿಬ್ಬರೂ ಕೂಡಿ ರಾತ್ರಿಯ ಪ್ರಾರ್ಥನೆ ಸಲ್ಲಿಸಿ ಮನೆಗೆ ಬಂದರು.

ಊಟ ಮುಗಿಸಿ, ಅಬೂ ಅಹ್ಮದ್ ಮತ್ತೆ ತನ್ನ ಪತ್ನಿಯೊಡನೆ ಮಾತಾಡಲು ಕುಳಿತಾಗ, ಅವನೆಂದ :

''ಅಲ್ಲ, ನಮ್ಮ ಅಹ್ಮದ್‌ನಿಗೆ ನೋಡು ನೋಡುತ್ತ ಹನ್ನೊಂದು ವರ್ಷಗಳು ತುಂಬಿದವು ! ಅಬ್ಬಾ ದೇವ್ರೇ, ಅವನೀಗ ದೊಡ್ಡ ಮನುಷ್ಯನಾಗಿಬಿಟ್ಟಿದ್ದಾನೆ !''

ಉಮ್ಮ ಅಹ್ಮದ್ ಪತಿಯತ್ತ ಆಶ್ಚರ್ಯ ಹಾಗೂ ವ್ಯಾಕುಲತೆ ಬೆರೆತ ದೃಷ್ಟಿ ಬೀರಿದಳು. ಅವಳು ತನ್ನ ಕೈಗಳನ್ನು ಎದೆಯವರೆಗೆ ಎತ್ತಿದಳು. ಅವಳ ಹೃದಯ ತೀವ್ರಗತಿಯಿಂದ ಬಡಿದುಕೊಳ್ಳುತ್ತಲಿತ್ತು.

ಅಬೂ ಅಹ್ಮದ್ ಮತ್ತೆ ನುಡಿದ :

''ನನಗೆ ನೆನಪಿರುವ ಹಾಗೆ, ನಾನು ನಮ್ಮ ತಂದೆಯ ಜತೆ ಸಮುದ್ರಕ್ಕಿಳಿದಾಗ ನನಗೆ ಕೇವಲ ೮ ವರ್ಷಗಳಾಗಿದ್ದವು ! ನಮ್ಮ ಮಗನಿಗಂತೂ ಈಗ ಹನ್ನೊಂದು ! ನಾನು ನನ್ನ ತಂದೆಯ ಜತೆ ಹೋದಂತೆ ಈತ ನನ್ನ ಜತೆ ಕೆಲಸಕ್ಕೆ ಬರಬೇಕು.''

ತನ್ನ ಪತಿ ಹಾಸ್ಯಕ್ಕಾಗಿ ಹಾಗೆ ಹೇಳುತ್ತಿರಬೇಕೇನೋ ಎಂದೆನಿಸಿತು ಉಮ್ಮ ಅಹ್ಮದಳಿಗೆ. ಅಲ್ಲ, ಅದು ಹಾಸ್ಯವಾಗಿರಲಿಕ್ಕಿಲ್ಲ. ಯಾಕೆಂದರೆ ಆತ ಬಲು ಗಂಭೀರವಾಗಿ ಆ ಮಾತು ಆಡಿದ್ದ. ಆಕೆ ತನ್ನ ಮನಸ್ಸಿನ ಸಮತೋಲ ಕಾಯ್ದುಕೊಳ್ಳಲು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಅವಳ ಪತಿಯ ಆ ಮಾತು ಅವಳ ಶಕ್ತಿಯೆಲ್ಲ ಉಡುಗಿಹೋಗುವಂತೆ ಮಾಡಿತು. ಅವಳಿಗೊಮ್ಮೆಲೇ ಅರಚಿಕೊಳ್ಳಬೇಕೆನಿಸಿತು. ಆದರೆ ಶಬ್ದಗಳೇ ಹೊರಬರಲಿಲ್ಲ. ಅವಳಿಗೆ ಥಟ್ಟನೆ ಪಕ್ಷವಾತ ಹಿಡಿದಂತೆನಿಸಿತು.

ಅಬೂ ಅಹ್ಮದ್‌ನಿಗೆ ತನ್ನ ಪತ್ನಿಯ ಒಳಗುದಿ ತಿಳಿಯಲು ತಡಹಿಡಿಯಲಿಲ್ಲ. ಅವಳ ಭಯವೇನೆಂದು ಅವನಿಗೆ ಅರ್ಥವಾಯಿತು. ಸಮುದ್ರದಲ್ಲಿ ಮುಳುಗಿ ಮುತ್ತು ಹುಡುಕುವ ಸುದೀರ್ಘ ಪ್ರಯಾಣಕ್ಕೆಂದು ತಮ್ಮ ಮನೆಯ

ಜನರಿಂದ ಬೀಳ್ಕೊಂಡು ಹೊರಟವರು ಮತ್ತೆ ಮರಳಿ ಮನೆಗೆ ಬಂದೇ ಬರುತ್ತಾರೆಂಬ ಭರವಸೆಯೇನೂ ಇರುವುದಿಲ್ಲ.

''ಉಮ್ಮ ಅಹ್ಮದ್ ಏನಾಯ್ತು ನಿನಗೆ ? ಅಲ್ಲಾಹನ ಹೊರತಾಗಿ ಬೇರೊಬ್ಬ ದೇವರಿಲ್ಲ ಅಂತ ಪೈಗಂಬರರಿಗೆ ಪ್ರಾರ್ಥನೆ ಸಲ್ಲಿಸು.''

ಆತ ಮುಂದುವರೆದು ಹೇಳಿದ :

''ಅಹ್ಮದ್ ನನ್ನ ಮಗ - ನೀನು ಅವನನ್ನು ಪ್ರೀತಿಸುವಷ್ಟೇ ನಾನೂ ಅವನನ್ನು ಪ್ರೀತಿಸುತ್ತೇನೆ. ಅವನೊಬ್ಬ ಮನುಷ್ಯನಾಗುವಂತೆ ನಾವು ಅವನಿಗೆ ಕಲಿಸಬೇಕು. ಅಲ್ಲ ? ನಾವಂತೂ ಸಮುದ್ರದ ಮಕ್ಕಳು. ಸಮುದ್ರಕ್ಕಿಳಿದು ಮುತ್ತು ಹುಡುಕಿ ತೆಗೆಯುವ ಕಸಬು ನಮ್ಮ ಹಿರಿಯರಿಂದಲೇ ನಡೆದು ಬಂದದ್ದು. ಈತ ಅದರಲ್ಲಿ ನಿಷ್ಣಾತನಾಗಬೇಕು.''

ಅಬೂ ಅಹ್ಮದ್ ಮಾತು ನಿಲ್ಲಿಸಿದ. ತನ್ನ ಪತ್ನಿಯ ಮನಸ್ಸಿನ ಮೇಲೆ ತನ್ನ ಮಾತಿನ ಪರಿಣಾಮವಾಯಿತೇ ಎಂದು ಸೂಕ್ಷ್ಮವಾಗಿ ನಿರುಕಿಸಿದ. ಆದರೆ ಆಕೆಯ ಮುಖದ ಮೇಲೆ ಯಾವ ಭಾವನೆಯೂ ಕಾಣಲಿಲ್ಲ. ಅವಳು ನಿಸ್ತೇಜಳಾಗಿದ್ದಳು. ಪತಿಯ ಕರುಣೆಗಾಗಿ ಭಿಕ್ಷೆ ಬೇಡುವಂತೆ ಅವಳ ಕಂಗಳಲ್ಲಿ ದೈನ್ಯತೆ ತುಂಬಿತ್ತು. ತುಂಬ ಮಮತೆ ಮತ್ತು ಗೌರವ ತುಂಬಿದ ದನಿಯಲ್ಲಿ ಅಬೂ ಅಹ್ಮದ್ ಹೇಳಿದ :

''ದಯಮಾಡಿ ನನ್ನ ಪರಿಸ್ಥಿತಿಯ ಬಗೆಗೂ ವಿಚಾರ ಮಾಡು; ನನ್ನ ಮಾತಿನ ಉದ್ದೇಶವೇನೆಂಬುದನ್ನು ಅರ್ಥ ಮಾಡಿಕೋ.''

ಸ್ವಲ್ಪ ಸಮಯ ಕಳೆದ ನಂತರ, ಉಮ್ಮ ಅಹ್ಮದ್ ಆತನ ಬಳಿ ಬಂದಳು. ಅವನ ಮುಖವನ್ನೇ ದಿಟ್ಟಿಸುತ್ತ ತನ್ನ ಗೋಣಲ್ಲಾಡಿಸಿ ಸಮ್ಮತಿ ಸೂಚಿಸಿದಳು. ಆಮೇಲೆ ಆತನೆಂದ :

''ಇಲ್ಲಿ ಕೇಳು. ಅಹ್ಮದ್ ನಮ್ಮ ಜತೆ ಹಡಗಿನಲ್ಲಿರುತ್ತಾನೆ. ಇದರರ್ಥ ಅವನು ಈ ಬಾರಿಯೇ ಸಮುದ್ರಕ್ಕಿಳಿಯುತ್ತಾನೆಂದಾಗಲೀ ಅಥವಾ ಸಮುದ್ರಕ್ಕಿಳಿಯುವ ಯಾವೊಬ್ಬ ಹುದ್ದರಿಯ ಸಹಾಯಕನಾಗಿ ಕೆಲಸ ಮಾಡುತ್ತಾನೆಂದಾಗಲೀ ಅಲ್ಲ ! ಆತ ಈ ಸಲ ಸುಮ್ಮನೇ ಕೂತು, ಕೆಲಸವನ್ನು ನೋಡಿ ಕಲಿಯಬೇಕು ಅಷ್ಟೆ.''

ಆ ಮಾತು ಕೇಳಿ ಅವಳಿಗೊಂದಿಷ್ಟು ಹಾಯೆನಿಸಿತು. ಆಕೆ ಕೇಳಿದಳು : ''ಅಂದರೆ, ಆತ ನೀರೊಳಗೆ ಮುಳುಗು ಹಾಕುವುದಿಲ್ಲ ತಾನೆ ?''

''ಮುಳುಗು ಹಾಕುವುದೇ ? ಏನು ಕೇಳುತ್ತಿದ್ದೀಯಾ ? ಅಹ್ಮದ್ ಇನ್ನೂ ಚಿಕ್ಕವ. ಆತ ಈಗಲೇ ಹೇಗೆ ಸಮುದ್ರಕ್ಕಿಳಿದಾನು ? ಆತ ಬಹಳವಾದರೆ ನೀರು, ಖಜ್ಜೂರು ಇತ್ಯಾದಿ ಅಡಿಗೆಯವನಿಗೂ, ಹಡಗು ನಡೆಸುವವರಿಗೂ ತಂದುಕೊಡುವಲ್ಲಿ ನೆರವಾಗಬಹುದು, ಅಷ್ಟೆ .''

''ಸಮುದ್ರದ ಮೇಲೆ ಆತ ಹೋಗುತ್ತಿರುವುದು ಇದೇ ಮೊದಲ ಬಾರಿ.''

''ಅದು ನಿಜ. ಬರುಬರುತ್ತ, ಹಿಂದೆ ನಮಗಾದಂತೆ, ಅವನಿಗೆಲ್ಲ ಮುಂದೆ ರೂಢಿಯಾಗುತ್ತದೆ.''

ಉಮ್ಮ ಅಹ್ಮದ್ ಭಾರವಾದೆದೆಯಿಂದ ನಿಟ್ಟುಸಿರುಬಿಟ್ಟು ಹೇಳಿದಳು : ''ಅವನನ್ನು ಬಿಟ್ಟು ನನ್ನ ಗತಿ ಏನಾಗುತ್ತದೋ ನೋಡಬೇಕು ! ಅವನಿಲ್ಲದೆ ದಿನಗಳೆಯುವುದೇ ಕಷ್ಟವಾದೀತು. ಅಲ್ಲಾಹ್ ನನಗೆ ಆ ಶಕ್ತಿ ಕೊಡಲೆಂದು ಪ್ರಾರ್ಥಿಸುತ್ತೇನೆ. ಅವನು ಹುಟ್ಟಿದಾಗಿನಿಂದಲೂ ಹೀಗೆ ಬೇರೆಯಾಗುವ ಪ್ರಸಂಗವೇ ಬಂದಿರಲಿಲ್ಲ !''

''ಅಂದ್ರೆ, ಜೀವನದುದ್ದಕ್ಕೂ ಅವನು ನಿನ್ನೆದುರಿಗೇ ಇರಬೇಕಂತೀಯೇನು ? ನಾವು ಸಾಕಷ್ಟು ಕಷ್ಟದ ದಿನಗಳನ್ನು ಕಂಡವರು. ಅಹ್ಮದ್ ಒಬ್ಬ ಸದೃಢ ಮನುಷ್ಯನಾಗಬೇಕು. ಸಮರ್ಥ ಮನುಷ್ಯನಾಗಬೇಕು. ಅವನನ್ನು ಬೆಳಿಗ್ಗೆ ಬೇಗನೇ ಎಬ್ಬಿಸಿ, ಅವನ ಸಿದ್ಧತೆಯಲ್ಲಿ ನೆರವಾಗು. ಆತ ಮುಂದಿನ ಇಡಿಯ ಬೇಸಿಗೆಯನ್ನು ನಮ್ಮೊಡನೆ ಕಳೆಯಬೇಕಾಗುವುದು.''

ಉಮ್ಮ ಅಹ್ಮದ್ ತನ್ನ ಕಣ್ಣೀರು ಹರಿಯದಂತೆ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಆಕೆ ಮುಖ ತಿರುಗಿಸಿ ತನ್ನ ಕಪ್ಪು ಮೇಲುದದಂಚಿನಿಂದ ಕಣ್ಣೀರೊರೆಸಿಕೊಂಡಳು.

ಆ ರಾತ್ರಿಯಿಡೀ ಉಮ್ಮ ಅಹ್ಮದ್ ನಿದ್ದೆ ಮಾಡಲಿಲ್ಲ. ಬೆಳಿಗ್ಗೆದ್ದು ತನ್ನ ಮುದ್ದು ಮಗನನ್ನು ಬೀಳ್ಕೊಡುವ ಕಲ್ಪನೆ ಅವಳನ್ನು ಇರುಳೆಲ್ಲ ಕೊರೆಯುತ್ತಲಿತ್ತು. ಆಕೆಗೆ ನಿದ್ದೆಯಾದರೂ ಹೇಗೆ ಬಂದೀತು ? ನಾಳೆ ಬೆಳಗಾದರೆ ತನ್ನಿಂದ ಬೀಳ್ಕೊಂಡು ಸಮುದ್ರದ ದಾರಿ ಹಿಡಿಯುವ ತಮ್ಮ ಪತಿ ಮತ್ತು ಮಗ ಮರಳಿ ಬಂದೇ ಬರುತ್ತಾರೆಂಬ ಭರವಸೆಯಿಲ್ಲದಿರುವಾಗ ಅವಳಿಗೆ ನಿದ್ದೆಯಾದರೂ ಹೇಗೆ ಬಂದೀತು ? ಬೆಳಗಿನ ಕೋಳಿ ಕೂಗುವವರೆಗೂ ಆಕೆ ಹಾಸಿಗೆಯಲ್ಲಿ ಎಚ್ಚರದಿಂದ ಬಿದ್ದುಕೊಂಡೇ ಇದ್ದಳು. 'ಫಜ್ರ' (ಬೆಳಗಿನ) ನಮಾಜಿಗಾಗಿ ಮಸೀದಿಯಿಂದ 'ಅಜಾನ್' ಕೇಳುತ್ತಲೇ ಬೆಳಗಾಯಿತೆಂದು ಅವಳಿಗೆ ಖಾತರಿಯಾಯಿತು. ತನ್ನ ಕಣ್ಣೀರಿನಿಂದ ತೋಯ್ದು ಒದ್ದೆಯಾದ ತಲೆದಿಂಬಿನಿಂದ ಮುಖವನ್ನೆತ್ತಿದಳು. ಮನಸ್ಸಿಲ್ಲದ ಮನಸ್ಸಿನಿಂದ ಆಕೆ ಹಾಸಿಗೆ ಬಿಟ್ಟು ಮೇಲೆದ್ದಳು. ಈ ದಿನ ಬೆಳಗೇ ಆಗದೆ ಈ ರಾತ್ರಿ ಅನಂತವಾಗಿ ಬೆಳೆದುಬಿಡಬಾರದಿತ್ತೇ ಎಂದು ಅವಳ ಹೃದಯ ಗೋಗರೆಯುತ್ತಲಿತ್ತು. ಅನೇಕ ವರ್ಷಗಳ ನಂತರ ರಾತ್ರಿಯಿಡೀ ಕಣ್ಣೀರು ಹರಿಸಿದ ಅವಳ ಕಣ್ಣೆವೆಗಳನ್ನು ಸ್ಪರ್ಶಿಸಿದ ಮುಂಜಾವಿನ ಕಿರಣಗಳನ್ನು ಆಕೆ ನಂಬಲೇಬೇಕಾಗಿತ್ತು.

ಬೆಳಗಾಗುತ್ತಲೇ ಎದ್ದ ಅಹ್ಮದ್ ತನ್ನ ತಂದೆಯೊಂದಿಗೆ ಮಶೀದಿಗೆ ಹೋಗಿ ನಮಾಜ್ ಮಾಡಿ ಬಂದ. ಅವರಿಬ್ಬರೂ ಕೂಡಿಯೇ ಬೆಳಗಿನ ತಿಂಡಿ ಮುಗಿಸಿದರು. ಅವರು ಹೊರಡುವ ಗಳಿಗೆ ಹತ್ತಿರ-ಹತ್ತಿರ ಬರುತ್ತಲಿತ್ತು. ಅಗಲಿಕೆಯ ಆ ಗಳಿಗೆ ಸಾವಿರ ಬಾರಿ ಸಾಯುವ ನೋವಿಗಿಂತಲೂ ಅಸಹನೀಯವಾದ್ದು.

ಮಗನನ್ನು ಬಿಗಿದಪ್ಪಿಕೊಂಡು ನಿಂತ ಉಮ್ಮ ಅಹ್ಮದಳ ಕಣ್ಣೀರ ಕೋಡಿಗೆ ಕೊನೆಯೆಂಬುದೇ ಇರಲಿಲ್ಲ. ತನ್ನ ಮಗನನ್ನು ತನ್ನಿಂದ ದೂರ ಒಯ್ಯದಂತೆ ಆಕೆ ತನ್ನ ಪತಿಯಲ್ಲಿ ಮತ್ತೆ ಮತ್ತೆ ಬೇಡಿಕೊಂಡಳು. ಆದರೆ ಅನಿವಾರ್ಯ ಅಗಲಿಕೆಯ ಆ ಸಂದರ್ಭದಲ್ಲಿ ಅವಳ ಮಾತಿಗೆ ಯಾವ ನೆಲೆಯೂ ದೊರೆಯದೇ ಹೋಯಿತು.

ಅಬೂ ಅಹ್ಮದ್ ತನ್ನ ಹಾಗೂ ತನ್ನ ಮಗನ ಆವಶ್ಯಕ ವಸ್ತುಗಳನ್ನೆಲ್ಲ ಕೂಡಿಸಿಕೊಂಡ. ನಂತರ ಆತ ಅಡುಗೆ ಮನೆಯಲ್ಲಿ ಹೋಗಿ ತನ್ನ ಗೈರು ಹಾಜರಿಯಲ್ಲಿ ತನ್ನವಳಿಗೆ ಕೊರತೆಯೆನಿಸದಷ್ಟು ಅಕ್ಕಿ, ಸಕ್ಕರೆ, ಹಿಟ್ಟು , ಖಜ್ಜೂರು ಇತ್ಯಾದಿ ಇದ್ದುದನ್ನು ನೋಡಿ ಖಾತರಿಪಡಿಸಿಕೊಂಡ. ಮತ್ತೆ ಆತ ತನ್ನ ಮಡದಿಯ ಬಳಿ ಬಂದು ಅವಳಿಗೆ ಸಮಾಧಾನ ಹೇಳಿದ. ಅವಳ ಅಪ್ಪುಗೆಯಲ್ಲಿ ನಿಶ್ಚಲನಾಗಿ ನಿಂತಿದ್ದ ಮಗನನ್ನು ಮೃದುವಾಗಿ ಬಿಡಿಸಿಕೊಳ್ಳುತ್ತ ಅವನೆಂದ :

''ಇನ್ನು ಸಾಕು, ಉಮ್ಮ ಅಹ್ಮದ್. ಈಗಾಗಲೇ ತಡವಾಗಿದೆ. ನಾವಿನ್ನು ಹೊರಡಬೇಕು.....''

ಆ ಕ್ಷಣದಲ್ಲಿ ಏನನ್ನೂ ಆಡಲಾಗದ, ಏನನ್ನೂ ಮಾಡಲಾಗದ ತಾಯಿ ಮಗನ ಹಣೆಗೆ ಮುತ್ತಿಟ್ಟು ಅವನನ್ನು ಬೀಳ್ಕೊಟ್ಟಳು.

ಅಹ್ಮದ್ ತನ್ನ ಗಂಟೆತ್ತಿಕೊಂಡು ತಂದೆಯನ್ನು ಹಿಂಬಾಲಿಸಿದ; ತಾಯಿಯ ಕಂಬನಿಗಳು ಅವನನ್ನು ಹಿಂಬಾಲಿಸಿದವು.

ತಂದೆ-ಮಗ ಇಬ್ಬರೂ ಜನನಿಬಿಡ ಕೇರಿಗಳನ್ನು ದಾಟುತ್ತ ಮುಂದೆ ಸಾಗಿದರು. ಇದು ಹೊಸ ಹಂಗಾಮಿನ ಮೊದಲ ದಿನ. ಅನೇಕ ಜನ ಕಡಲ ಕಿನಾರೆಯಲ್ಲಿ ಕಾಯುತ್ತಿದ್ದ ತಮ್ಮ ತಮ್ಮ ಹಡಗುಗಳತ್ತ ಅವಸರವಸರದಿಂದ ಹೆಜ್ಜೆ ಹಾಕುತ್ತಿದ್ದರು. ಮತ್ತೆ ಕೆಲವರನ್ನು ಸಣ್ಣ ಸಣ್ಣ ನೌಕೆಗಳಲ್ಲಿ ಕೂಡ್ರಿಸಿ ಕಡಲಿನಲ್ಲಿ ಕೊಂಚ ದೂರ ನಿಂತ ಹಡಗುಗಳಿಗೆ ಸಾಗಿಸುತ್ತಿದ್ದರು. ಸಮುದ್ರಕ್ಕಿಳಿಯಲು ಹೊರಟವರಿಗೆಲ್ಲ ಶುಭ ಕೋರಿ ಬೀಳ್ಕೊಡಲು ಅಸಂಖ್ಯ ಹೆಂಗಸರೂ ಮಕ್ಕಳೂ ಕಡಲಿನತ್ತ ಸಾಗಿದ್ದರು. ಒಬ್ಬೊಬ್ಬರ ಮನಸ್ಸಿನಲ್ಲೂ ಮೌನ ಪ್ರಾರ್ಥನೆ.

ಕಡಲಿನಲ್ಲಿ ಅಂತರಂತರದಲ್ಲಿ ನಿಂತ ಹಡುಗಗಳ ಮೇಲೆ ಬೆಳ್ಳನೆಯ ನೌಕಾಪಟ ಏರಿಸಲಾಗಿತ್ತು. ಕಡಲ ಹಾಡುಗಾರ ನಿಹಾಮ್ ತನ್ನ ದನಿ ಎತ್ತರಿಸಿ ಮುತ್ತು ಹುಡುಕುವ ಹೊಸ ಹಂಗಾಮಿನ ಸ್ವಾಗತಗೀತೆ ಹಾಡುತ್ತಲಿದ್ದ. ಎಲ್ಲರ ಕಣ್ಣಲ್ಲೂ ಕಣ್ಣೀರು. ಗಳಿಗೆ ಗಳಿಗೆಗೂ ನಿಟ್ಟುಸಿರು. ತುಟಿಗಳ ಮೇಲೆ ದೇವರ ಹೆಸರು.

ಒಂದು ಗಂಟೆಯ ಕಾಲ ಒಂದು ಯುಗವಾಗಿ ಪರಿಣಮಿಸಿತು. ಸಮುದ್ರಕ್ಕಿಳಿಯಲು ಹೊರಟವರ ಪಾಲಿಗೆ. ತಾವು ಮತ್ತೆ ಮನೆಗೆ ಮರಳಿ ಬರುವ ಬಗ್ಗೆ ಖಾತರಿಯಿಲ್ಲದ ಕ್ಷಣಗಳು. ಅವರನ್ನು ಬೀಳ್ಕೊಟ್ಟು ಮನೆಯಲ್ಲಿ ಉಳಿದ ಮಹಿಳೆಯರ ಪಾಲಿಗೆ ತಮ್ಮ ಗಂಡಂದಿರನ್ನೂ ಮಕ್ಕಳನ್ನೂ ಮತ್ತೆ ಕಾಣುವೆವೋ ಇಲ್ಲವೋ ಎಂಬ ಅನುಮಾನದ ಕ್ಷಣಗಳು.....

ಅಬೂ ಅಹ್ಮದ್ ಒಂದು ಹಡಗಿನ ಕಪ್ತಾನ. ಕೊಲ್ಲಿಯದೊಂದು ನಿರ್ದಿಷ್ಟ ದಿಕ್ಕಿನತ್ತ ಅವನ ಹಡಗು ಪ್ರಯಾಣ ಬೆಳೆಸಿತು. ಸಮುದ್ರದಲ್ಲಿ ಮುತ್ತುಗಳ ಸಂಚಯ ಎಲ್ಲಿರುವುದೆಂದು ಅವನಿಗೆ ಚೆನ್ನಾಗಿ ಗೊತ್ತು. ಆ ಠಿಕಾಣೆ ಹತ್ತಿರ ಬರುತ್ತಿದ್ದಂತೆ ಅವನ ಹಡಗಿನ ಹುದ್ದರಿಗಳೆಲ್ಲ ನೀರಿಗೆ ಜಿಗಿಯಲು ಸನ್ನದ್ಧರಾದರು. ಒಬ್ಬೊಬ್ಬ ಹುದ್ದರಿಗೆ ನೀರಿನಲ್ಲಿ ದಣಿವಾದಾಗ ಅವನಿಗೆ ನೆರವಾಗಲು ಒಬ್ಬೊಬ್ಬ ಸಹಾಯಕ 'ಸೀಬ್'ನೂ ಸಿದ್ಧನಾಗಿಯೇ ಇದ್ದ. ಹಡಗಿನ ಒಂದು ಭಾಗದಲ್ಲಿ ಅಪರಿಚಿತನೊಬ್ಬ ನಿಂತುಕೊಂಡಿದ್ದನ್ನು ಗಮನಿಸಿ, ಅವನತ್ತ ನಡೆದು ಅಬೂ ಅಹ್ಮದ್ ಕೇಳಿದ : ''ಯಾರಪ್ಪ ನೀನು ?''

ಅಲ್ಲಿಯೇ ಹತ್ತಿರದಲ್ಲಿದ್ದ ಅಬೂ ಖಾಲ್ಫಾನ್ ಹೇಳಿದ : ''ಈ ಹೊಸಬ ನಿನ್ನೆ ತಾನೆ ನನ್ನನ್ನು ಭೆಟ್ಟಿಯಾಗಿ ನಮ್ಮೊಡನೆ ಈ ಬಾರಿಯ ಸಮುದ್ರಯಾನಕ್ಕೆ ತಾನೂ ಬಂದು ಸೀಬ್‌ನಾಗಿ ಕೆಲಸ ಮಾಡಲು ಸಿದ್ಧನಿರುವುದಾಗಿ ಹೇಳಿದ. ನಮಗೆ ಹೇಗೂ ಹೆಚ್ಚಿನ ಜನ ಬೇಕಾಗಿದ್ದರಲ್ಲ, ಇವನನ್ನು

ಕರೆತಂದುಬಿಟ್ಟೆ. ನಿಮ್ಮದೇನೂ ಅಭ್ಯಂತರವಿಲ್ಲವೆಂದು ಭಾವಿಸಿದ್ದೇನೆ.''

ಅಬೂ ಅಹ್ಮದ್‌ನ ಆಜ್ಞೆಯನುಸಾರ ಹುದ್ದರಿಗಳೆಲ್ಲ ಹಡಗಿನ ದಂಡೆಗುಂಟ ತಾವು ನಿಂತ ಜಾಗಗಳಿಂದ ಸಮುದ್ರಕ್ಕೆ ನೆಗೆದರು; ನೀರಿನಾಳಕ್ಕೆ ಇಳಿದರು.

ದಿನಗಳುರುಳಿದವು. ವಾರಗಳುರುಳಿದವು. ನೀರಿಗಿಳಿದ ಹುದ್ದರಿಗಳು ಬೇರೆ ಬೇರೆ ಆಕಾರದ ಮುತ್ತುಗಳನ್ನು ಶೇಖರಿಸಿದರು. ಕೆಲವು ಕಪ್ತಾನರು ಇಂಥ ಮುತ್ತುಗಳನ್ನು ಆ ಸಮುದ್ರಯಾನದ ಸಂದರ್ಭದಲ್ಲೇ ಕೊಲ್ಲಿ ಪ್ರದೇಶಗಳಿಗೆ ಬಂದ ವ್ಯಾಪಾರಿಗಳಿಗೆ ಮಾರಿಯೂಬಿಡುವುದುಂಟು. ಆದರೆ ಅಬೂ ಅಹ್ಮದ್‌ನಂಥ ಕಪ್ತಾನರು ಸಮುದ್ರದಿಂದ ಮನೆಗೆ ಮರಳಿದ ನಂತರವೇ ತಮ್ಮ ಮುತ್ತುಗಳ ವಿಲೇವಾರಿ ಮಾಡುವುದು ವಾಡಿಕೆ.

* * *

ಇನ್ನೇನು ಮುತ್ತಿನ ಹಂಗಾಮು ಮುಗಿಯುತ್ತ ಬಂದಿತ್ತು. ಅಬೂ ಅಹ್ಮದ್‌ನ ಹಡಗು ಕಡಲ ಕಿನಾರೆಗೆ ಮರಳಿ ಹೊರಡುವ ಮುನ್ನಾ ದಿನದ ರಾತ್ರಿ ಹಡಗಿನಲ್ಲಿದ್ದವರೆಲ್ಲ ಒಂದೆಡೆ ಸೇರಿ ತಮ್ಮ ತಮ್ಮ ಅನುಭವಗಳ ಬಗ್ಗೆ ಮನದೆರೆದು ಹರಟೆ ಹೊಡೆಯುತ್ತ ಕುಳಿತಾಗ ಅಬೂ ಅಹ್ಮದ್‌ನಿಗೆ ಒಮ್ಮೆಲೇ ತಲೆನೋವು ಶುರುವಾಯಿತು. ವಿಪರೀತ ತಲೆನೋವು : ತನ್ನ ತಲೆ ಸಿಡಿದೇ ಹೋಗುವುದೇನೋ ಎಂದೆನಿಸಿತು ಅವನಿಗೆ. ಕ್ರಮೇಣ ಅವನ ಮೈಯೆಲ್ಲವೂ ನೋಯಲಾರಂಭಿಸಿತು. ಆ ಬೇನೆಯನ್ನು ಸಹಿಸಲಾಗದೆ ಆತ ಧೊಪ್ಪನೆ ಕೆಳಗೆ ಬಿದ್ದುಬಿಟ್ಟ. ಹಡಗಿನಲ್ಲಿಯ ಜನರೆಲ್ಲ ಅವನೆಡೆಗೆ ಧಾವಿಸಿದರು. ಅವನ ಮಗ ಮತ್ತು ಅಬು ಖಾಲ್ಫಾನ್ ಅವನ ಬಳಿ ಕುಳಿತು ಉಪಚಾರ ನಡೆಸಿದ್ದರು. ಅಬೂ ಅಹ್ಮದ್‌ನನ್ನು ಆತನ ಹಾಸಿಗೆಗೆ ಒಯ್ದು ಮಲಗಿಸಿದರು. ಎಲ್ಲರಿಗೂ ಗಾಬರಿ. ಏನು ಮಾಡುವುದೆಂದೇ ತಿಳಿಯಲಿಲ್ಲ. ಆ ರಾತ್ರಿ ಕಳೆದು ಬೆಳಗಾಗುವುದರೊಳಗೆ ಅವರ ಕಪ್ತಾನ ಅಬೂ ಅಹ್ಮದ್ ಹೊಸ ಬೆಳಕು ಕಾಣದ ದಾರಿಗೆ ಹೊರಟುಹೋಗಿದ್ದ.....

ಹಡಗಿನಲ್ಲಿದ್ದವರೆಲ್ಲ ಕಳವಳಪಟ್ಟರು. ಕಪ್ತಾನನ ಆತ್ಮಕ್ಕೆ ಶಾಂತಿ ಕೋರಿ ಪ್ರಾರ್ಥನೆ ಸಲ್ಲಿಸಿದರು. ಹೌಹಾರಿ ಅಳುತ್ತಿದ್ದ ಬಾಲಕ ಅಹ್ಮದನನ್ನು ಸಂತೈಸಲು ಯತ್ನಿಸಿದರು. ಆತ ತಂದೆಯ ಮೃತ ಶರೀರದ ಮೇಲೆ ಬಿದ್ದು ಬಿದ್ದು ಕರುಳು ಬಿರಿಯುವ ಹಾಗೆ ಕೂಗಿಕೊಳ್ಳುತ್ತಲಿದ್ದ: ''ಅಪ್ಪಾಜೀ, ಮಾತಾಡಿ, ಅಪ್ಪಾಜೀ ಮಾತಾಡಿ !''

ನಾವಿಕರೆಲ್ಲ ಅಹ್ಮದ್‌ನನ್ನು ತಂದೆಯ ಶರೀರದಿಂದ ಬಿಡಿಸಿ ದೂರ ಕರೆದೊಯ್ದರು. ಅತ್ತು ಅತ್ತು ಕಣ್ಣು ಕೆಂಪಾಗಿದ್ದ ಅಬೂ ಖಾಲ್ಫಾನ್ ಮುಂದಾಗಿ ಅಂತಿಮಕ್ರಿಯೆಗಳನ್ನು ಪೂರೈಸಿದ. ಶವ ಸ್ನಾನ ಮಾಡಿಸಿ ಪ್ರಾರ್ಥನೆಯೊಂದಿಗೆ ರೂಢಿಯಂತೆ ಶವವನ್ನು ಕಡಲೊಡಲಿಗೊಪ್ಪಿಸುವ ಸಿದ್ಧತೆ ಮಾಡಿದ. ಇನ್ನೇನು, ಶವವನ್ನೆತ್ತಿ ಕಡಲಿಗಿಳಿಸುತ್ತಾರೆಂಬ ಕ್ಷಣದಲ್ಲಿ ಅವನ ಮಗ ಅಹ್ಮದ್ ಧಾವಿಸಿ ಬಂದು ಕೊನೆಯ ಸಲ ತಂದೆಯ ಶರೀರವನ್ನಪ್ಪಿ ರೋದಿಸತೊಡಗಿದ. ಕೆಲ ಕಾಲ ಮೃತಶರೀರದ ಸಾನ್ನಿಧ್ಯದಿಂದ ಆತ ದೂರ ಸರಿಯಲೇ ಇಲ್ಲ. ಅಬೂ ಖಾಲ್ಫಾನ್ ''ಅಹ್ಮದ್, ಸಮಯವಾಯಿತು ಏಳಪ್ಪ'' ಎಂದು ಮೃದುವಾಗಿ ಹಿಡಿದು ಮೇಲೆಬ್ಬಿಸಿದ. ಅಹ್ಮದ್ ಬದಿಗೆ ಸರಿದು ಉಸಿರು ಬಿಗಿಹಿಡಿದು ನಿಂತ. ಸಮುದ್ರದ ನೀರು ಧಿಳ್ ಎಂದು ಮೇಲೆ ನೆಗೆದಾಗಲೇ ಆತ ಉಸಿರುಬಿಟ್ಟ.

ಹಡಗಿನಲ್ಲಿದ್ದ ನಾವಿಕರೆಲ್ಲರಿಗೂ ಒಮ್ಮೆಲೇ ತಮ್ಮ ಪರದೇಶಿತ್ವದ ಅರಿವಾಯಿತು. ಅವರೆಲ್ಲರೀಗ ಕಪ್ತಾನರೇ ಇಲ್ಲದ ನಾವಿಕರಾಗಿ ನಿಂತಿದ್ದರು !

''ಯಾ ಅಲ್ಲಾಹ್ ! ಇದೇನಾಗಿ ಹೋಯಿತು ! ನಾವೀಗ ನಿಜವಾಗಿಯೂ ಸಂಕಟದಲ್ಲಿ ಸಿಲುಕಿಕೊಂಡಂತಾಯಿತಲ್ಲ !'' ಎಂದು ಅವರೆಲ್ಲ ಗೋಗರೆದರು.

ಮರುದಿನ ಬೆಳಿಗ್ಗೆ ಹಡಗಿನಲ್ಲಿದ್ದವರೆಲ್ಲ, ತಮ್ಮ ಮುಂದಿನ ಕ್ರಮದ ಬಗ್ಗೆ ಚರ್ಚಿಸಲೆಂದು ಒಂದೆಡೆ ಸೇರಿದರು. ನಮ್ಮ ಕಪ್ತಾನನಂತೂ ತೀರಿಹೋದ. ಇನ್ನು ಮುಂದೆ ಈ ಹಡಗು ನಡೆಸುವವರು ಯಾರು ? ಈಗ ನಾವು ಶೇಖರಿಸಿ ಕೊಟ್ಟ ಮುತ್ತುಗಳ ಒಡೆಯರು ಯಾರು ?

ಮಾತಿಗೆ ಮಾತು ಬೆಳೆಯಿತು. ಬರುಬರುತ್ತ ಚರ್ಚೆಗೆ ಬಿಸಿ ಏರಿತು. ಒಬ್ಬೊಬ್ಬರದೂ ಬೇರೆ ಬೇರೆ ಅಭಿಪ್ರಾಯ. ಅಬೂ ಖಾಲ್ಫಾನ್ ಹಿರಿತನ ವಹಿಸಿ ಸಮಸ್ಯೆಯ ಪರಿಹಾರಕ್ಕೆ ಪ್ರಯತ್ನಿಸಿದ. ಆತ ಒಬ್ಬೊಬ್ಬರ ಅಭಿಪ್ರಾಯವನ್ನೂ ಕೇಳಿಕೊಂಡ.

ಒಬ್ಬರೆಂದರು : ''ಈಗ ಶೇಖರಿಸಿದ ಮುತ್ತುಗಳನ್ನು ನಾವೆಲ್ಲ ಸಮಸಮವಾಗಿ ಹಂಚಿಕೊಳ್ಳಬೇಕು.''

ಮತ್ತೊಬ್ಬರು : ''ಏನೂ, ಸಮಸಮವಾಗಿಯೇ ? ಅದು ಸರಿಯಲ್ಲ. ಹೆಚ್ಚು ಶ್ರಮವಹಿಸಿದವರಿಗೂ ಸಮಪಾಲೇ ?''

ಮಗದೊಬ್ಬರು : ''ಅವರವರ ಶ್ರಮದ ಪ್ರಮಾಣದಲ್ಲಿ ಅವರವರ ಪಾಲು ಸಿಗಬೇಕು.'' ಹೀಗೆ ಭಿನ್ನಾಭಿಪ್ರಾಯಗಳು ಬರಲಾರಂಭಿಸಿದಾಗ ಅಬೂ ಖಾಲ್ಫಾನ್ ಹೇಳಿದ : ''ಮುತ್ತುಗಳನ್ನು ಹಂಚಿಕೊಳ್ಳುವುದೇ ? ಈ ಹಡಗು ಹಾಗೂ ಮುತ್ತುಗಳ ಒಡೆತನ ಅಬೂ ಅಹ್ಮದ್ ಅವರದಾಗಿತ್ತು. ಅಲ್ಲಾಹ್ ಅವರ ಆತ್ಮಕ್ಕೆ ಶಾಂತಿಯನ್ನೀಯಲಿ ! ಈಗ ಆ ಒಡೆತನ ಅವರ ಮಗ ಅಹ್ಮದನಿಗೆ ಸೇರಿದ್ದು. ಆತನಂತೂ ನಮ್ಮ ಜತೆಗೇ ಇದ್ದಾನೆ. ನಾವು ಇವನ್ನೆಲ್ಲಾ ಅವನ ಕೈಗೊಪ್ಪಿಸಿಬಿಡಬೇಕು !''

''ಛೀ, ಅದು ಸಾಧ್ಯವಿಲ್ಲ'' - ಒಬ್ಬನೆಂದ. ''ಅವರ ಮಗ ತೀರಾ ಚಿಕ್ಕವ. ಅಲ್ಲದೆ, ನಮ್ಮ ಕಪ್ತಾನರ ಮಾತಾದರೂ ಏನು ? ಅವರನ್ನೂ ನಾವು ಅಷ್ಟು ಪ್ರೀತಿಸುತ್ತಿರಲಿಲ್ಲ. ಯಾಕೆಂದರೆ, ಅವರು ನಮ್ಮನ್ನು ಸರಿಯಾಗಿ ನಡೆಸಿಕೊಳ್ಳುತ್ತಿರಲಿಲ್ಲ. ನಮ್ಮ ಶೋಷಣೆ ಮಾಡುತ್ತಿದ್ದರು. ನಮ್ಮನ್ನು ಸಾಕಷ್ಟು ದುಡಿಸಿಕೊಂಡು ನಮಗೊಂದು ಚೂರು ಕೊಡುತ್ತಿದ್ದರು ಅಷ್ಟೆ !''

ಅಬೂ ಖಾಲ್ಫಾನ್ ಹೇಳಿದ– ''ಅಬೂ ಅಹ್ಮದ್ ಏನು ಮಾಡುತ್ತಿದ್ದರೋ ಅದನ್ನೇ ಎಲ್ಲ ಕಪ್ತಾನರೂ ಮಾಡುತ್ತಾರೆ. ಅಬೂ ಅಹ್ಮದ್ ನಿಮಗೆ ಬೇಕಾದಾಗಲೆಲ್ಲ ಸಾಲವನ್ನಾದರೂ ಕೊಟ್ಟು ನೆರವು ನೀಡುತ್ತಿದ್ದರಲ್ಲ !''

ಅವನ ಮಾತಿಗೆ ಪ್ರತಿಕ್ರಿಯೆಯಾಗಿ ತಲೆಗೊಂದು ಥರಾ ಮಾತಾಡತೊಡಗಿದರು. ನಡುವೆಯೇ ಒಬ್ಬನೆಂದ : ''ಕೊಂಚ ಶಾಂತರಾಗಿರಿ, ಹೀಗೇ ಮಾತಾಡುತ್ತ ಹೋದರೆ ನಾವು ಯಾವ ತೀರ್ಮಾನಕ್ಕೂ ತಲುಪಲಿಕ್ಕಿಲ್ಲ. ನನಗೆನಿಸುವ ಮಟ್ಟಿಗೆ, ನಮ್ಮ ಕಪ್ತಾನರ ಮಗ ತುಂಬ ಎಳೆಯವನಾದ ಕಾರಣ ಮೊದಲು ನಾವೊಬ್ಬ ಕಪ್ತಾನನನ್ನೇ ಆಯ್ಕೆ ಮಾಡಬೇಕು. ಆತ ಹಡಗಿನ ಹೊಣೆ ವಹಿಸಿಕೊಳ್ಳುವುದು ಮಾತ್ರವಲ್ಲದೆ ನಮ್ಮ ಸಮಸ್ಯೆಗಳನ್ನೂ ಬಗೆಹರಿಸಬಹುದು ! ಏನಂತೀರಿ ?'' ಈ ಮಾತಿಗೆ ಕೆಲವರು ಒಪ್ಪಿದರು. ಕೆಲವರು ಅಸಮ್ಮತಿಯಿಂದ ಕೂಗಿದರು.

ಮತ್ತೊಬ್ಬನೆಂದ : ''ನೋಡಿ ಮಹಾಶಯರೇ, ನನ್ನದಂತೂ ಇದೇ ಕೊನೆಯ ಸಮುದ್ರಯಾನ. ಆದ್ದರಿಂದ ಈ ಮುತ್ತುಗಳ ಹಂಚಿಕೆಯ ಕೆಲಸವನ್ನೀಗಲೇ ಮುಗಿಸಿ ಈ ಹಡಗಿನ ಹೊಣೆಯನ್ನು ಮಾತ್ರ ಕಪ್ತಾನರ ಮಗನಿಗೆ ಒಪ್ಪಿಸಿಬಿಡಬೇಕು !''

ಅಬೂ ಖಾಲ್ಫಾನನಿಗೆ ಸಿಟ್ಟು ಬಂತು. ಆತ ದನಿಯೆತ್ತರಿಸಿ ಹೇಳಿದ : ''ಎಂಥಾ ಮಾತು ! ಇದು ನಮ್ಮ ಕಪ್ತಾನರಿಗೆ ದ್ರೋಹ ಬಗೆದಂತೆ ! ನಮ್ಮ ಕಪ್ತಾನರು ನಮ್ಮ ಜತೆಗಿದ್ದಾರೆಂದೇ ನಾವು ಮರಳಿ ಹೊರಡೋಣ. ಆಮೇಲೆ ಒಬ್ಬ ನ್ಯಾಯಾಧೀಶರು ಹೇಗೆ ಹೇಳುತ್ತಾರೋ ಹಾಗೆ ಕೇಳೋಣ.'' ಆ ಮಾತಿಗೊಪ್ಪದ ಮತ್ತೊಬ್ಬನೆಂದ : ''ಅದಾಗದು ಮಹಾಶಯರೇ ! ನಾವೀಗಲೇ ಮುತ್ತು ಹಂಚಿಕೊಂಡುಬಿಡುವುದೇ ವಾಸಿ. ನಾವು ಮರಳಿ ಹೋದ ನಂತರ ಯಾರಾದರೂ ಕೇಳಿದರೆ, ನಮ್ಮ ಕಪ್ತಾನರು ತೀರಿಹೋಗುವ ಮುನ್ನ ಅಪ್ಪಣೆ ಕೊಡಿಸಿದಂತೆ ನಾವು ಮಾಡಿದೆವೆಂದು ಹೇಳಿಬಿಡೋಣ.''

ಅಬೂ ಖಾಲ್ಫಾನ್ ನುಡಿದ : ''ಅದು ತೀರಿಹೋದ ಕಪ್ತಾನನ ಸಂಪತ್ತನ್ನು ನಾವು ಕಳವು ಮಾಡಿದಂತಾಗುವುದಿಲ್ಲವೇ ?''

ಥಟ್ಟನೆ ಇನ್ನೊಬ್ಬನೆಂದ : ''ಮತ್ತೆ ಅವರಿದ್ದಾಗ, ಅವರು ನಮ್ಮಿಂದ ಕಳವು ಮಾಡುತ್ತಿರಲಿಲ್ಲವೇ ?'' ಒಂದೊಂದು ಮಾತೂ ಅಡ್ಡದಾರಿಗೆಳೆಯಲಾರಂಭಿಸಿತು. ವಾದಕ್ಕೆ ವಾದ ಬೆಳೆದು ವಾತಾವರಣ ಬಿಸಿಗೊಂಡಿತು. ಕೈಗೆ ಕೈ ಹತ್ತಿತು. ತರ್ಕರಹಿತ 'ನಾ-ನೀ' ಶುರುವಾಯಿತು.

ಅಬೂ ಖಾಲ್ಫಾನ್ ನಿರುಪಾಯನಾಗಿ ''ಆಯ್ತು ಮಾರಾಯ್ರೆ, ಮುತ್ತುಗಳನ್ನು ಹಂಚಿಕೊಂಡುಬಿಡೋಣ - ನಡೀರಿ'' ಎಂದ. ಎಲ್ಲರೂ ಕಪ್ತಾನನ ಕೋಣೆಗೆ ಹೋಗಿ, ಮುತ್ತುಗಳ ಗಂಟನ್ನು ಹುಡುಕಲಾರಂಭಿಸಿದರು. ಕೋಣೆಯ ಮೂಲೆ ಮೂಲೆ ಹುಡುಕಿದರೂ ಮುತ್ತುಗಳ ಪತ್ತೆಯಿಲ್ಲ !

ಎಲ್ಲರೂ ಹುಡುಕಿ ಹುಡುಕಿ ಬೇಸತ್ತು ಕಪ್ತಾನನ ಮಗನನ್ನು ಕೇಳಿದರು : ''ಮುತ್ತುಗಳೆಲ್ಲಿವೆ ಗೊತ್ತಾ ?''

ಅಹ್ಮದ್ ತನ್ನ ಕೆರಳಿದ ಕಣ್ಣಗಲಿಸಿ ಹೇಳಿದ : ''ನಾನು ಕೊನೆಯ ಗಳಿಗೆಯಲ್ಲಿ ಅಪ್ಪಾಜಿಯವರನ್ನು ಅಪ್ಪಿಕೊಂಡಾಗ... ಅವರ ಮುತ್ತುಗಳನ್ನು ಅವರ ಬಟ್ಟೆಯಲ್ಲಿ ಹಾಕಿಬಿಟ್ಟೆ !''

ಅಹ್ಮದ್ ಮುಂದೆ ನಡೆಯುವುದನ್ನು ಮೊದಲೇ ಊಹಿಸಿದ್ದನೇನೋ. ಅಂತೆಯೇ ಕಡಲಿನ ಸಂಪತ್ತು ಕಡಲಿನ ಪಾಲಾಗಿತ್ತು !

ಕನ್ನಡಕ್ಕೆ : ಬಿ. ಎ. ಸನದಿ
೧೨೦೨, ಗೋಕುಲ್ ಹೆವೆನ್, ಠಾಕೂರ್ ಕಾಂಪ್ಲೆಕ್ಸ್, ಕಾಂದೀವಲಿ (ಪೂ), ಮುಂಬೈ-೪೦೦೧೦೧

## ಮನುಷ್ಯ : ಜ್ಞಾತದಿಂದ ಅಜ್ಞಾತದೆಡೆಗೆ

ಮನುಷ್ಯನಷ್ಟು ಶ್ರೇಷ್ಠ
ಆತನಷ್ಟು ಕನಿಷ್ಠ
ಜೀವಿ ಈ ಜಗತ್ತಿನಲ್ಲಿ ಇನ್ನೊಬ್ಬನಿರಲಿಕ್ಕಿಲ್ಲ

ಅಮೀಬಾದಿಂದ ವಿಕಸಿತನಾಗಿ
ನಾಲ್ಕು ಕಾಲಿನಿಂದ ಎರಡು ಕಾಲಿಗೆ ನಿಂತು

ಶಿಕಾರಿಯಾಗಿ, ರೈತನಾಗಿ
ಕೂಲಿಯಾಗಿ, ವ್ಯಾಪಾರಿಯಾಗಿ
ಬಡವನಾಗಿ, ಸಿರಿವಂತನಾಗಿ
ಪ್ರಜೆಯಾಗಿ, ರಾಜನಾಗಿ

ಅನಾದಿ ಸಂಸ್ಕೃತಿಯಿಂದ
ಅನಂತ ಸಂಸ್ಕೃತಿಯೆಡೆಗೆ
ವಿಕೃತ ಪ್ರಕೃತ
ಅಸಂಸ್ಕೃತ ಕಾಡುಮಾನವನಾಗಿ

ಒಂಬತ್ತು ಖಂಡವನ್ನಾಳಿದ ವೀರ
ಹತ್ತನೆಯ ಖಂಡಕ್ಕಾಗಿ ನಿರಂತರ
ಹುಡುಕಾಟ

ಮನುಷ್ಯನೆಂದರೆ ಒಬ್ಬ ಜಾದೂಗಾರ
ಪೂಜಾರಿ ವಿಜ್ಞಾನಿ
ಡಾಕ್ಟರ್ ಇಂಜಿನಿಯರ್



ಇರುವೆಯಾಗಿ ಪರ್ವತವನ್ನು
ನುಂಗುವವ
ಮಾಲೀಕನಾಗಿ ಗುಲಾಮಿ ಮಾಡುವವ
ದೇವನಾಗಿ ಸೈತಾನಿ ಕೆಲಸದವ

ಜಗತ್ತನ್ನು ಅಂಗೈ ಮೇಲೆ
ಹಿಡಿದು
ಗಹಗಹಿಸಿ ನಕ್ಕು
ನಡುನಡುವೆ ಬಿಕ್ಕು
ಎಂತಹ ಸೊಕ್ಕು

ಬುದ್ಧ ನಿರ್ಮಿಸಿ ಯುದ್ಧ ಹೂಡಿದವ
ಜಾತಿಗಳ ಹುಟ್ಟಿಸಿ ವೈರ ಬಿತ್ತಿದವ
ಕಲ್ಲುಗಳನು ದೇವರಾಗಿ ಪರಿವರ್ತಿಸಿದವ
ಪಾಪ ಪುಣ್ಯಗಳ ಕಥೆ ಹೆಣೆದು
ಜನರನ್ನು ಸುಲಿದವ
ಧರ್ಮದ ಹೆಸರಿನಲಿ ರಕ್ತ ಕಾಲುವೆ ಹರಿಸಿದವ

ತಾಜಮಹಲ್ ಚಾರ್‌ಮಿನಾರ್
ಗೋಲಗುಂಬಜ್ ಅಜಂತಾ ಪಿರ್‍ಯಾಮಿಡ್
ಬೆಂಗಳೂರು ದಿಲ್ಲಿ ಮೈಸೂರು ಕಲಕತ್ತಾ
ಕಟ್ಟಿ ಅವುಗಳನ್ನು ಹಾಳು ಮಾಡಿದವ
ಕಟ್ಟುತ್ತ ಕಟ್ಟುತ್ತ ಕಟ್ಟಡಗಳನ್ನು ಕೆಡವಿದವ

ಗರ್ಭಗುಡಿಯಲಿ ರೇಪ್ ಮಾಡಿದವ
ಸತ್ಯ ಹೇಳಿದವನ ನಾಲಿಗೆ ಕತ್ತರಿಸಿದವ

ಗಾಂಧೀಯನ್ನು ಹುಟ್ಟಿಸಿದವ
ಗೋಡ್ಸೆಯನ್ನು ನಿರ್ಮಿಸಿದವ
ಹಿಟ್ಲರ್ ನೆಪೋಲಿಯನ್ ಇದಿ ಅಮೀನ್
ಹುಟ್ಟಿಸಿ ಸಾವಿರ ಸಾವಿರ ಜನರನ್ನು
ಕೊಂದು ಹಾಕಿದವ

ಮನುಷ್ಯನೆಂದರೆ : ಇಷ್ಟೆಲ್ಲ ಇದ್ದೂ
ಭೂಮಿಯ ಮೇಲೆ ಶಾಂತನಾಗಿ
ತೃಪ್ತನಾಗಿ ಅಸೂಯಾರಹಿತನಾಗಿ
ತನ್ನಷ್ಟಕ್ಕೆ ತಾನೇ
ಯಾರ ಕೆತ್ತೆಬಜೆ ಕಾರಬಾರ ಮಾಡದೆ

ಇರು ಎಂದರೆ
ಮನುಷ್ಯನೆಂದೂ ಇರಲಾರ

ಯಾಕೆಂದರೆ
ಮನುಷ್ಯನಷ್ಟು ಕನಿಷ್ಠ
ಆತನಷ್ಟು ಶ್ರೇಷ್ಠ
ಜೀವಿ ಜಗತ್ತಿನಲ್ಲಿ ಇನ್ನೊಬ್ಬನಿರಲಿಕ್ಕಿಲ್ಲ.

ಡಾ ॥ ಸರಜೂ ಕಾಟ್ಕರ್
''ಕಾವ್ಯ'' ಮಹಂತೇಶ ನಗರ
ಬೆಳಗಾವಿ - ೫೯೦ ೦೧೬

## ಹಾಮಾನಾ ನೆನಪಿನಲ್ಲಿ



ನೀಲಿಯಾಗಸದಲ್ಲಿ , ಹುಣ್ಣಿಮೆಯ ಇರುಳಲ್ಲಿ
ತುಂಬು ಚಂದ್ರನ ಸುತ್ತ , ಬೆಳ್ಳಿ ಕಮಾನಿನ ಹಾಗೆ
ಮುಡಿಯಿಂದ ಭುಜತನಕ ಹೊಳೆಹೊಳೆವ ಕೂದಲು.
ಧೀರ, ಗಂಭೀರ, ಮಂದಸ್ಮಿತ ವದನ ;
ಹೊಳೆವ ಕಣ್ಣುಗಳಲ್ಲಿ ಮಾಸಲಾಗದ ಕಾಂತಿ
ಮಾತು ಸ್ಫಟಿಕದ ಹರಳು, ಸುವಿಶಾಲ ನೀಲಿಮ,
ಬಿಚ್ಚಿಟ್ಟ ಹಲಸಿನ ಹಣ್ಣು ಮನಸು.

ದಿಟ್ಟತನ, ನೇರನುಡಿ, ಶಿಸ್ತು , ಸಮಯ ಪಾಲನೆ
ಇವೇ ಇವರ ಉಸಿರು ;
ಶ್ರದ್ಧೆ ಪ್ರಾಮಾಣಿಕತೆಗಳೇ ಇವರ ಹೆಸರು.

ಕನ್ನಡಕ್ಕೆಲ್ಲಾದರೂ ಕುಂದು ಬಂದಿತೆಂದರೆ ಸಾಕು
ಉರಿಯ ಕಾರುವ ಕಣ್ಣು , ಗರ್ಜಿಸುವ ಸಿಂಹ ;
ಕನ್ನಡವ ಕಟ್ಟಲು ಕಾಯ ತೇಯ್ದವರಿವರು,
ಎಂದಿಗೂ ಹಿಂದಿನ ಸಾಲನೊಪ್ಪದವರು.

ಲೇಖನಿಯ ಮೊನೆಯಲ್ಲಿ ಕನ್ನಡದ ಮಿಂಚು,
ಕನ್ನಡದ ಕಂಪನ್ನು ನಾಡಿನಾಚೆಗೂ ಬೀರಿ
ಆ ನಾಡ ನದಿಗಳನು ಕನ್ನಡಕೆ ತಂದು –
ಕೂಡಿಸುವ ಕಾಯಕದಿ ಅವಿರತವು ದುಡಿದು –
ಧನ್ಯತೆಯ ಉಸಿರನ್ನು ಬಿಟ್ಟರೇನೋ ?

ನೆನ್ನೆ ಮೊನ್ನೆಯ ತನಕ ಇಲ್ಲಿಯೇ ಇದ್ದವರು,
ನಮ್ಮೊಡನೆ ನಕ್ಕವರು, ಎಲ್ಲರನು ಬೆನ್‌ತಟ್ಟಿದವರು ;
ಹೋಗಿಬಿಟ್ಟರು ದೂರ ಮತ್ತೆ ಬಾರದ ಎಡೆಗೆ
ಬಿಟ್ಟು ಬೆಳಕನು ತಮ್ಮ ದಾರಿಗುಂಟ ;
ಬಿಟ್ಟು ಬೆಳಕನು ನಮ್ಮ ದಾರಿಗುಂಟ.

[redacted] ಬಿ. ಜಿ. ಕನಕೇಶಮೂರ್ತಿ
ಕನ್ನಡ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹಗರಿಬೊಮ್ಮನಹಳ್ಳಿ - ೫೮೩ ೨೧೨

## ಕನ್ನಡಿ ಎದುರು ನಿಂತಾಗ

ಛೇಡಿಸುತ್ತಿವೆ ನನ್ನ, ನನ್ನದೇ ಪಾತಕಗಳು –
ಚಪ್ಪಡಿ ಮುಚ್ಚಿದರೂ..... ಬಿಚ್ಚಿಕೊಳ್ಳುವ ಸುರುಳಿ !
ಕಾಡಿಸುತ್ತಿವೆ ನನ್ನ, ನನ್ನದೇ ಹೆಜ್ಜೆ ಗುರುತುಗಳು;
ಚಿತ್ತವೀಗೀಗ ಸಾವಿರದ ಹುತ್ತ......
ಮತ್ತೆ ಮತ್ತೆ ಸ್ವ ವಿಮರ್ಶೆ ಕೆಣಕುತ್ತಾ
ಆದರ್ಶ ಇಣುಕುತ್ತಾ
ನಿಗೂಢ ಪಾಪದ ಕೊಡ ತುಂಬಿ ತುಳುಕುತ್ತಾ
ಸಿಗಿದು ಹಾಕಿದ ಸೀಳು ಸೀಳಲ್ಲೂ
ನೆಲ ಬಾವಿ ಆಸೆ ಜಲವುಕ್ಕಿ ಪಾಂಗು ಪಾಂಗಿನಲೂ
ಹಳೆರಂಗ ತಳದಿಂದೆದ್ದ ಮೂಲ ಸುಳಿ
ಚಿಗುರಿ ದಾಂಗುಡಿಯಿಟ್ಟು
ಈ ತನುವಿನ ಕೊಂಬೆ ರೆಂಬೆ ಸುತ್ತಿ ಸಿಂಬೆಯಾಗಿ
ಒಮ್ಮೆಗೇ ಹೆಡೆಯಾಗಿ
ಪಂಚಭೂತದ ಪಂಚಮುಖಿ
ಪಂಚಾಯಿತಿಗೆಳೆಯದೆಯೂ ಪಂಚಾಗಿ
ಇಂಚಿಂಚು ಒಳಗೊಳಗೇ ಕುಸಿದೆ



ಋಷಿ ಕಸಿದ ಆತ್ಮ ವಿಮರ್ಶೆ ನಡೆದು
ಹರಿತ ಪ್ರಜ್ಞೆ ಸಲೀಸು ಕತ್ತರಿಸಿತ್ತು
ಅಹಂಕಾರ, ಪ್ರತಿಷ್ಠೆ - ಗರಿಷ್ಠ ಬಿತ್ತು
ಉಳಿದದ್ದು ಶೂನ್ಯ - ಕನಿಷ್ಠ - ಚಿತ್ತು !

ದೊಡ್ಡರಂಗೇಗೌಡ
೯೮/೧, ೩ನೇ ಕ್ರಾಸ್, ಡಾ॥ ಮಾಸ್ತಿ ವೆಂಕಟೇಶಯ್ಯಂಗಾರ್ ರಸ್ತೆ
ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯

# ಒಂದೂರಿನ ಕಥೆಯಲ್ಲ

**ಅರ್ಜುನ ಕೋರಟಕರ**

**ಮು**ಳುಗಡೆಯ ರೋಗದಲ್ಲಿ ಬಳಲುವ ನಮ್ಮೂರು ಸದಾ ನನ್ನ ಕನಸು ಮನಸುಗಳಲ್ಲಿ ಸುತ್ತಾಡುವುದು. ಆಶಾದಾಯಕ ಮನಸ್ಸು ತ್ಯಾಗಕ್ಕಾಗಿ ಸತ್ತುಹೋಗಿದ್ದರೂ ನನ್ನ ಜನ ಇನ್ನೂ ಅಲ್ಲಿ ಬದುಕುತ್ತಿದ್ದಾರೆ. ಬೇರಿನ ತಾಕತ್ತು ಗಾಳಿಯ ಶಕ್ತಿಗೆ ಈಡಾದುದಂತು ಅಲ್ಲವೇ ಅಲ್ಲ. ಆದರೂ ಅದು ಸಾಮರ್ಥ್ಯವನ್ನು ತನ್ನ ಉಸಿರಿರುವವರೆಗೂ ತೋರಿಸಿಯೇ ಹೆಡಕು ಚೆಲ್ಲುವುದು. ಹೀಗಾಗಿ ಬೇರು ಮಣ್ಣಿಗೆ ಉಪಕೃತವೆ.

ಕೃಷ್ಣಾ ದಡದಲ್ಲಿ ವಾಲ್ಮೀಕಿ ಮಹರ್ಷಿಯ ಮಗ ಗಾಲವ ಮಹರ್ಷಿ ತಪಸ್ಸು ಮಾಡಿದ. ಅದೇ ನೆಲದಲ್ಲಿ ನನ್ನ ಬಾಲ್ಯವೂ ಕಳೆದಿದೆ. ನನ್ನ ಬದುಕಿಗೆ ಜೀವ ಬೇರುಕೊಟ್ಟ ಊರು ಅದು ! ಜೀವನೋಪಾಯಕ್ಕಾಗಿ ತೊರೆದು ಎರಡು ದಶಕಗಳಿಗೂ ಹೆಚ್ಚು ಕಾಲವಾಯಿತು.

ಜೀವನವು ಪಟ್ಟಣದ ಬದುಕಿಗೆ ಒಗ್ಗಿಕೊಂಡರೂ ಗ್ರಾಮಜೀವನದ ಹಂಬಲ ಕಡಿಮೆಯಾಗಿಲ್ಲ. ಆಗಾಗ ಬೇಸರೆನಿಸಿದಾಗ ಹೋಗಿಬರುತ್ತಿರುತ್ತೇನೆ.

ಈ ದಿನವಂತು ನನ್ನ ಪ್ರಾತರ್ವಿಧಿಗಳನ್ನೆಲ್ಲ ಬಾಲ್ಯದ ನೆನಪು ಮೆಲುಕು ಹಾಕುವಂತೆ ಅಲ್ಲಿಯೇ ಮುಗಿಸಿ ಸಾಧ್ಯವಾದಷ್ಟು ಬೇಗ ಮತ್ತೆ ಮರಳಿ ಬರಬೇಕೆಂದು ಆಲೋಚಿಸಿ ಮಲಗಿದ್ದು ಎಚ್ಚರಾಗಿದ್ದು ನಸುಕಿನ ಐದು ಗಂಟೆಗೆ.

ಇನ್ನೂ ಗಾಳಿ ಮಲಗಿತ್ತು. ಪ್ರಕೃತಿ ಬಯಲು ನಿಶ್ಚಿಂತವಾಗಿತ್ತು. ನಿಶ್ಶಬ್ದದ ಗಾಢ ಮೌನ ಏಕಾಂತದಲ್ಲಿತ್ತು. ನಗರಸಭೆಯ ಸೇವಕರು ಕಾಯಕ ನಿರತರಾಗಿದ್ದರು. ಒಬ್ಬಳು ಮಾತ್ರ ತನ್ನ ಬದಲಾಗಿ ತನ್ನ ಮಗಳನ್ನು ಬೀದಿ ಕಸ ಗುಡಿಸಲು ಕಳಿಸಿರಬಹುದು. ಇದೀಗ ಬಾಲ್ಯ ದಾಟಿದ ಆ ಯೌವನಿಯು ತೊಟ್ಟ ಪರಕಾರ-ಜಂಪರಿನಲ್ಲಿ ಬಾಲಿಕೆಯಂತೆಯೇ ಕಾಣುವಳು. ಕಸಬರಿಗೆ ಹಿಡಿದು ಕಸಗುಡಿಸುವ ಆಕೆಯನ್ನು ಕಂಡು ಸ್ವಸ್ಥವಾದ ನನ್ನ ಮನಸ್ಸು ಚೇತರಿಸಿತು.

ಅಷ್ಟು ನಸುಕಿನ ಹೊತ್ತಿಗೆ ಆ ಹುಡುಗಿ ಬೀದಿಯ ಕಸ ಗುಡಿಸಲು ಬಂದರೂ ಸ್ನಾನ ಮಾಡಿ ಸ್ವಚ್ಛವಾದ ಬಟ್ಟೆ ತೊಟ್ಟು , ಹೂ-ಮುಡಿದು ತನ್ನ ಕಾಯಕದಲ್ಲಿ ತೊಡಗಿದ್ದು ಕಂಡು ನನಗೆ ತುಂಬ ಅಚ್ಚರಿ ಯಾಯಿತು. ಆ ವೃತ್ತಿನಿಷ್ಠ ವಾಸ್ತವ ಚಿತ್ರ ನನ್ನ ಕಣ್ಮನಗಳಿಗೆ ಪರಿಣಾಮವನ್ನುಂಟುಮಾಡಿತು.

ಮಾಡುವ ಕೆಲಸ ಮುಗಿಸಿ ಸ್ನಾನ ಮಾಡುವುದು ಗೊತ್ತು. ಆದರೆ ಕಾಯಕಕ್ಕೆ ತೊಡಗುವಾಗ ಶುಚಿರ್ಭೂತವಾಗಿಯೇ ತೊಡಗುವುದು ವಿಶೇಷವೆನಿಸಿತು. ಕರ್ತವ್ಯ ನಿಷ್ಠೆಯ ಈ ಸಂಸ್ಕೃತೀಕರಣ ನನ್ನಲ್ಲಿ ಅಚ್ಚರಿ ಹುಟ್ಟಿಸಿತು. ಅವಳ ಸತ್‌ಕ್ರಿಯೆ ನನ್ನ ಸೃಜನಶೀಲ ಮನಸ್ಸನ್ನು ಮಥಿಸತೊಡಗಿತು. ಹಾಗೆಯೇ ಬಸ್ ಸ್ಟ್ಯಾಂಡಿನೊಳಗೆ ಹೋಗಲು, ಇನ್ನೂ ಬಸ್ ಹತ್ತಿರಲಿಲ್ಲ, ಕೆ.ಎಸ್.ಆರ್.ಟಿ.ಸಿ. ಶೌಚಾಲಯದ ಕಡೆಗೆ ಹೋದೆ. ಶೌಚಾಲಯದ ಬಾಗಿಲಿಗೆ ಕೀಲಿ ಜಡಿದಿತ್ತು. ಅಷ್ಟೊತ್ತಿಗೆ ಒಬ್ಬ ತರುಣ ಎಂ-೮೦ ವಾಹನದ ಮೇಲೆ ಬಂದಿಳಿದ, ಕೀಲಿ ಜಡಿದ ಶೌಚಾಲಯದ ಹೊಸ್ತಿಲಿಗೆ ಹಣೆ ಹಚ್ಚಿ ನಮಸ್ಕರಿಸಿದ. ಅದರ ಪಕ್ಕದಲ್ಲಿ ಬೆಳೆದ ಬೇವಿನ ಮರದ ಬೊಡ್ಡೆಗೆ ಬಡಿದ ಮೊಳೆಗೆ ನೇತಾಡುತ್ತಿದ್ದ ಬಾಡಿದ ಹೂವಿನ ಹಾರ ತೆಗೆದೊಗೆದು, ಅದೇ ಶೌಚಾಲಯದ ಹೌದದಲ್ಲಿಯ ಎರಡು ಬೊಗಸೆ ನೀರು ಸಿಂಪಡಿಸಿ ಆ ಭಾಗ ತೊಳೆದು, ತಾನು ತಂದಿರುವ ಹೂವಿನ ಹಾರವನ್ನು ಎರಡೂ ಮೊಳೆಗೆ ಸಿಕ್ಕಿಸಿದ. ಕೊಂಬೆಯ ನಡುವೆ ತುರುಕಿ ಇಟ್ಟಿದ್ದ ಕಾಗದ ಚೀಟಿಯಿಂದ ಕುಂಕುಮ ತೆಗೆದು ತಿಲಕಿಸಿದ. ಎರಡು ಊದಿನಕಡ್ಡಿಗಳಿಗೆ ಬೆಂಕಿಯಿಟ್ಟು ಬೆಳಗಿ ನಮಸ್ಕರಿಸಿದ. ಶೌಚಾಲಯದ ಬಾಗಿಲಿಗೆ ಬೆಳಗಿದ. ಶೌಚಾಲಯಕ್ಕೆ ಹೋಗಲು ನಾನೆಷ್ಟು ಅವಸರಿಸಿದರೂ ಆತನ ವ್ಯವಧಾನ ಧ್ಯಾನಸ್ಥವಾಗಿತ್ತು.

ತನ್ನ ಪ್ರಾರ್ಥವಿಧಿ ಮುಗಿಸಿದ.

ಬಾಗಿಲು ತೆರೆದು ಡಬ್ಬಿಗೆ ನೀರು ಸುರುವಿದ.

ಆನಂತರ ಅವನಿಗೆ ಎರಡು ರೂಪಾಯಿ ಕೊಡಲು ಹೋದರೆ,

'ಬೇಡ ಸಾರ್' ಅಂದ.

ನನಗೆ ತೀರ ಆಶ್ಚರ್ಯವೆನಿಸಿತು !

'ಯಾಕೋಪಾ ?' ಎಂದೆ.

'ಮೊದಲನೇ ಗಿರಾಕಿ ಸಾರ್ ತಾವು' ಅಂದ.

ಆತನ ಭಾವ ತುಂಬ ಸ್ತಿಮಿತವಾಗಿತ್ತು.

ಅವನ ಸಹಜವಾದ ಮಾತಿಗೆ ಯಾವ ಚಿಹ್ನೆಯ ಅಗತ್ಯವೇ ಇರಲಿಲ್ಲ.

ಈ ಕೃತಜ್ಞತಾ ಭಾವನೆಯ ಕುರಿತು ಹೆಚ್ಚು ಮಾತನಾಡಲು ನನಗೆ ಸಮಯವಿರಲಿಲ್ಲ. ಬಸ್ಸು ನಿಂತಿದ್ದು ಕಂಡು ಓಡಿದೆ. ಪ್ರಾತರ್ವಿಧಿ ಹತ್ತಿಕ್ಕಿಕೊಳ್ಳುವುದು ಕಠಿಣವೆನಿಸಿದಾಗ ಊರಿಗೆ ಹೋಗಿಯೇ ಮುಗಿಸಬೇಕೆಂಬ ಭಾವನೆ ಹುಸಿಯಾಗಿತ್ತು. ಆ ಇಬ್ಬರ ಶೂದ್ರ ಸೇವೆ ನನ್ನ ಕಣ್ ಮನಗಳಿಂದ ಕರಗಿರಲಿಲ್ಲ.

ಈ ನನ್ನೂರು ಆಗಿನಗಿಂತಲೂ ಈಗ ತುಂಬ ಬದಲಾಗಿದೆ. ಆಗಿನ ಗ್ರಾಮ ಪಂಚಾಯತ ಕಟ್ಟಡದ ಗಿಲಾಯಿ ಒಡೆದು ಹಳತಾಗಿದೆ. ಗೌಡರ ವಾಡೆಯು ಅಂದು ಅಚ್ಚ ಹೊಸದು ಕಾಣುತ್ತಿತ್ತು. ಮಠದ ಬಣ್ಣ ಕಳೆಗುಂದಿದೆ. ಔರಂಗಜೇಬನ ಆನೆಯ ಗೋರಿ ಮಾತ್ರ ಅಂದಿನ ಕಳೆ ಕಳೆದುಕೊಂಡಂತೆ ಕಾಣುವುದಿಲ್ಲ. ಕಲ್ಲಿನಲ್ಲಿಯ ಕಲೆ ಕಣ್ ದೃಷ್ಟಿಯನ್ನು ಸೂಕ್ಷ್ಮಗೊಳಿಸುತ್ತಿದೆ. ಆದರೆ ಅಂದಿನಂತೆ ತೀರ ಸಮೀಪ ಹೋಗಿ ನೋಡಲು ಮಾತ್ರ ಸಾಧ್ಯವಿಲ್ಲ. ಅದರ ಸುತ್ತಮುತ್ತಲೂ ತಿಪ್ಪೆ ಗುಂಡಿಗಳು ಹುಟ್ಟಿಕೊಂಡು ಕೊಳಚೆಗಟ್ಟಿದೆ. ಈ ಆನೆ ಕಟ್ಟೆ ಇದ್ದ ಸ್ಥಿತಿಯಲ್ಲಿಯೇ ಉಳಿದುಕೊಳ್ಳಲು ಇದುವೂ ಕೂಡ ಕಾರಣವಾಗಿರಬಹುದು. ಹೊಳೆ ದಂಡೆಯ 'ಕರಿ ಕಲ್ಲು' ಜನರ ತುಳಿದಾಟಕ್ಕೆ ಸವೆದು ಡಾಂಬರ ರಸ್ತೆಯೇ ಆಗಿ ಮಾರ್ಪಟ್ಟಿದೆ. ದಿಡಗಿನ ಪಡಿಯ ಕೃಷ್ಣೆಯ ಭೋರ್ಗರೆತ ತಿಳಿಯಲು ಮಾತ್ರ ಒಂದು ನಿಶ್ಶಬ್ದ ರಾತ್ರಿಯನ್ನೇ ಕಳೆಯಬೇಕು ! ಒಟ್ಟಿನಲ್ಲಿ ಅಂದಿನ ಊರು ಇಂದಿನ ಮುಪ್ಪಡರಿದ ಮನುಷ್ಯ ಪ್ರಾಣಿಯಂತಾಗಿದೆ. ಅಂದಿನ ಗಡಚಾದ ಕರಿ ಜಾಲಿ 'ಕತ್ತೆ ಪಡ'ವಂತೂ ಕೂದಲು ಕಿತ್ತ ಮುಪ್ಪಿನವನ ಬೋಳು ತಲೆಯಂತಾಗಿದೆ. ಒಟ್ಟು ಪರಿವರ್ತನೆಯೆನ್ನುವುದು ಹಾಂಸಲು ಗಟ್ಟಿದೆ. ಇದಕ್ಕೆ ಹಾಳೂರೆಂಬ ಬಿರುದು ಪ್ರಾಪ್ತವಾಗಿದ್ದು ಸಂತ್ರಸ್ತರ ನಾಲಿಗೆಯಿಂದಲೇ.

ಹಾಗೆ ನೋಡಿದರೆ ಪರಿಹಾರ ಧನ ಪಡೆಯುವಂತಹ ಆಸ್ತಿ ಪಾಸ್ತಿ ನನ್ನದೇನೂ ಇರಲಿಲ್ಲ. ಆದರೂ ಜನಜೀವನದ ಕಳಕಳಿ, ಸಾಂಸ್ಕೃತಿಕ ಸಂಬಂಧ, ಸಾವಿರಾರು ವರ್ಷಗಳ ಐತಿಹ್ಯ ಇತ್ಯಾದಿ ಚಿಂತನೆಗಳು ನನ್ನನ್ನು ಕಾಡುತ್ತಿವೆ. ಅವ್ವನ, ಅಜ್ಜಮುತ್ತಜ್ಜನ ತಲತಲಾಂತರದಿಂದಲೂ ಬಂದಿರುವ ಭಾವನಾತ್ಮಕ ಬಾಂಧವ್ಯ, ಬಾಲ್ಯದ ಸ್ನೇಹ ಸಾಂಕುಲ್ಯ ನನ್ನಂಥವರನ್ನು ಸೆಳೆಯುತ್ತಿದೆ.

ಚಡಪಡಿಸುವ ಜೀವನ ತಣ್ಣಗಾಗುವವರೆಗೆ ನಿಂತು, ತಿರುಗಾಡಿ, ಕಾಣದ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು, ಭೆಟ್ಟಿಯಾಗುವವರಿಗೆಲ್ಲ ಭೆಟ್ಟಿಯಾಗಿ, ದಿನಗಟ್ಟಲೆ ಕೃಷ್ಣೆಯ ಮಹಾಪೂರ ವೀಕ್ಷಿಸುತ್ತಿದ್ದ ದಿನಗಳನ್ನು ಮೆಲಕುಹಾಕಿ ಮುಳುಗಲಿರುವ ಐತಿಹ್ಯಗಳನ್ನೆಲ್ಲ ಕಂಡು ಕಂಬನಿ ಮಿಡಿದು ಮರಳಿ ಬಸ್ಸು ಕಾಯುತ್ತಿದ್ದೆ.

ತೀರ ಉರಿಬಿಸಿಲಿನ ದಿನ, ಧಗೆ ಧಗೆಯೇ ಧಗಧಗೆ. ಯಾವನೋ ಪುಣ್ಯಾತ್ಮನ ಔದಾರ್ಯದಿಂದ ಆಲದ ಮರದ ಸುತ್ತಮುತ್ತಲೂ ಕಟ್ಟಿಸಲಾದ ಚಚ್ಚೌಕಾದ ಕಟ್ಟೆಯೇ ಈ ಊರ ಅನಧಿಕೃತ ಬಸ್ ನಿಲ್ದಾಣ.

ಅಂದು ಈ ಊರಿನಿಂದ ಹೊರಡುವಾಗ ಈ ಗಿಡ ಇನ್ನೂ ಶಿಶುವಾಗಿತ್ತು . ಮೈಲಿಗಲ್ಲು ಕೂಲಿಯವನಿಂದ ನೀರು ಕುಡಿಯುತ್ತಿತ್ತು. ಅಂದಿನ ಅವನ ಶುಶ್ರೂಷೆಯೇ ಈ ಗಿಡದ ತಾಯಿ ಬೇರು. ದನ ಕರುಗಳು ಕಚ್ಚದಂತೆ ಸುತ್ತಲೂ ಮುಳ್ಳುಕಂಟಿಯನ್ನಿಟ್ಟು ಕಾಪಾಡಿಕೊಂಡು ಬಂದ ಅವನ ಚಿತ್ರ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ !

ಈ ಕಟ್ಟೆಯ ಒಂದು ಭಾಗದಲ್ಲಿ ನೆರೆದ ಜನರ ಗುಂಪು ನನ್ನನ್ನು ಕುತೂಹಲಗೊಳಿಸಿತು. ಅತ್ತ ಧಾವಿಸಿ ಮುಖ ತೂರಿಸಲು ಒಂದಿಷ್ಟು ಮುಜುಗರ ಅನಿಸಿದರೂ ನನ್ನನ್ನು ತನ್ನತ್ತ ಸೆಳೆದುಕೊಂಡಿತ್ತು. ನನ್ನ ಪ್ರಯಾಣದ ಘನತೆ-ಗಂಭೀರತೆ ಮೂರ್ಛೆಹೋಗಿತ್ತೇನೋ. ಹಲವಾರು ಜನರಿಗೆ ಈ ಗಿಡ ನೆರಳಿನಾಶ್ರಯ ನೀಡಿತ್ತು. ಅತ್ಯಂತ ಅಂದ ಹಾಗೂ ಆಕರ್ಷಕವಾಗಿತ್ತು. ನೋಡಲು ಎರಡು ಕಣ್ಣುಗಳು ಸಾಲದಂತಿತ್ತು.

ಜೇನು ಹುಟ್ಟಿನಂತೆ ಗಡಚಾಗಿತ್ತು. ಮೆಣಸಿನಕಾಯಿ ಬಿಸಿಲಿನಲ್ಲಿ ಇಂಥ ಅಂದ ಕಂಡ ನೆನಪು ನನ್ನದಾಗಿತ್ತು. ಈಗ ಇಂಥ ದೃಶ್ಯ ಪ್ರಕೃತಿಯ ವೈಚಿತ್ರ್ಯವೇ ಅನ್ನಬೇಕು ! ಇದನ್ನೆಲ್ಲ ಕಂಡ ಬಿಸಿಲು ಹೊಟ್ಟೆಕಿಚ್ಚುಪಡುತ್ತಿತ್ತು.

ಕಪ್ಪು ಮೈ ಬಣ್ಣದ ಆ ಧಾಂಡಿಗ ಬರಿ ಮೈಯಲ್ಲಿ ನಿಂತುಕೊಂಡಿದ್ದ. ಎತ್ತರವಾದ ಮೈಕಟ್ಟಿನ ನಿಲುವು ಅವನ ದೇಹಕ್ಕೆ 'ಇನ್ನೂ ಮೆರಗು' ಎಂದು ಸೌಂದರ್ಯ ಪ್ರಿಯರು ಕಂಡರೆ ಸಾಕ್ಷಿ ಹೇಳುವಂತಿತ್ತು. ಮೈತುಂಬ, ತಲೆತುಂಬ, ಅರೆಮುಖದ ತುಂಬವೂ ಕಪ್ಪು ಕೂದಲು ಸ್ನಾಯು ತುಂಬಿದ ಮಾಂಸಲ ಶರೀರಕ್ಕೆ ಕವಚದಂತಾಗಿತ್ತು.

ಆತ ಮೂವತ್ತು ಮೂವತ್ತೊಂದರ ತರುಣನಾಗಿರಬೇಕು; ಗೃಹಸ್ಥನಾಗಿದ್ದರೆ ಒಗೆದಾಡಿ ಸಂಸಾರ ಮಾಡುವ ವಯಸ್ಸು. ರಾಷ್ಟ್ರ ರಕ್ಷಣೆಗೆ ಭಾರತದ ಗಡಿಯಲ್ಲಿ ಇಂಥವರು ಇರಬೇಕು ಅಂದುಕೊಂಡೆ. ದಾರ್ಢ್ಯದ ಸದ್ವಿನಿಯೋಗವಾಗುವ ಹಾಗೆ ದೇಹವನ್ನು ವೃತ್ತಿಯಲ್ಲಿ ತೊಡಗಿಸಿಕೊಂಡು ಬದುಕಬೇಕು ತಾನೆ ? ಸಾಯನ್ಸ್ ಓದಿದ ನಿರುದ್ಯೋಗಿ ಪದವೀಧರ ಹೊಟ್ಟೆಯ ಪಾಡಿಗೆ ವರ್ಣಾಶ್ರಮದ ನಿಯಮದಂತೆ ಪೂಜೆಯ ಪೌರೋಹಿತ್ಯ ಅನುಸರಿಸಿದಂತಿತ್ತು. ಸೀತೆಯ ಸಲುವಾಗಿ ಲಂಕೆಗೆ ಹಾರಿದ ಹನುಮನ ನೆನಪು ತರುವಂಥ ಹನುಮಾನ ಚೆಡ್ಡಿಯಂತಹ ಕೆಂಪು ಲಾಂಗ್ ಹಾಕಿದ್ದು ಆ ಚಡ್ಡಿಯೇ ಅವನ ಗುಪ್ತಾಂಗದ ಬಹುಭಾಗದ ಮಾನ ಮುಚ್ಚಿದ್ದು.

ಅದನ್ನಿಷ್ಟು ಬಿಟ್ಟರೆ ಆತ ಬರಿ ಮೈ ಶೂರ. ನೋಡುವವರ ದೃಷ್ಟಿಗೆ ಆ ದೃಶ್ಯ ಅಸಹ್ಯವಾಗಿತ್ತು. ಇದನ್ನು ಅರಿಗೇಡಿತನ ಅನ್ನಲಾಗದು ! ಆತನ ಮಾನಸಿಕ ದುರುದ್ದೇಶವೇ ಆಗಿರಬೇಕು ಅಂದುಕೊಂಡೆ.

ಮನುಷ್ಯನ ಮನೋಗುಣ ಪರಿವರ್ತನಾಶೀಲವಾದರೂ ಮಾನಸಿಕ ವ್ಯಭಿಚಾರದ ದುರ್ಗುಣ ಮಾತ್ರ ಎಂದೂ ಪರಿವರ್ತನ ಆಗಲಾರದ್ದು.

ಉದ್ದವಾದ ಕಪ್ಪು ಗಡ್ಡ, ತಲೆಗೂದಲೆಲ್ಲ ತಿರುವಿ ಹುರಿ ಹಾಕಿ ಒಟ್ಟುಗೂಡಿಸಿ ಕಟ್ಟಿದ ತುರುಬ ನೋಡಿದರೆ ಅವನೊಬ್ಬ ಸಾಧುವೇ ಅನ್ನಬೇಕು. ಮಕ್ಕಳು ಬರೆಯುವ ಪಾಟಿಯೊಂದನ್ನು ದಾರ ಕಟ್ಟಿ ಕೊರಳಿಗೆ ತೂಗುಬಿಟ್ಟುಕೊಂಡಿದ್ದ.

ಆತನ ಸುತ್ತ ನೆರೆದವರು ಕೇಳುವ ಪ್ರಶ್ನೆಗಳಿಗೆ ಆ ಪಾಟಿಯಲ್ಲಿ ಬರೆದು ಬರೆದು ಉತ್ತರಿಸುತ್ತಿದ್ದ. ಪ್ರಶ್ನೆ ಕೇಳಿದವರು ಉತ್ತರ ಓದಿದ ನಂತರ ಮತ್ತು ಕೇಳಿದವರು ಅಕ್ಷರ ಕಲಿಯದವರಾಗಿದ್ದರೆ ಬೇರೆಯವರು ಕುತೂಹಲ ಕಾತರದಿಂದ ಓದಿ ಹೇಳಿದ ನಂತರ ಬರೆದುದನ್ನು ಒರೆಸಿ ಮತ್ತೊಬ್ಬರ ಪ್ರಶ್ನೆಗೆ ಉತ್ತರ ಬರೆಯುವುದು ಕಂಡರೆ ಆತ ಮಾತು ಆಡದ ಸಾಧು ಎಂದು ತಿಳಿಯಿತು. ಉತ್ತರ ಪಡೆದವರು ಬಲ ಬಗಲಿಗೆ ನೇತಾಡುವ 'ಸಾಧು'ನ ಚೀಲದಲ್ಲಿ ಆತ ಕೇಳದೆಯೂ ದುಡ್ಡು ಹಾಕಿ ನಮಸ್ಕರಿಸುತ್ತಿದ್ದರು. ನಾ ಮುಂದೆ ನೀ ಮುಂದು ಎಂದು ಪ್ರಶ್ನೋತ್ತರಕ್ಕೆ ಜನರ ನೂಕು ನುಗ್ಗಲು ! ಅವನನ್ನು ನೋಡುವ ಕುತೂಹಲ ತೀರದ ಮುನ್ನವೇ ಬಸ್ಸು ಬಂದಿತು.

ಹತ್ತಿ ಊರಿಗೆ ಬಂದೆ.

ಬರುವುದಿಷ್ಟೆ ತಡ ವೃತ್ತಿಗಂಟಿದೆ.

ಲಾಡ್ಜ್ ಕೌಂಟರ್‌ದಲ್ಲಿ ಕೂತು ರಿಜಿಸ್ಟರ್ ಬುಕ್ಕಿನಲ್ಲಿ ಬರುವ ಗ್ರಾಹಕರ ಹೆಸರು ನೋಂದಾಯಿಸಲು ಅಣಿಯಾದೆ.

ಇಂದು ಮಧ್ಯಾಹ್ನದ ಉರಿಬಿಸಿಲಿನಲ್ಲಿ ನಮ್ಮೂರ ಬಸ್ ನಿಲ್ದಾಣದಲ್ಲಿ ಕಂಡ ಶಿವಪಾತ್ರಧಾರಿ ಆ ಬರಿಮೈ ಸಾಧು ನಮ್ಮ ಲಾಡ್ಜ್‌ಗೇ ಬಂದುಬಿಟ್ಟ !

ಕುತೂಹಲವು ಜೀವನದಲ್ಲಿ (ನೆನಪಿಲ್ಲದಾಗ) ಒಮ್ಮೆ ಮಾತ್ರ ಒಬ್ಬ ಮನುಷ್ಯನನ್ನು ಅಚ್ಚರಿಗೊಳಿಸಬಲ್ಲದು.

ಅವನ ಹಿಂದೆ ನಾಲ್ಕಾರು ಭಕ್ತರೋ ಶಿಷ್ಯರೋ ಬೆನ್ನಟ್ಟಿ ಬಂದಿದ್ದರು. ಸಿಂಗಲ್ ರೂಮ್ ಬುಕ್ ಮಾಡಿಸಿ, ರೂಮ್ ಬಾಯ್ ಜತೆಗೆ ತಾವೂ ಹೋಗಿ ಅವನನ್ನು ರೂಮಿಗೆ ಕಳಿಸಿದರು.

ಅವರೊಳಗೊಬ್ಬ ಬಂದು ನನ್ನನ್ನು ಕೇಳಿದ : 'ಮಾಲಿಕ್ರೆ, ನಮಗೊಂದು ಖಾಲಿ ಬ್ಯಾರಲ್ ಬೇಕ್ರೀ' ಎಂದು. ಎಲ್ಲಿಯಾದರೂ ಇರಬಹುದೇನೋ ಅಂದುಕೊಂಡು ನಿಂತಲ್ಲೇ ಇಡೀ ಬಿಲ್ಡಿಂಗ್‌ದಲ್ಲೆಲ್ಲ ಚಿತ್ತ ಹರಿಸಿದೆ. ಎಲ್ಲಿಯೂ ಕಾಣಲಿಲ್ಲ.

'ಬ್ಯಾರಲ್ ಇಲ್ಲಾರೀ ಸಾರ್' ಅಂದೆ.

ಅಂದರೂ ಕಿತಾಪತಿ ಮನಸ್ಸು ಸುಮ್ಮನಿರಲಿಲ್ಲ.

'ಅದ್ಯಾಕ್ ಬೇಕಾಗಿತ್ತು ?' ಎಂದು ಪ್ರಶ್ನಿಸಿದೆ.

'ಈ ಸಾಧುಗಳು ನೆಲಕ್ಕ ಕುಂಡಿ ಊರಿ ಕೂಡುದಿಲ್ಲರೀ !



ನೆಲಕ್ಕ ಮೈ ಹಚ್ಚಿ ಮಲಗುದಿಲ್ಲರೀ ! ಊಟಾ ನಿದ್ದಿ ಕೂಡ ನಿಂತಕೊಂಡೇ ಮಾಡ್ತಾರೀ.. ಅದಕ್ಕ ನಿಂತ ನಿದ್ದಿ ಮಾಡ್ಲಿಕ್ಕ ಆಧಾರ ಸಲುವಾಗಿ ಒಂದ್ ಬ್ಯಾರಲ್ ಬೇಕಾಗಿತ್ತರಿ' ಅಂದ.

ಆತನ ಈ ವಿಚಿತ್ರ ವ್ರತ ಆಶ್ಚರ್ಯವೆನಿಸಿತು. ಆತ ಮತ್ತೆ ಮುಂದುವರೆದು, 'ಈ ಮೌನ ವ್ರತಸ್ಥರು ಮಾತಾಡುದೇ ಇಲ್ಲರೀ. ಕೇಳಿದವರ ಪ್ರಶ್ನೆಗೆ ಪಾಟಿಯಲ್ಲಿ ಬರೆದು ಉತ್ತರ ಕೊಡ್ತಾರೀ. ಅವರಾಡಿದ ಮಾತು ಹುಸಿ ಹೋಗುವುದಿಲ್ಲರೀ ಹಸಿ ಗ್ವಾಡ್ಯಾಗ ಹರ್ಳ ಒಗೆಧಂಗ ಭಾಳ ಖರೆ ಬರ್ತಾವರೀ. ಮಂದಿಗೆ ಭಾಳ ಪಟಾಶ್ಯೆತಿ ನೋಡ್ರಿ' ಅಂದ. 'ಒಂದಕ್ಕೆ ಎರಡಕ್ಕೆ ಬಂದ್ರೆ ಹೆಂಗ್ ಮಾಡ್ತಾರು ?' ಎಂದು ಕೇಳಿದೆ.

'ಅದೂ ಕೂಡ ನಿಂತಗೊಂಡೆ ಸಾರ್ !' ಎಂದ.

ಆತನ ಮಾತು ನನಗೆ ಅಸಾಧ್ಯವೆನಿಸಿತು.

ಆ 'ಸಾಧು'ನ ತುಂಬಿದ ತೊಡೆ, ಕಣಕಾಲು ನೋಡಿದರೆ ಎಲ್ಲಿಯೋ ಕಂಡ ಬೆತ್ತಲೆಯ ಶಿಲಾಮೂರ್ತಿ ಕಣ್ಣೆದುರಿಗೆ ನಿಂತ ನೆನಪು ತರುವಂತಿತ್ತು. ಒಬ್ಬ ಶಿಷ್ಯ ಹೋಗಿ ಹೊರಗಿನಿಂದ ಒಂದು ಬ್ಯಾರಲ್ ತಂದಿಟ್ಟ. ಆ ಸಾಧುವಿಗೆ ಅಗತ್ಯದ ವ್ಯವಸ್ಥೆಯನ್ನೆಲ್ಲ ಮಾಡಿದ ನಂತರ ವಿಶ್ರಮಿಸಲು ಬಿಟ್ಟು ಎಲ್ಲರೂ ಹೋದರು. ಆ ಸಾಧುನ ಬಗ್ಗೆ ಹುಟ್ಟಿದ ಕುತೂಹಲ ನನ್ನನ್ನು ನಿದ್ದೆಗೆಡಿಸಿತು. ನನ್ನ ಬುದ್ಧಿ ಮನಸ್ಸು ಸುಮ್ಮನಿರಲಿಲ್ಲ. ಅದೇನೋ ಚಿಕಿತ್ಸಾ ಮನೋಭಾವನೆ ನನ್ನಲ್ಲಿ ಪ್ರಾದುರ್ಭವಿಸಿತು. ನಮ್ಮ ಲಾಡ್ಜ್ ಎಲ್ಲ ರೂಮ್‌ಗಳು ಕಟ್ಟಿಗೆಯ ಫಳಿಯಿಂದ ಪಾರ್ಟಿಶನ್ ಮಾಡಿದ್ದಾಗಿದ್ದುವು. ಟೇಬಲ್ ಮೇಲೆ ನಿಂತು ಹಣಿಕಿ ಹಾಕಿದರೆ ಆ ಸಾಧುವನ್ನು ಚೆನ್ನಾಗಿ ನೋಡಬಹುದಾಗಿತ್ತು. ಏಳೆಂಟು ಫೂಟು ಎತ್ತರದ ಪಾರ್ಟಿಶನ್ ಅದಾಗಿತ್ತು.

ನನ್ನದೂ ಹುಡುಗ ಬುದ್ಧಿ. ನೋಡುವ ಕ್ರಿಯೆ ನನ್ನಿಂದ ನಡೆದುಬಿಟ್ಟಿತು.

ರೀತಿಬಾಹಿರ ಇಣುಕಾಟ ನನ್ನಿಂದ ನಡೆದಾಗ ರಾತ್ರಿ ಒಂದೂವರೆ ಗಂಟೆಯಾಗಿತ್ತು. ಗಡಿಯಾರದ ಢಣ್ ಎಂಬ ಗಂಟೆ ಸದ್ದು ಕೇಳಿ ನನ್ನ ಎದೆ ಧಸಕ್ ಎಂದಿತು, ಹೃದಯ ಬಡಿತ ತಟ್ಟನೆ ಇಮ್ಮಡಿಸಿತು.

ನನ್ನೊಳಗೆ ಭಯದ ಪ್ರೇತ ಹೊಕ್ಕಿತ್ತು. ಗಡಿಯಾರ ಟಿಕ್ ಟಿಕ್ ಶಬ್ದ ಅಣುಕಿಸಿ ನಕ್ಕಿತ್ತು. ಆದರೆ ನಾನು ಕಂಡಿದ್ದು ಮಾತ್ರ ಆಶ್ಚರ್ಯ ಹುಟ್ಟಿಸಿತ್ತು. ಆ ಸಾಧು ಮಂಚದ ಮೇಲೆ ಮಲಗಿ ನಿಶ್ಚಿಂತನಾಗಿ ಗೊರಕೆ ಹೊಡೆಯುತ್ತ ನಿದ್ರಿಸುತ್ತಿದ್ದ ! ರೂಮಿನ ಒಂದು ಮೂಲೆಯಲ್ಲಿ ಬ್ಯಾರಲ್ ಇತ್ತು. ಅದರ ಮೇಲೆ ಸಾಧು ಸುತ್ತಿಕೊಂಡ ಕೆಂಪು ಲಾಂಗ್ ಹಾವಿನಂತೆ ಸುರುಳಿಯಾಗಿ ಬಿದ್ದಿತ್ತು. ಏಕಾಂತದ ಮನುಷ್ಯನ ಸುಖ ಅವನದಾಗಿತ್ತು. ಇದಕ್ಕೆ ರಾತ್ರಿ ಒಂದೂವರೆ ಗಂಟೆ ಸಮಯದ ಕಾಲ ಒಂದೇ ಸಾಕ್ಷಿಯಾಗಿತ್ತು.

ಅರ್ಜುನ ಕೋರಟಕರ
ಸುವರ್ಣ ಚಿತ್ರಮಂದಿರ ರೋಡ್
ಜಮಖಂಡಿ - ೫೮೭೩೦೧

# ಮುನ್ನ ಮಾಡಿದ ಪಾಪ ಯಾರ ತಾತನ ಗಂಟು

ಎಚ್ ಎಮ್ ಟಿ
ಬಹುಮಾನಿತ ಲೇಖನ




ಇತ್ತೀಚೆಗೆ ಟಿವಿಯಲ್ಲಿ ಕನ್ನಡ ಹಾಡುಗಳು ಬಿತ್ತರಗೊಳ್ಳುವಾಗ ಅಥವಾ ಸುದ್ದಿ ಬಿತ್ತರಗೊಳ್ಳುವಾಗ - ಒಂದೆರಡು ಸಂಗತಿಗಳು ನನ್ನ ಮನಸ್ಸನ್ನು - ಹಲವರ ಮನಸ್ಸುಗಳನ್ನು ಕಲಕುತ್ತವೆ. ಒಂದು ಹಿಂದೆಂದೋ ನಡೆದ ರಾಜ್‌ಕುಮಾರ್ ಅಪಹರಣ. ವೀರಪ್ಪನ್ ಈ ಅಪಹರಣ ಮಾಡಿದ್ದ ಎಂದು ಸರಳವಾಗಿ ಹೇಳುವುದಿಲ್ಲ. ವೀರಪ್ಪನ್ ಹೆಸರಿನ ಹಿಂದೆ ನರಹಂತಕ, ಕಾಡುಗಳ್ಳ, ಶ್ರೀಗಂಧದ ಚೋರ, ದಂತಚೋರ ಎಂಬ ಬಿರುದು ಬಾವಲಿಗಳನ್ನು ಅಂಟಿಸಿಯೇ ಹೇಳುತ್ತಾರೆ. ಇಂಥ ಸಂಬೋಧನೆ ಇಲ್ಲದೆ ವೀರಪ್ಪನ್ ವಿಷಯ ಬಿತ್ತರಗೊಂಡುದೇ ಇಲ್ಲ. ಈ ಎಲ್ಲಾ ಸಂಬೋಧನೆಗಳು ಅವನು ಪಾತಕಿ, ಘೋರಪಾತಕಿ ಎಂಬುದನ್ನು ಸಾರಿ ಸಾರಿ ಹೇಳುತ್ತವೆ. ಇಂಥ ಘೋರ ಪಾತಕಿಯ ಕೈಯಲ್ಲಿ ರಾಜ್‌ಕುಮಾರ್ ಅಂಥ ಒಬ್ಬ ಸುಸಂಸ್ಕೃತ ಮೇರು ನಟ, ಸಭ್ಯ ವ್ಯಕ್ತಿ, ಸಂಸಾರ ಪ್ರೇಮಿ, ದೈವ ಭೀರು, ನಟ ಸಾರ್ವಭೌಮ ಅಪಹರಣವಾಗಿ ಕಾಡಿನಲ್ಲಿ ಬಂಧಿಯಾಗಿದ್ದುದು ವ್ಯಥೆಯನ್ನು ಹುಟ್ಟಿಸುತ್ತದೆ. ದುಷ್ಟಶಕ್ತಿಯ ನಖಗಳಲ್ಲಿ ಶಿಷ್ಟಶಕ್ತಿ ಸಿಕ್ಕಿ ಪರಿತಪಿಸುತ್ತಿದ್ದುದನ್ನು ನೆನೆದಂತೆಲ್ಲಾ ಮನಸ್ಸಿನಲ್ಲಿ ತಳಮಳವಾಗುತ್ತದೆ. ಎರಡನೆಯದು, ಇಂಥ ಅಪಹರಣದ ಸುದ್ದಿ ದಿನನಿತ್ಯದ ಮಾತಾಗಿದ್ದಾಗ ರಾಜ್‌ಕುಮಾರ್ ಅಭಿನಯಿಸಿದ ಚಿತ್ರಗಳ ಕೆಲವು ಹಾಡುಗಳನ್ನು ಕೇಳುವ ಸೌಭಾಗ್ಯ ದೊರಕಿದರೆ ಒಂದು ರೀತಿಯಲ್ಲಿ ವಿಷಾದದ ಭಾವನೆಯುಂಟಾಗುತ್ತಿತ್ತು. ಸುಧಾರಾಣಿಯವರ ಜೊತೆಯಲ್ಲಿ ಹಾಡುವ ಒಂದು ಹಾಡಿನ ಸಾಲು ''ಮುನ್ನಾ ಮಾಡಿದ ಪಾಪ ಯಾರ ತಾತನ ಗಂಟು.... ರಾಘವೇಂದ್ರಾ'' ಎಂಬುದು ಇಂಥ ವಿಷಾದವನ್ನು ಸೃಷ್ಟಿಸುತ್ತಲೇ ಪಾಪವನ್ನು ಕುರಿತು ಯೋಚನೆಗೀಡುಮಾಡುವಂತಾಗುತ್ತಿತ್ತು.



ಟಿ. ಆರ್. ರಾಧಾಕೃಷ್ಣ

ಸಂವೇದನೆಯಿಂದ ಕೂಡಿದ ಪ್ರತಿಯೊಬ್ಬ ಮನುಷ್ಯನೂ ಒಂಟಿಯಾಗಿದ್ದಾಗ, ಒಮ್ಮೆಯಾದರೂ ನಾನೇಕೆ ಬಂಧಿಯಾಗಿದ್ದೇನೆ, ನಾನೇಕೆ ದುಃಖಿಯಾಗಿದ್ದೇನೆ ಎಂದು ಚಿಂತಿಸುತ್ತಾನೆಂದು ತೋರುತ್ತದೆ. ಅಂತಹ ಸಂದರ್ಭದಲ್ಲಿ ಅವನು ಈ 'ಪಾಪ'ದ ಬಗ್ಗೆ ಯೋಚಿಸಿಯೇ ಇರುತ್ತಾನೆ. ಇದು ರಾಜ್‌ಕುಮಾರ್ ಹಾಡಿದ ಸಾಲಾದರೂ ನಾವು ನೀವು ಮೆಲುಕು ಹಾಕುವಂಥ ಸಾಲೇ ಆಗಿದೆ.

ಏನಿದು ಪಾಪ ? ಪಾತಕ ? ಅಪರಾಧ? ಸ್ಥೂಲವಾಗಿ ನೋಡಿದರೆ ಒಂದೇ ಎಂಬಂತೆ ಕಾಣುವ ಈ ಶಬ್ದಗಳು, ಸೂಕ್ಷ್ಮವಾಗಿ ಗಮನಿಸಿದರೆ ಕೊಂಚ ಬೇರೆ ಬೇರೆ ಅರ್ಥ ಚೆಲ್ಲುವಂತೆ ಕಾಣುತ್ತದೆ. ಪಾತಕ, ಅಪರಾಧ ಎಂಬ ಶಬ್ದಗಳನ್ನು ಬಳಸಿದಾಗ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜ್ಯ ಅಂದರೆ ಸರ್ಕಾರ ವಿಧಿಸಿದ ಕಟ್ಟುಪಾಡುಗಳ ಉಲ್ಲಂಘನೆಯಾಗಿದೆ ಎಂಬರ್ಥ ಇರುತ್ತದೆ. ಹೀಗೆ ಪ್ರಾತಿನಿಧಿಕ ಸರ್ಕಾರ ವಿಧಿಸಿದ ನಿಷೇಧಗಳನ್ನು ಉಲ್ಲಂಘಿಸಿದರೆ ಅಂಥ ಅಪರಾಧ, ಪಾತಕಗಳ ಲಕ್ಷಣಗಳಿಗನುಗುಣವಾಗಿ ಸರ್ಕಾರದಿಂದ ನಿಯೋಜಿತವಾದ ನ್ಯಾಯಸ್ಥಾನ ಶಿಕ್ಷೆ ವಿಧಿಸುತ್ತದೆ. ಸಾಮಾಜಿಕ ಜವಾಬ್ದಾರಿಯ ದೃಷ್ಟಿಯಿಂದ ಸರ್ಕಾರ ವಹಿಸುವ ಒಂದು ಮುಖ್ಯ ಪಾತ್ರ ಇದಾಗಿದೆ. ಪಾತಕ, ಅಪರಾಧಗಳೂ ಕೂಡ ಪಾಪ ಹೆತ್ತ ಕೂಸುಗಳೆ. ಬೆಳೆದು ದೊಡ್ಡವಾಗಿರುತ್ತವೆಯಷ್ಟೆ ! ಆದರೆ ಪಾಪ ಎಂಬುದು ಮಾತ್ರ ಒಂದು ಮತಧರ್ಮವು ಮನುಷ್ಯನನ್ನು ನಂಬಿಸಿ ಹೇರಿದ ಒಂದು ನೈತಿಕ ಜವಾಬ್ದಾರಿ. ಸಾಮಾಜಿಕ ಜೀವನವೇ ಪ್ರಪಂಚದಲ್ಲಿ ಒಂದಲ್ಲ ಒಂದು ಮತಧರ್ಮದ ಇಂಥ ಕಟ್ಟು ಕಟ್ಟಲೆಗಳಿಗೆ ತಲೆಬಾಗಿರುವುದರಿಂದ ಮನುಷ್ಯನ ಮನಸ್ಸಿನ ಮೇಲೆ ಆಗಿರುವ ಧಾರ್ಮಿಕ ಪ್ರಭಾವ ಅತಿ ಗಾಢವಾದದ್ದು. ಆದ್ದರಿಂದ ಇಂಥ ಕಟ್ಟು ಕಟ್ಟಲೆ ಮುರಿದಾಗ ಮನುಷ್ಯ ಪಾಪಪ್ರಜ್ಞೆಯಿಂದ ಬಳಲುವ ಸಾಧ್ಯತೆ ಇರುತ್ತದೆ. ಕೊಲೆ, ಕಳ್ಳತನ, ಮೋಸ, ಸುಳ್ಳು, ಕುತಂತ್ರ ಇವನ್ನೆಲ್ಲಾ ಸಾಮಾನ್ಯವಾಗಿ ಎಲ್ಲಾ ಧರ್ಮಗಳೂ ಪಾಪ ಎಂಬ ಭಾವನೆಯನ್ನೇ ಬೆಳೆಸಿವೆ. ಆದ್ದರಿಂದಲೇ ಇವು ಧಾರ್ಮಿಕ ದೃಷ್ಟಿಯಿಂದ ಪಾಪವಾಗಿರುವಂತೆಯೇ ಸಾಮಾಜಿಕ ದೃಷ್ಟಿಯಿಂದ ಅಪರಾಧಗಳಾಗಿ, ಸರ್ಕಾರದ ದೃಷ್ಟಿಯಿಂದ ಶಿಕ್ಷೆಗೆ ಗುರಿಯಾಗುತ್ತವೆ !

ಕೊಲೆ, ಕಳ್ಳತನ ಮೊದಲಾದವು ಎಲ್ಲರಲ್ಲಿಯೂ ಸಾರಾಸಗಟಾಗಿ ಪಾಪದ ಭಾವನೆಯನ್ನು ಬಿತ್ತುತ್ತವೆ ಎಂದು ನಂಬಲಾಗದು. ಇವನ್ನು ಮಾಡಿದವನು ನಾನು ಪಾತಕಿ, ಕಳ್ಳ, ಕೊಲೆಗಾರ ಎಂದು ಘೋಷಣೆ ಹೊರಡಿಸುವುದಿಲ್ಲ. ಹಾಗಂತ ಅವರನ್ನು ಪತ್ತೆ ಹಚ್ಚಿ, ನಿರ್ಧರಿಸಿ ಶಿಕ್ಷೆಗೆ ಗುರಿಮಾಡುವವರು ಬೇರೆಯವರು. ಹಾಗೆ ಪತ್ತೆ ಹಚ್ಚದಿದ್ದರೆ ಅವರು ಪಾತಕಿಗಳೂ ಅಲ್ಲ, ಪಾಪಿಗಳೂ ಅಲ್ಲ! ಆದರೆ ಸೂಕ್ಷ್ಮವೂ ಸಂಕೀರ್ಣವೂ ಆದ ಮನುಷ್ಯನ ಮನಸ್ಸು ನಾನಾ ಕಾರಣಕ್ಕೆ ಬಳಲುತ್ತದೆ. ಅಂಥ ಬಳಲುವಿಕೆಯಲ್ಲಿ ಈ ಪಾಪಪ್ರಜ್ಞೆಯೂ ಒಂದು. ಬೇರೆಯವರು ಹೆಸರಿಸಲಿ, ಬಿಡಲಿ; ನಿರ್ಧರಿಸಲಿ ಬಿಡಲಿ, ತನಗೆ ತಾನೇ ''ನಾನು ಪಾಪಿ, ಪಾಪಿ ಜನ್ಮ ನನ್ನದು'' ಎಂದು ಪಿಸುಗುಟ್ಟಿಕೊಳ್ಳುತ್ತಾನೆ. ''ನಾನು ಪಾಪಿ; ಪರಲೋಕದಲ್ಲಿರುವ ತಂದೆಯೇ, ನನ್ನ ಪಾಪವನ್ನು ಕ್ಷಮಿಸು'' ಎಂದು ಕ್ರೈಸ್ತರು ಸಹಜವಾಗಿ ಭಕ್ತಿಯಿಂದ ಪ್ರಾರ್ಥಿಸುತ್ತಾರೆ. ಹಿಂದೂಗಳು ಇಂಥ ಪಾಪ ಭಾವನೆಯಿಂದ ಹೊರಡದೆ, ಅಹಂ ಬ್ರಹ್ಮಾಸ್ಮಿ - ನಾನೇ ಬ್ರಹ್ಮ - ಎಂಬುದರ ಮೂಲಕ ಹುಡುಕಾಟ ನಡೆಸುತ್ತಾರೆ ಎಂದು ಡಾ॥ ರಾಧಾಕೃಷ್ಣನ್ ಅವರು ತಮ್ಮ ''ಮತಧರ್ಮಗಳ ಪುನರುಜ್ಜೀವನ'' ಎಂಬ ಕೃತಿಯಲ್ಲಿ ತಿಳಿಸುತ್ತಾರೆ. ಆದರೆ ಎಷ್ಟು ಹಿಂದೂಗಳು ನಾನೇ ಬ್ರಹ್ಮ, ನಾನೇ ಆನಂದ ಸ್ವರೂಪಿ ಎಂದು ಗುರುತಿಸಿಕೊಳ್ಳುತ್ತಾರೋ. ಕುಣಿದಾಡುತ್ತಾ ಬದುಕುತ್ತಿರುತ್ತಾರೋ ನಾವಂತೂ ಅರಿಯೆವು ! ಈ ಧರ್ಮೀಯರ ಪೈಕಿ ಎಷ್ಟೋ ವೇಳೆ ''ಈ ಪಾಪಿಯನ್ನು ಏಕೆ ಹುಟ್ಟಿಸಿದೆ ? ■

ಪಾಪಿಯನ್ನು ಇನ್ನೂ ಏಕೆ ಉಳಿಸಿದೆ'' ಎಂಬುವರ ಆರ್ತನಾದವೇ ಹೆಚ್ಚಾಗಿ ಕೇಳಿಬರುತ್ತದೆ. ನಮ್ಮ ದೇಶದ ಬಹುಸಂಖ್ಯಾತರು ಹೀಗೆ ಪಾಪಿಗಳು ಎಂದು ದುಃಖಿಸಲು ಕಾರಣಗಳನ್ನು ನಮ್ಮ ಸಾಮಾಜಿಕ ಸಂದರ್ಭಗಳಲ್ಲಿಯೇ ಹುಡುಕಬೇಕಾಗುತ್ತದೆ. ಇದನ್ನು ಆಮೇಲೆ ನೋಡೋಣ.

ಈ ಪಾಪಪ್ರಜ್ಞೆಯಿಂದ ಸಾಮಾನ್ಯರು ಬಳಲುವುದಿರಲಿ, ನಾವು 'ಪುಣ್ಯಾತ್ಮ'ರೆಂದು ಕೊಂಡ ಎಷ್ಟೋ ಜನ ಭಕ್ತರು, ಸಂತರು ತಾವು ಪಾಪಿಗಳೆಂದು ಕರೆದುಕೊಳ್ಳುವುದನ್ನು ನೋಡಿದರೆ, ಪಾಪದ ಪರಿಧಿ ನಿಧಾನವಾಗಿ ವಿಸ್ತರಿಸಿದಂತೆ ಕಾಣುತ್ತದೆ. ಭಕ್ತಿಭಂಡಾರಿ ಬಸವಣ್ಣನು ''ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕದೂರನ'' ಎಂದು ಹಲಬುವುದರಲ್ಲಿ ಇಂಥ ಪಾಪದ ಒಳನೋವಿನ ಛಾಯೆಯಿದೆ. ''ಲೋಕದೊಳಗೆನ್ನನು ಪೋಲ್ವ ಪಾಪಿಗಳನ್ನು ನೀ ಕಂಡು ಬಲ್ಲೆಯಾ ಕೃಷ್ಣ'' ಎಂದು ಕನಕದಾಸರು ಗೋಳಾಡಿದರೆ, ಪುರಂದರದಾಸರು ''ಬಿನ್ನಹಕೆ ಬಾಯಿಲ್ಲವಯ್ಯಾ..... ಅನಂತ ಅಪರಾಧ ಎನ್ನಲ್ಲಿ ಇರಲಾಗಿ'' ಎಂದು ದುಃಖಿಸುತ್ತಾರೆ. ಹೀಗೆ ಸಾಧು ಸಜ್ಜನರು ಪಾಪಿಗಳೆಂದು ಪರಿತಪಿಸಲು ಕಾರಣ ಅವರು ಯಾವುದೋ ಪಂಚಮಹಾಪಾತಕಗಳನ್ನು ಮಾಡಿದ್ದಕ್ಕಲ್ಲ. ಸತಿ, ಸುತ, ಸಂಪತ್ತು ಎಲ್ಲದರ ಬಗ್ಗೆ ತಿರಸ್ಕಾರ! ದೈವ ಸಾಕ್ಷಾತ್ಕಾರಕ್ಕೆ ಮಾತ್ರ ಪುರಸ್ಕಾರ! ಹುಟ್ಟಿದ್ದೇ ತಪ್ಪಾಯಿತು !! ಇದೇ ಇವರ ಮಹಾಪಾಪ ! ಇವರ ಗಳಿಕೆ ಏನಿದ್ದರೂ ದೇವರ ಕರುಣೆ ದೇವರು.

ಇನ್ನು ಸಾಮಾಜಿಕ ಸಂದರ್ಭಗಳಲ್ಲಿ ಕೋಟ್ಯಾನುಕೋಟಿ ಜನರು ''ನಾವು ಪಾಪಿಗಳು'' ಎಂದು ಅಳುತ್ತಿದ್ದರೆ ಅದಕ್ಕೆ ಕಾರಣ ದೇವರ ಹಂಬಲವಂತೂ ಅಲ್ಲ. ಇತರೆ ಮನುಷ್ಯರು ತಮಗಿಂತ ಮಿಗಿಲಾದ ಸುಖ, ಸೌಲಭ್ಯ ಅನುಭವಿಸುತ್ತಿರುವಾಗ, ನಮಗೇಕೆ ಈ ದುಸ್ಥಿತಿ ಎಂದು ಹೋಲಿಕೆ ಮಾಡಿಕೊಳ್ಳುವಾಗ, ಆತ್ಮ ಮರುಕದಿಂದ, ಕನಿಕರದಿಂದ ತಮಗೆ ತಾವೇ ಪಾಪಿಗಳು ಎಂದುಕೊಳ್ಳುವ ಸಂದರ್ಭವಿದು. ಹೊಟ್ಟೆಗಿಲ್ಲದೆ ನಡುಬಗ್ಗಿಸಿ ನಡೆಯುವ ಕಡುಬಡವನೊಬ್ಬ ಮೃಷ್ಟಾನ್ನ ತಿಂದು ಪನ್ನೀರಿನಲ್ಲಿ ಬಾಯಿ ಒರೆಸಿಕೊಳ್ಳುತ್ತ ಭಾರಿ ಮಹಲುಗಳಲ್ಲಿ ಇರುವವರನ್ನು ಕಂಡಾಗ ಅವನು ಪಾಪಿ ಎಂದುಕೊಳ್ಳದೆ ಇನ್ನೇನು ತಾನೆ ಮಾಡಲು ಸಾಧ್ಯ ? ಸಮತಾವಾದದ ಹಿನ್ನೆಲೆಯಿಂದ ವಚನಕಾರರನ್ನು ವಿಮರ್ಶಿಸಿದ ಲೇಖಕರೊಬ್ಬರು ಬಸವಣ್ಣನವರ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ....' ಎಂಬ ವಚನವನ್ನೇ ಹಿಡಿದು ಜಗ್ಗಾಡಿದ್ದಾರೆ. ಬಡವರು, ಕೆಳವರ್ಗದವರಿಗೆ ಈ ಉಪದೇಶವನ್ನು ಬಸವಣ್ಣ ಬೋಧಿಸಿದ್ದರಿಂದ ಅವರು ಹೋರಾಟದ ಇದ್ದ ಬದ್ದ ಹುರುಪನ್ನೂ ಕಳೆದುಕೊಂಡು ಶ್ರೀಮಂತವರ್ಗ, ವ್ಯಾಪಾರೀ ವರ್ಗದವರನ್ನು ಕೊಲ್ಲಲಿಲ್ಲ, ಕಳ್ಳತನ ಮಾಡಲಿಲ್ಲ ! ಹಾಗಾಗಿ ಈ ಮೇಲು ವರ್ಗದವರು ಯಾವ ತೊಂದರೆಯೂ ಇಲ್ಲದೆ ಬದುಕಿದರು ! ತಮ್ಮನ್ನು ಈ ರೀತಿ ಉಳಿಸಿದ್ದಕ್ಕಾಗಿ ಈ ವರ್ಗದವರು ಬಸವಣ್ಣನಿಗೆ ಮನಸ್ಸಿನಲ್ಲಿಯೇ ಕೃತಜ್ಞತೆ ಸಲ್ಲಿಸಿದರು ! ಬಡಪಾಯಿಗಳಾದ ಬಡವರು ಸಹಜವಾಗಿ ತಾವು ಪಾಪಿಗಳೆಂದು ಬಡಬಡಿಸಿದರೆಂದು ಕಾಣುತ್ತದೆ, ಆ ಕಾಲದಲ್ಲಿ, ಇದು ಆ ಸಂಶೋಧಕರ ಪಾಂಡಿತ್ಯದ ಹಾವಳಿ.

ರೋಗ-ರುಜಿನಗಳಿಂದ, ಮುಪ್ಪಿನ ಭೀತಿ-ಅಸಹಾಯಕತೆಯಿಂದ ಮನುಷ್ಯನಿಗೆ 'ನಾನು ಪಾಪಿ' ಎನ್ನಿಸಿದರೆ ಅದು ಸ್ವಲ್ಪ ನಿಜ; ಮಿಕ್ಕಿದ್ದು ತಪ್ಪು. ರೋಗಕ್ಕೆ ಚಿಕಿತ್ಸೆ, ಉಪಚಾರ, ಮುಪ್ಪಿಗೆ ಪ್ರೀತಿಯ ಆಸರೆ ಸಿಕ್ಕರೆ ಈ 'ಪಾಪಿತನ'ದಿಂದ ಪಾರುಮಾಡಬಹುದು. ಆದರೆ ಭಾರತೀಯ ಸಮಾಜದಲ್ಲಿ ನಮ್ಮ ಅಮೋಘವಾದ ವರ್ಣ ವ್ಯವಸ್ಥೆ, ಜಾತಿ ವ್ಯವಸ್ಥೆಯೂ ಕೂಡ ಈ 'ಪಾಪ'ದ ಕಲ್ಪನೆಯಿಂದಲೇ ಸಮಾಧಾನ ಕಲ್ಪಿಸಿದ್ದು ಮಾತ್ರ ಘೋರ ಪಾಪ ! ಕರ್ಮ ಮತ್ತು ಪುನರ್ಜನ್ಮಗಳ ಮೂಲಕ ಶೂದ್ರರಿಗೆ, ಅಸ್ಪೃಶ್ಯರಿಗೆ, ರೋಗಿಗಳಿಗೆ, ಅಂಗವಿಕಲರಿಗೆ ಈ ಪಾಪದ ಅಂಗಿಯನ್ನು ತೊಡಿಸಿ, ಅವರ ಬದುಕುವ ಹಕ್ಕನ್ನು, ಜೀವನದ ಚೈತನ್ಯವನ್ನು ಧೂಳಿಪಟ ಮಾಡಲಾಯಿತು. ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಕರ್ಮದ ಫಲ ವರ್ತಮಾನದ ಅವರ ಕನಿಷ್ಠ, ಅನಿಷ್ಟ ಬದುಕು ಎಂದು ನಂಬಿಸಲಾಯಿತು. ಇದರ ದೆಸೆಯಿಂದ ಅದೆಷ್ಟೋ ಅರಳಬೇಕಾದ ಮೊಗ್ಗುಗಳು ಬಾಡಿ, ಒಣಗಿಹೋದವು. ವಿಜ್ಞಾನ-ವಿಚಾರಗಳು ಎಡೆಬಿಡದೆ ಜಗತ್ತಿನಲ್ಲಿ ವ್ಯಾಪಿಸುತ್ತಿರುವ ಈ ಸಂದರ್ಭದಲ್ಲಿಯೂ ಇಂಥ ಪಾಪ ವಿಮೋಚನೆಗಾಗಿ ಹೋರಾಟ ಇನ್ನೂ ನಡೆಯುತ್ತಿದೆ ಎಂಬುದು ಎಷ್ಟು ಅವಮಾನಕರವಲ್ಲವೆ ?

ಆದರೆ ಯಾವುದನ್ನು ನಾವು ಪಾಪ ಎಂದು ಸಾಮಾನ್ಯವಾಗಿ ಹೇಳುತ್ತೇವೆಯೋ, ಅದು ಒಂದು ಆಳವಾದ, ಭಿನ್ನವಾದ ಅರ್ಥವನ್ನು ಸಾಹಿತ್ಯಲೋಕದಲ್ಲಿ ಗಳಿಸುತ್ತದೆ ಎನ್ನಿಸುತ್ತದೆ. ''ಮನವರಿಯದ ಪಾಪವಿಲ್ಲ'' ಎಂಬ ಗಾದೆ ಮಾತಿನಂತೆ ಪಾಪದ ಕಲ್ಪನೆಯು ವ್ಯಕ್ತಿಯ ಆತ್ಮಶೋಧನೆಯಾಗಿ, ಮನುಷ್ಯನ ಜಟಿಲ ಮನಸ್ಸಿನ ವಿವಿಧ ಪದರುಗಳು ಸೃಜನಶೀಲ ಸಾಹಿತ್ಯ ಕೃತಿಯಲ್ಲಿ ಮೈದಾಳುತ್ತಾ ಹೋದಂತೆಲ್ಲಾ ಅದು ಕಾಣಿಸುವ ಬದುಕು ಅದ್ಭುತ ಬೆರಗನ್ನು ಉಂಟುಮಾಡುತ್ತದೆ. ವಿದ್ವಾಂಸರು ಗುರುತಿಸುವಂತೆ ಶಾಸ್ತ್ರಕ್ಕೂ ಮತ್ತು ಸಾಹಿತ್ಯಕ್ಕೂ ಇರುವ ಒಂದು ಗಮನಾರ್ಹ ವ್ಯತ್ಯಾಸವೆಂದರೆ ಇದು : ಶಾಸ್ತ್ರ ಪಾಪ ನಿಷೇಧವನ್ನು ವಿಧಿಸಿದರೆ, ಸಾಹಿತ್ಯವು ಇಂಥ ಪಾಪವು ಮನುಷ್ಯನಲ್ಲಿ ಯಾಕೆ ಘಟಿಸುತ್ತದೆ ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತ ಹೋಗುತ್ತದೆ. ಬಹುಮಟ್ಟಿಗೆ ಇಂಥ ಪಾಪ ಘಟಿಸಿದ್ದು ಏಕೆ ಎಂಬ ಮಹತ್ತರ ಪ್ರಶ್ನೆಗೆ ಸವಿವರ, ಸುದೀರ್ಘ ಉತ್ತರ ಕೊಡುವ ಮೂಲಕವೇ ಜಗತ್ತಿನ ಸಾಹಿತ್ಯದಲ್ಲಿ ಅನೇಕ ಕೃತಿಗಳು ಮಹತ್ವ ಪಡೆದಿವೆ. ಸೋಫೋಕ್ಲಿಸ್‌ನ 'ಈಡಿಪಸ್ ದೊರೆ' ಇಂಥ ಪಾಪದ ಶೋಧನೆಗೆ ಅನುವು ಮಾಡಿಕೊಟ್ಟ ಒಂದು ಮಹತ್ವದ ನಾಟಕವಾಗಿದೆ. ಈ ಘೋರ ಪಾಪಗಳಲ್ಲಿ ಮುಳುಗಿದ ಅಂಥ ನಾಯಕರಿಗೆ ಕ್ಷಮೆಯಿಲ್ಲ. ಆದರೆ ಅಂತಹ ಕೃತಿಯ ಓದುಗರು ಅನುಭವಿಸುವ ಜೀವನ ದರ್ಶನ ಮಾತ್ರ ಅದ್ಭುತವಾದುದು. ಮನುಷ್ಯರನ್ನು ಇಂತಲ್ಲಿ ನೋಡಿ ಇತರರು ಮನುಷ್ಯರಾಗುವುದು ಸಾಮಾನ್ಯ ಸಂಗತಿಯೆ ?

ಪಾಪವು ಎಲ್ಲೆಲ್ಲಿಗೋ ಕೊಂಡೊಯ್ಯುತ್ತದೆ ಎಂಬುದನ್ನು ಒಪ್ಪಿಕೊಳ್ಳುತ್ತಲೇ ಮತ್ತೆ ವೀರಪ್ಪನ್, ರಾಜ್‌ಕುಮಾರ್‌ರ ಕಡೆಗೆ ನಮ್ಮ ಗಮನಹರಿಸೋಣ. ಬೌದ್ಧ ಧರ್ಮದ ನಾಗಾರ್ಜುನನು ರಾಜಕೀಯದಲ್ಲಿ ನೈತಿಕತೆಯನ್ನು ಎತ್ತಿಹಿಡಿಯುತ್ತಾನೆ. ಎಂಥ ಅಪರಾಧವೂ ಕ್ಷಮೆಗೆ ಅರ್ಹ, ಎಂಥ ಅಪರಾಧಿಯೂ ಸುಧಾರಣೆಗೆ ಒಳಗಾಗಬೇಕು ಎಂಬ ನಿಲುವು ಆತನದು. ಸ್ವತಃ ಬೌದ್ಧ ಧರ್ಮದ ಸ್ಥಾಪಕನಾದ ಬುದ್ಧನೇ ಇದಕ್ಕೆ ಮಾದರಿಯಾಗಿದ್ದಾನೆ. ಮಹಾಪಾತಕಿಯಾದ ಅಂಗುಲಿಮಾಲನಂಥವನಲ್ಲಿಯೂ ಮನುಷ್ಯತ್ವದ ಸೆಲೆಯನ್ನು ಚಿಮ್ಮಿಸಿ, ಅವನನ್ನು ಪರಿವರ್ತಿಸಿದವನು ಮಹಾಕರುಣಾಮಯಿಯಾದ ಬುದ್ಧ. ಮೈತ್ರಿ-ಕರುಣೆಯ ಸಂಗಮವಾದ ಬುದ್ಧ ಪರಿಶುದ್ಧತೆಗೆ ಪದೇ ಪದೇ ಒತ್ತುಕೊಟ್ಟವನು. ಭಾರತದ ಮಣ್ಣಿನಲ್ಲಿ ಇಂಥ ಪರಂಪರೆಯೊಂದನ್ನು ಬುದ್ಧ ನಿರ್ಮಿಸಿದ. ಬಹುಶಃ ಅಂತಹ ಪರಂಪರೆಯ ಸತ್ವ ಗಾಂಧೀಜಿಯವರಲ್ಲಿ ಉಳಿದುಬಂದಿದ್ದರಿಂದಲೆ ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಮತೀಯ ಘರ್ಷಣೆ - ರಕ್ತಪಾತಗಳ ಮಧ್ಯೆ ಶಾಂತಿ, ಸೌಹಾರ್ದದ ಕರೆ ಕೊಡಲು ಸಾಧ್ಯವಾಯಿತು, ನೌಕಾಲಿಯಲ್ಲಿ ಗಾಂಧೀಜಿ ಮತ್ತು ಇತರರು ಜೀವಸಹಿತ ಉಳಿದುಬರುವಂತಾಯಿತು. ಈ ಬೌದ್ಧ ಪರಂಪರೆಯಲ್ಲಿ ಬಂದ ಗಾಂಧಿಯಂತೆಯೇ ಅದೇ ದಾರಿಯಲ್ಲಿ ಸಾಗಿದ ವಿನೋಬಾ, ಜಯಪ್ರಕಾಶ್ ನಾರಾಯಣ್ ಅವರುಗಳು ಚಂಬಲ್ ಕಣಿವೆಯ ಡಕಾಯಿತರು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಇವರ ಮಾತಿಗೆ ಕಿವಿಗೊಡುವಂತೆ ಮಾಡಿದರೆಂದು ಹೇಳುತ್ತಾರೆ. ಇಂಥ ಘೋರ ಪಾಪಿಗಳನ್ನು ಪರಿವರ್ತಿಸಲು ಮೊನ್ನೆ ಮೊನ್ನೆ ಸಾಧ್ಯ ಮಾಡಿಕೊಟ್ಟ ಈ ನೆಲದಲ್ಲಿ, ಇಂದು ವೀರಪ್ಪನ್‌ನಂಥ ಒಬ್ಬ ಘೋರ ಪಾಪಿಯನ್ನು ಪರಿವರ್ತಿಸುವ ಪರಿಶುದ್ಧತೆ ನಮ್ಮ ಯಾವ ನಾಯಕರಲ್ಲಿಯಾದರೂ ಇದೆಯೆ ? ಇಂಥ ಪರಿಶುದ್ಧ ದಕ್ಷ ವ್ಯಕ್ತಿತ್ವವಿಲ್ಲದೆ ನೈತಿಕವಾಗಿ ದಿವಾಳಿಯಾದ ನಮ್ಮ ನಾಯಕರ ದೆಸೆಯಿಂದ ವೀರಪ್ಪನ್‌ನಂಥವನನ್ನು ಪರಿವರ್ತಿಸಲು, ತಪ್ಪಿದರೆ ನಿಗ್ರಹಿಸಲು ಆಗದೆ - ಮನುಷ್ಯನಲ್ಲಿದ್ದ ದುಷ್ಟ ಶಕ್ತಿಯದೇ ಮೇಲುಗೈ ಆಗುತ್ತಿರುವುದನ್ನು ನಾವು ಮೂಕ ಸಾಕ್ಷಿಗಳಾಗಿ ನೋಡಬೇಕಾಗಿದೆ. ನಮ್ಮ ಅನೇಕ ರಾಜಕಾರಣಿಗಳ ನೈತಿಕ ದಿವಾಳಿ ವೀರಪ್ಪನ್‌ನಂಥವರಿಗೆ ಒಂದು ಶಕ್ತಿಯೇ ಸರಿ. ಒಬ್ಬ ನರಹಂತಕನಿಗೆ ಕೋಟ್ಯಾನುಕೋಟಿ ಹಣ ಸುರಿದುಬರಲು ಕಾರಣವೇನು ? ಇಂಥ ಕೋಟ್ಯಾನುಕೋಟಿ ಹಣ ಮಾಡುವುದೇ ದಂಧೆಯಾಗಿ, ನರಹಂತಕನಂತೆಯೇ ಬೇರೆ ಬೇರೆ ಸ್ವರೂಪದಲ್ಲಿ ಡಕಾಯಿತರೂ, ರಕ್ತ ಪಿಪಾಸುಗಳೂ, ಹೀನ ಕರ್ಮಗಳಲ್ಲಿ ತಲ್ಲೀನರೂ ಆಗಿರುವ ಅಪರಾಧಿಗಳು ಹೆಚ್ಚುತ್ತಿದ್ದರೆ ''ಮುನ್ನ ಮಾಡಿದ ಪಾಪ ಯಾರ ತಾತನ ಗಂಟು'' ಎಂದು ಹಾಡುತ್ತಾ ತನ್ಮಯರಾಗಿ ಕೂತು ಭಾವಾವೇಶಕ್ಕೆ ಒಳಗಾದವರಂತೆ ನಟಿಸುವುದೇ ಕುಶಲವೆನಿಸುತ್ತದೆ. ಪಾಪಪ್ರಜ್ಞೆಯನ್ನು ತೊಲಗಿಸಿಕೊಳ್ಳುವುದಕ್ಕಿಂತ ಅದರ ಬಗ್ಗೆ ಮನೋಜ್ಞವಾಗಿ ಹಾಡುವುದೇ ಲೇಸು ! ಕಾಡಿನ ವೀರಪ್ಪನು ನಾಡಿನ ವೀರರಿಗೆ ಕಲಿಸುತ್ತಿರುವ ಪಾಠ ಇದು.

ಟಿ. ಆರ್. ರಾಧಾಕೃಷ್ಣ
'ಆತ್ಮೀಯ', ಫಿಲ್ಟರ್ ಹೌಸ್ ರಸ್ತೆ, ಕರುವಿನಕಟ್ಟೆ ಅಂಚೆ
ಚಿತ್ರದುರ್ಗ - ೫೭೭ ೫೦೧

# ಉಡುಗೊರೆ

ನೆನಪಿನ ಕಾಣಿಕೆ..... ಉಡುಗೊರೆ ಎನ್ನುವ ಪದಗಳೊಡನೆ ಪ್ರೀತಿ ಎನ್ನುವ ಪದವೂ ಬೆಸೆದುಕೊಂಡಿರುತ್ತದೆ. ಆದರೆ ನೆನಪಿನ ಕಾಣಿಕೆಗಳಿಗೂ ಪ್ರೀತಿಗೂ ಸದಾ ಸಂಬಂಧ ಇದ್ದೇ ಇರುವುದರ ಬಗ್ಗೆ ನನಗೆ ಬಲವಾದ ಗುಮಾನಿ ಕಾಡುತ್ತಿದೆ. ಏಕೆಂದರೆ.... ಇಂದಿನ ಕೃತಕ ಯುಗದಲ್ಲಿ ಮುಖದಲ್ಲಿ ಸಹಜವಾಗಿ ಅರಳಬೇಕಾದ ಮುಗುಳ್ನಗೆಯೂ ಕೃತಕವಾಗಿರುತ್ತದೆ ! 'ಉಡುಗೊರೆ' ಶಬ್ದವು ಎಷ್ಟು ಸುಂದರವೋ ಅಷ್ಟೇ ಕಠಿಣವಾದ ಪ್ರಸಂಗಗಳೂ ಇವೆ. ನಿಜ ಹೇಳಬೇಕೆಂದರೆ ಇದರ ಹಿಂದೆ ನೋವಿನ ಕಥೆಗಳೇ ಬಲು ಹೆಚ್ಚು ಎನ್ನಬಹುದು. ತಮಗೆ ತಮ್ಮ ಆತ್ಮೀಯರ ಮೇಲೆ ಪ್ರೀತಿ ಎಷ್ಟಿದೆ ಎಂದು ತೋರಿಸಲು ಈ ಉಡುಗೊರೆಯ ಹಾದಿಯನ್ನು ಇಂದಿನ ನವಪೀಳಿಗೆ ಉಪಯೋಗಿಸುತ್ತಿದೆ. ಉಚಿತಕ್ಕೂ ಉಡುಗೊರೆಗೂ ಏನಾದರೂ ಸಂಬಂಧ ಕಲ್ಪಿಸಿಬಿಟ್ಟರೆ ಇಂದು ಜಗತ್ತಿನಲ್ಲಿ ತುಂಬಿ ತುಳುಕುತ್ತಿರುವ 'ಪ್ರೀತಿ'ಯ ಮಟ್ಟ ಎಂದಿಗಿಂತಲೂ ಅಮೋಘ ! ಕಾರಣ ಎಲ್ಲಿ ಹೋದರೆ ಅಲ್ಲಿ ನಿಮಗೆ ಒಂದು ಉಚಿತ ಬಹುಮಾನ ನೀಡಲು ಒಂಟಿ ಕಾಲಿನಲ್ಲಿ ನಿಂತಿರುವ 'ಬಿಸಿನೆಸ್ ನೆಂಟರು' ಕಾಯುತ್ತಿರುತ್ತಾರೆ. ಹೀಗಾಗಿ ಇಂದು ಉಡುಗೊರೆಗೂ ಹುನ್ನಾರಕ್ಕೂ ಸಂಬಂಧ ಕಲ್ಪಿಸಿ ಗುಮಾನಿಯಿಂದ ನೋಡುವ ಪರಿಸ್ಥಿತಿ ನಿರ್ಮಾಣವಾಗಿದೆ.

ಉಡುಗೊರೆ ನೀಡುವುದೂ ಒಂದು ಕಲೆಯೇ ! ಉಡುಗೊರೆ ನೀಡುವಾಗ ಯೋಚಿಸಬೇಕಾದ ಸಂಗತಿಗಳೂ ಇರುತ್ತವೆ. ಇಲ್ಲವಾದರೆ ಉಡುಗೊರೆಯನ್ನು ನೀಡಿ, ನೀಡಿದ ನೀವೇ ಪಡೆದ ಗೆಳೆಯ- ಗೆಳತಿಯರಿಂದ 'ಬುದ್ದು' ಎನಿಸಿಕೊಳ್ಳುವ ಪ್ರಮೇಯ ಬರುತ್ತದೆ. ನನ್ನ ಗೆಳೆಯ ರಂಗ ಈ ವಿಷಯದಲ್ಲಿ ಬಹಳ ಚತುರ. ಅವನಿಗೆ ಯಾರು ಯಾರಿಗೆ ಯಾವ ಯಾವ ಸಂದರ್ಭದಲ್ಲಿ ಏನು ಉಡುಗೊರೆ ನೀಡಬೇಕು ಎನ್ನುವ ಕಲೆ ಕರಗತವಾಗಿದೆ. ಅವನ ಈ ಚತುರತೆಗೆ ನಾನು ಮನಸೋತು 'ಭೇಷ್ !' ಎಂದರೆ ಅವನು 'ಬುಸ್' ಎನ್ನುತ್ತಾ – 'ನಾನು ಈ ಕಲೆ ಕಲಿಯಲು ಬಾಳಾ ಕಷ್ಟಪಟ್ಟಿದ್ದೇನೆ. ಹೊಸದಾಗಿ ಮದುವೆ ಆದ ನವದಂಪತಿಗಳಿಗೆ ರಾಮಾಯಣ ಪುಸ್ತಕ ನೀಡಿ ಬೈಸಿಕೊಂಡಿದ್ದೇನೆ. ನಮ್ಮ ಬಾಸ್ ವಿದೇಶ ಪ್ರವಾಸ ಹೊರಟಾಗ 'ಕಾಮಸೂತ್ರ' ಪುಸ್ತಕ ನೀಡಿ ಅವರ ಧರ್ಮಪತ್ನಿಯಿಂದ ಉಗಿಸಿಕೊಂಡಿದ್ದೇನೆ. ಹೀಗೆ ನೂರೆಂಟು ಅನುಭವಗಳಿಂದ ಕಲಿತ ಪಾಠ ಇದು ! ಗೊತ್ತಾಯ್ತಾ ?' ಎಂದು ನನ್ನ ಮೇಲೆ ಕಿಡಿ ಕಾರಿದ್ದೂ ಇದೆ. ರಂಗಸ್ವಾಮಿಯ ಸಲಹೆ ಸೂಚನೆಗಳು ನನಗೂ ಉಪಯೋಗಕ್ಕೆ ಬಂದಿವೆ. ಅರ್ಥಪೂರ್ಣ ಉಡುಗೊರೆ ನೀಡುವುದು ಘನಂದಾರಿ ಕೆಲಸವೆ ಸರಿ. ನನ್ನ ಆತ್ಮೀಯ ಮಿತ್ರನೊಬ್ಬನಿಗೆ ಎರಡು ವಿಶೇಷ ಸಂದರ್ಭಗಳಲ್ಲಿ ಒಮ್ಮೆ ಒಂದು ನಿಲುಗನ್ನಡಿ ಮತ್ತೊಮ್ಮೆ ಒಂದು ತೂಕ ನೋಡುವ ಯಂತ್ರವನ್ನು ನೀಡಿದೆನು. ಅವನು ಘಟೋದ್ಗಜನಾಗುತ್ತಿದ್ದುದು ಕಂಡು ನಾನು ಗಾಬರಿಯಾಗಿ ಅವನಿಗೆ ಅದನ್ನು ನೀಡಿದ್ದೆ. ನಾನು ಪ್ರೀತಿಯಿಂದ ಕೊಟ್ಟ ಕನ್ನಡಿ ಎಂದು ಅವನು ದಿನಾಲು ನೋಡಿಕೊಳ್ಳಲು ಶುರುಮಾಡಿದಾಗಲೇ ಅವನಿಗೆ ಅನುಮಾನ ಬಂದದ್ದು ಕನ್ನಡಿಯಲ್ಲಿ ಕಾಣುತ್ತಿರುವ ಪ್ರತಿಬಿಂಬ ತನ್ನದೇ ತಾನೆ ? ಎಂದು. ಅವನಿಗೆ ಆ ಅನುಮಾನ ಕಾಡುವ ಹೊತ್ತಿಗೆ ನಾನು ನನ್ನ ಎರಡನೆಯ ಉಡುಗೊರೆಯಾದ ತೂಗುವ ಯಂತ್ರವನ್ನೂ ನೀಡಿದ್ದೆನು. ಉಚಿತ ಉಡುಗೊರೆಯನ್ನು ವ್ಯರ್ಥ ಮಾಡುವುದು ಸರಿಯಲ್ಲ ಎಂದು ಅವನು ಅದರ ಮೇಲೆ ನಿಂತು ನೋಡುತ್ತಾನೆ: ಅವನ ದೇಹದ ತೂಕ ಬರಿಯ ೧೩೦ ಕೆ.ಜಿ. ಮಾತ್ರ ! ಆಗಲೇ ಅವನು ಹೌಹಾರಿದ್ದು ! ಅವನು ಈ ಭೂಮಿಗೆ ಭಾರ ಎನ್ನುವ ಸತ್ಯ ಅವನಿಗೆ ಅರಿವಾಗಿ ಕಷ್ಟಪಟ್ಟು ತನ್ನ ತೂಕವನ್ನು ಎಪ್ಪತ್ತಕ್ಕೆ ಇಳಿಸಿಕೊಂಡು ಆರೋಗ್ಯವಂತನಾದ. ಈಗಲೂ ನಾನು ಎಂದರೆ ಅವನಿಗೆ ವಿಶೇಷ ಅಭಿಮಾನ ಮೂಡುವಂತಾಗಿದೆ !

ಮಾತಿನ ನಡುವೆ ನಮ್ಮ ರಂಗು ಒಂದು ರಸವತ್ತಾದ ಸತ್ಯವನ್ನು ಹೊರಹಾಕಿದನು : 'ಉಡುಗೊರೆಯನ್ನು ನಾವು ಪ್ರೀತಿಸುವವರಿಗಷ್ಟೇ ಕೊಡಬೇಕೆಂದಿಲ್ಲ. ನಾವು ದ್ವೇಷಿಸುವವರಿಗೂ ಕೊಡಬಹುದು. ಇದು ಹೇಗೆ ಅಂತ ನಿನಗೆ ಗೊತ್ತಾ ?' ಎಂದು ನನ್ನತ್ತ ಹುಬ್ಬೇರಿಸುತ್ತಾ ಪ್ರಶ್ನಿಸಿದನು. ನಾನು ಅವನ ಮೋಜಿನ ಪ್ರಶ್ನೆಗೆ 'ಗೊತ್ತಿಲ್ಲ !' ಎನ್ನುವಂತೆ ತಲೆ ಅಲ್ಲಾಡಿಸಿದೆ. 'ನನ್ನ ಹೆಂಡ್ತಿ ತಮ್ಮ ಅದೇ ನನ್ನ ಭಾಮೈದ ಹನುಮಂತೂ...... ಏಕೋ ಅವನ ಕಂಡ್ರೆ ನನಗೆ ಒಂಥರಾ ಮೈಯಲ್ಲಾ ಉರಿಯುತ್ತೆ..... ಅವನು ಮೊನ್ನೆ ಮದುವೆ ಆದ.... ಆಗ ನಾನು ಅವನಿಗೆ ಏನು ಉಡುಗೊರೆ ಕೊಟ್ಟೆ ಗೊತ್ತಾ ? ನನ್ನ ಹಳೆಯ ಡಬ್ಬಾ ಕಿರಿಕಿರಿ ಕಾರು ಇತ್ತಲ್ಲಾ ಅದನ್ನೇ ಕೊಟ್ಟುಬಿಟ್ಟೆ ! ಈಗ ನೋಡಬೇಕು ಆ ಮುಂಡೇದು ಪಡ್ತಾ ಇರೋ ಪಾಡನ್ನ. ಯಾವಾಗ ನೋಡಿದ್ರು ಗ್ಯಾರೇಜ್ ಮುಂದೇನೇ ನಿಂತಿರ್ತಾನೆ !' ಎಂದು ಒಂದು ದೀರ್ಘವಾದ ಸಂತೋಷದ ನಗೆ ನಕ್ಕನು. ರಂಗಸ್ವಾಮಿಯ 'ಜ್ಞಾನ'ಕ್ಕೆ ನಾನು ತಲೆದೂಗುತ್ತಾ ಸ್ತಂಭೀಭೂತನಾಗಿ ನಿಂತೆನು.

ಮತ್ತೆ, ಒಂದು ದಿನ ರಂಗು ನನ್ನನ್ನು ಹೀಗೆ ರೇಗಿಸಿದ : 'ನೋಡೋ, ಕೆಲವರು ಏನು ಉಡುಗೊರೆ ಕೊಡ್ತಾರೆ ಅಂತ ಮೊದಲೇ ಅವರ ಮುಖ ಲಕ್ಷಣ ನೋಡಿಯೇ ಹೇಳಿ ಬಿಡಬಹುದು. ಈಗ ನಿನ್ನೇ ನೋಡು... ನೀನು ಯಾವುದೇ ಸಮಾರಂಭಕ್ಕೆ ಹೋದರೂ ನೀನು ಕೊಡುವುದು ನೀನೇ ಬರೆದು ಬಿಕರಿಯಾಗದ ನಿನ್ನ ಕೃತಿಗಳನ್ನು ತಾನೆ' ಎಂದು ನನ್ನನ್ನು ಹೌಹಾರುವಂತೆ ಮಾಡಿದನು. ನಾನು ಮರೆಮಾಚಲು



ಕ. ಬ. ವೀರಣ್ಣ ಕಣ್ಣಾಗಾಲ



ಅವನಿಗೆ ಪ್ರೀತಿಯಿಂದ ನವಿರಾಗಿ ರೇಗುತ್ತ, 'ಅದೆಲ್ಲಾ ಏನಿಲ್ಲಾ, ಯಾರು ನಿನಗೆ ಹಾಗಂತ ಹೇಳಿದೋರು ?' ಎಂದು ದಬಾಯಿಸಲು ಪ್ರಯತ್ನಿಸಿದೆ. ಅದಕ್ಕೆ ರಂಗು ನಗುತ್ತ 'ನೀನು ಒಬ್ಬನೇ ಹೀಗೆ ಮಾಡುವುದಿಲ್ವೋ. ಈ ಸಾಹಿತಿಗಳ ಹಣೆಬರಹವೇ ಅಷ್ಟು. ಎಲ್ಲರೂ ಮಾಡೋದೇ ಹಾಗೆ ! ನೀನು ಎಷ್ಟೋ ಪರವಾಗಿಲ್ಲ ಮಹರಾಯ, ಕೆಲವರು ಅದನ್ನು ಕೊಡೋದೂ ಅಲ್ಲದೆ ಅದನ್ನ ಓದಿ ಅಭಿಪ್ರಾಯ ತಿಳಿಸಿ ಎಂದು ಗಂಟೂ ಬೀಳ್ತಾರೆ !' ಎನ್ನುತ್ತಾ ತೊಪ್ಪೆ ಸಾರಿಸಲು ಪ್ರಯತ್ನಿಸಿದನು.

'ಉಡುಗೊರೆ' ಎಂದಾಕ್ಷಣ ನನಗೆ ಬಹಳ ಹಿಂದೆ ನಡೆದ ಒಂದು ಘಟನೆ ನೆನಪಿಗೆ ಬರುತ್ತದೆ,' ರಂಗ ನೆನಪಿನಾಳಕ್ಕೆ ಇಳಿದು ಹೇಳಿದನು. ನಾನು 'ಅದೇನು ಹೇಳೋ ಮಹಾರಾಯಾ' ಎಂದು ಪೀಡಿಸಿದೆನು. ಆಗ ರಂಗ ಮತ್ತೆ ರಾಗವಾಗಿ, ಬಾಯ್ಬಿಡುತ್ತಾ 'ಆಗ ನಾನು ಕಾಲೇಜು ಓದುತ್ತಿದ್ದ ದಿನಗಳು. ನಮ್ಮ ಕಾಲೇಜಿನಲ್ಲಿ ಆಫೀಸ್ ಕ್ಲರ್ಕ್ ಒಬ್ಬರು ನನಗೆ ಅವರ ಸಂಬಂಧಿಕರೊಬ್ಬರ ಮದುವೆಯ ಆಹ್ವಾನ ಪತ್ರಿಕೆ ಕೈಗಿತ್ತು ಬರಲೇಬೇಕೆಂದು ಹೇಳಿದ್ದರು. ವಿಧಿ ಇಲ್ಲದೆ ನಾನು ಹೋಗಲೇಬೇಕಾಯ್ತು. ಹೋಗಿದ್ದೆ. ಆದರೆ ಮದುವೆಯಲ್ಲಿ ನವದಂಪತಿಗಳಿಗೆ ಏನೂ ಉಡುಗೊರೆ ನೀಡದಿದ್ದರೆ ಹೇಗೆ, ಎಂದುಕೊಂಡು ನಾನೂ ಒಂದು ಉಡುಗೊರೆ ಕೊಂಡು ಚೆಂದ ಮಾಡಿ ಪ್ಯಾಕ್ ಮಾಡಿದ್ದೆ. ನಾನೇ ಪ್ಯಾಕ್ ಮಾಡಿದ್ದು. ಬೇರೆಯವರ ಕೈಯಲ್ಲಿ ಪ್ಯಾಕ್ ಮಾಡಿಸುವ ತರಹ ಆ ಉಡುಗೊರೆ ಇರಲಿಲ್ಲ. ನಾನು ನವದಂಪತಿಗಳಿಗೆ ಹರಸಿ ಅವರ ಕೈಯಲ್ಲಿ ಇಟ್ಟೆನು. ಅವರು ಅದನ್ನು ಪಕ್ಕದಲ್ಲಿ ನಿಂತಿದ್ದ ಸಹಾಯಕನ ಕೈಯಲ್ಲಿ ಇತ್ತರು. ಆ ಸಹಾಯಕ ಮುಂಡೇದು ಮೆಲ್ಲನೆ ಇಡೋದಲ್ವೆ ! ಅದು ಬಿಟ್ಟು ಅಲ್ಲಿಂದ ನೆಲಕ್ಕೆ ಒಗೆದನು. ಏನೋ 'ಟಪ್' ಶಬ್ದ ಒಮ್ಮಿತು. ಏನಾಯಿತೆಂದು ಗ್ರಹಿಸಿದ ನಾನು ತಕ್ಷಣ ಅಲ್ಲಿಂದ ಕಂಬಿಕಿತ್ತೆ. ನಾನು ಆ ದಿನ ಏನು ಉಡುಗೊರೆ ನೀಡಿದೆ ಎಂದು ಇಲ್ಲಿಯತನಕ ಯಾರ ಬಳಿಯಲ್ಲಿಯೂ ಬಾಯಿಬಿಟ್ಟಿಲ್ಲ. ಈಗ ನೀನು ನನ್ನ ಚಡ್ಡಿ ದೋಸ್ತು ಅಂತ ಹೇಳ್ತಾ ಇದೀನಿ. ನಾನು ಆವತ್ತು ಪ್ಯಾಕ್ ಮಾಡಿಸಿದ್ದು ಐದು ರೂಪಾಯಿಯ ಒಂದು ಗಾಜಿನ ಲೋಟ !' ಎಂದು ಹೇಳಿ ರಂಗಸ್ವಾಮಿ ಬಿದ್ದುಬಿದ್ದು ನಗತೊಡಗಿದನು. ಆಗ ನಾನೇ ಅವನನ್ನು ಸಾಂತ್ವನಗೊಳಿಸಿದೆ. ಮೊದಲೇ ಅವನು ಹಾರ್ಟ್ ಪೇಷೆಂಟು. ಬಹಳ ನಕ್ಕರೂ ಕಷ್ಟ, ಅತ್ತರೂ ಕಷ್ಟ ಎನ್ನುವುದು ನನಗೆ ಮೊದಲೇ ತಿಳಿದಿತ್ತು.

ಇನ್ನು ಮದುವೆಯ ಮನೆಯಲ್ಲಿ ನವದಂಪತಿಗಳಿಗೆ ಕೊಡುವ ತರಲೆ ಉಡುಗೊರೆಗಳ ಬಗ್ಗೆ ನಿಮಗೆ ಈಗಾಗಲೇ ತಿಳಿದಿರುವುದರಿಂದ ನಿಮ್ಮ ತಾಳ್ಮೆಯನ್ನು ಪರೀಕ್ಷಿಸಲು ನಾನು ಇಷ್ಟಪಡುವುದಿಲ್ಲ.

ಕೆಲವು ಬಹಳ ಲೌಕಿಕ ವ್ಯಕ್ತಿಗಳಿರುತ್ತಾರೆ. ಅವರು ಉಡುಗೊರೆ ನೀಡುವಾಗ ಅದು ಎಷ್ಟೇ ಪುಟಾಣಿಯೇ ಆಗಿರಲಿ ಅದರ ಮೇಲೆಲ್ಲಾ ಜಾಗ ಇರುವ ತನಕ ನೀಡಿದವರ ಜಾತಕವನ್ನೇ ತುಂಬಿಸುವುದು ಇವರ ಜಾಯಮಾನ ! 'ಉಡುಗೊರೆ' ಒಂದು ರೀತಿಯ ಪರಸ್ಪರ ವಿನಿಮಯ ಕಾರ್ಯಕ್ರಮವಿದ್ದಂತೆ. ಪಡೆದುಕೊಂಡವರು ಪುನಃ ಹಿಂದುರಿಗಿಸದಿದ್ದರೆ 'ಶಾಪ' ಹಾಕುವುದು ಇದೆ ! ಹಿಂದೆ ಉಡುಗೊರೆಯನ್ನು ನಗದು ರೂಪದಲ್ಲಿ ನೀಡುತ್ತಿದ್ದಾಗ ಅದನ್ನು 'ಮುಯ್ಯಿ' ಎಂದೆಲ್ಲಾ ಕರೆದಿದ್ದರು. ಇಂದು ಇತಿಹಾಸ ಪುನರಾವರ್ತನೆ ಆಗುತ್ತಿದೆ. ಮತ್ತೆ ಉಡುಗೊರೆ ನೀಡುವವರು ಹಣ ಬಹಳ ದ್ರವ್ಯ (ಉಪದ್ರವ ಅಲ್ಲ) ಎಂದರಿತು ಹಣವನ್ನೇ ಗಿಫ್ಟ್ ಚೆಕ್ ಮೂಲಕ ನೀಡುವುದು ರೂಢಿಗೆ ಬಂದಿದೆ. 'ಪ್ರೀತಿ ಪ್ರೇಮಗಳ, ಸ್ನೇಹ ಆತ್ಮೀಯತೆಯ ದ್ಯೋತಕವಾಗಿರಬೇಕಾಗಿರುವ ಉಡುಗೊರೆ ಇಂದು ಒಂದು ಶಾಪವಾಗುತ್ತಿರುವುದು ನಾಗರಿಕ ಸಮಾಜದ ಮತ್ತೊಂದು ತಪ್ಪು ಹೆಜ್ಜೆ !' ರಂಗಸ್ವಾಮಿ ಒಂದು ಸಮಾರಂಭದಲ್ಲಿ ನೆನಪಿನ ಕಾಣಿಕೆ ಪಡೆದು ಭಾಷಣ ಬಿಗಿಯುತ್ತಿದ್ದುದನ್ನು ನಾನು ತೆಪ್ಪಗೆ ನೋಡುತ್ತಾ ಕುಳಿತು ಒಂದು ಕಿರುನಗೆ ನಕ್ಕೆನು !

ಕ. ಬ. ವೀರಣ್ಣ ಕಣ್ಣಾಗಾಲ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ
ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೩೯

ಸಂಪಾದಕರು,
'ಹೊಸತು' ಇವರಿಗೆ

೧೦-೩-೨೦೦೧

*ಪಾರ್ಥ ಇವರ 'ವಾರಣಾಸಿಯಲ್ಲಿ ನಂದಿಯ ಪಕ್ಕದಲ್ಲಿ ಕುಳಿತ ಪಂಡ' ಲೇಖನ. ಅಲ್ಲಿನ ವಿಶ್ವನಾಥ ದೇವಾಲಯ ಕುರಿತು ಬೇಕಾದಷ್ಟು ಕತೆಗಳಿವೆ. ಅಂಥವುಗಳಲ್ಲಿ ಇದೊಂದು. ವಾರಣಾಸಿಯ ವಿಶ್ವನಾಥ ದೇವಾಲಯವನ್ನು ಮೊಗಲ ಸಾಮ್ರಾಟ ಔರಂಗಜೇಬ ನೆಲಸಮಗೊಳಿಸಲು ಆಜ್ಞೆ ನೀಡಿದ ಎಂದು ಪ್ರತೀತಿ ಇದೆ. ಪಾಟ್ನ ವಸ್ತುಸಂಗ್ರಹಾಲಯದ ಕ್ಯುರೇಟರ್ ಡಾ|| ಪಿ. ಎಲ್. ಗುಪ್ತ ಇವರು ದೃಢಪಡಿಸಿರುವ ಒಂದು ಮಾಹಿತಿ ಹೀಗಿದೆ: ಬಂಗಾಳಕ್ಕೆ ಪ್ರಯಾಣ ಮಾಡುತ್ತಿದ್ದ ಔರಂಗಜೇಬ ವಾರಣಾಸಿಯ ಮೂಲಕ ಹಾದುಹೋಗುತ್ತಿದ್ದ. ಅವನೊಂದಿಗಿದ್ದ ಹಿಂದೂ ರಾಜರು ವಿಶ್ವನಾಥ ದೇವಾಲಯವನ್ನು ಸಂದರ್ಶಿಸುವ ಅಪೇಕ್ಷೆ ವ್ಯಕ್ತಗೊಳಿಸಿದಾಗ ಔರಂಗಜೇಬ ಸಮ್ಮತಿ ನೀಡಿದನಂತೆ. ತಮ್ಮ ರಾಣೀವಾಸದವರ ಜೊತೆಗೆ ತೆರಳಿದ್ದ ಹಿಂದೂ ರಾಜರುಗಳು ಪೂಜಾವಿಧಿ ಮುಗಿಸಿ ಹಿಂದಿರುಗಿದಾಗ ಒಬ್ಬಾಕೆ ಮಾತ್ರ ಇರಲಿಲ್ಲ. ಮೊಗಲ ಸಾಮ್ರಾಟ ಒಡನೆಯೇ ಆಕೆಯನ್ನು ಪತ್ತೆ ಹಚ್ಚಲು ಸೈನಿಕರನ್ನು ಕಳುಹಿಸಿದನಂತೆ. ಎಲ್ಲ ಹುಡುಕಾಡಿ ಕಡೆಗೆ ಗೋಡೆಯಲ್ಲಿದ್ದ ವಿನಾಯಕ ವಿಗ್ರಹವನ್ನು ಅಲುಗಾಡಿಸಿದಾಗ ಒಂದು ಕಿಂಡಿ ಕಂಡುಬಂತು. ಅದರ ಹಿಂದೆಯೇ ಮೆಟ್ಟಿಲುಗಳು. ರಾಣಿ ಪತ್ತೆಯಾದಳು. ಆದರೆ ಕಣ್ಣೀರಿಡುತ್ತಿದ್ದ ಆಕೆಯ ಮಾನಭಂಗವಾಗಿತ್ತು. ವಿಶ್ವನಾಥ ದೇವಾಲಯದ ಮೂಲ ವಿಗ್ರಹದಡಿ ನಡೆದ ಈ ದುಷ್ಕೃತ್ಯದಿಂದ ಹಿಂದೂ ರಾಜರುಗಳು ಆಕ್ರೋಶಗೊಂಡರಂತೆ. ಒಡನೆಯೇ ಔರಂಗಜೇಬ ಅಪವಿತ್ರಗೊಂಡ ದೇವಾಲಯದಿಂದ ವಿಗ್ರಹವನ್ನು ಬೇರೆಡೆಗೆ ಒಯ್ಯುವಂತೆ ಆದೇಶಿಸಿ ದೇವಾಲಯವನ್ನು ನೆಲಸಮಗೊಳಿಸಲು ಅನುಮತಿ ನೀಡಿದನಂತೆ. ಅನಂತರ ಅಲ್ಲಿನ ಮಹಂತನನ್ನು ಬಂಧಿಸಿ ಶಿಕ್ಷೆ ನೀಡಿದನಂತೆ.*

-ರಮೇಶ
ಬೆಂಗಳೂರು




**ಮಾ**ಗಿಯ ಇಬ್ಬನಿ ಎಲ್ಲೆಡೆ ಬಿದ್ದಿದೆ.

ಭೂಮಿ - ಆಕಾಶಗಳ ಅಂತರವನ್ನು ಅಳಿಸಿಹಾಕುವಂತಿದೆ ಇಬ್ಬನಿಯ ಗೋಡೆ. ಆಕಾಶದಿಂದ ಭೂಮಿಯುದ್ದಕ್ಕೂ ಬಿಳೀ ಪಂಚೆಯೊಂದನ್ನು ತೂಗುಬಿಟ್ಟಂತಿದೆ.

''ಮಲಗಾಕೆ ಸೊಳ್ಳೆ ಪರದೆ ಕಟ್ಟಿ
ಒದಿಯಾಕೆ ಒಗೆದಿದ್ ದುಪಟೀ ಕೊಟ್ಟಿ
ಪಕ್ದಾಗೆ ಗಂಧದ ದೂಪ ಆಕ್ದಂಗೆ –''

ಇಬ್ಬನಿಯ ಸಾಮ್ರಾಜ್ಯ ತಾನೇ ತಾನಾಗಿದೆ.

ಈ ಮಾಗಿಯ ನಿರಂಕುಶ ಸಾಮ್ರಾಜ್ಯದಲ್ಲಿ,

ಈ ಇಬ್ಬನಿಯ ಕ್ರೂರ ದಬ್ಬಾಳಿಕೆಯಲ್ಲಿ ಅದೋ ! ಬಾಗಿಲು ತೆರೆದರೆ ಹೊರಗೆ ತೋಟದಲ್ಲಿ ಒಂದು ಬೆಡಗಿ ಗುಲಾಬಿ ಅರಳಿನಿಂತಿದೆ. ಈ ಪಕ್ಕದಿಂದ ಅದರ ಈ ಕೆನ್ನೆಯನ್ನು ತಂಗಾಳಿ ಕಚ್ಚುತ್ತಿದೆ, ಆ ಪಕ್ಕದಿಂದ ಆ ಕೆನ್ನೆಯನ್ನು ಇಬ್ಬನಿ ಕಚ್ಚುತ್ತಿದೆ. ಎರಡು ಆಕ್ರಮಣಗಳಿಂದ ರಂಗೇರಿದ ಗಲ್ಲಗಳ ಬಣ್ಣದಿಂದ ನಳನಳಿಸುತ್ತಿದೆ.

ನಿನ್ನೆ ಇರುಳು ಮನೆಬಾಗಿಲನ್ನು ಮುಚ್ಚುವ ಮೊದಲು ನೋಡಿದ್ದೆ. ಮೊಗ್ಗಾಗಿ ಅಂತರ್ಮುಖಿಯಾದಂತಿತ್ತು. ಹೊರಗೆ ತೋರಿಸಿಕೊಳ್ಳಲೊ ಬೇಡವೋ ಎಂದು ಅರ್ಧ ಅಳುಕಿನಿಂದ ಅರ್ಧ ಹೊಯ್ದಾಟದಿಂದ ಪುಷ್ಪಪಾತ್ರೆಯೊಳಗೆ ಮುಖ ಮುಚ್ಚಿಕೊಂಡಂತಿತ್ತು.

ಯಾರು ಆ ಹೊಯ್ದಾಟವನ್ನು ಶಮನಗೊಳಿಸಿದವರು ? ಯಾರು ಆ ಅಳುಕನ್ನು ದೂರ ಮಾಡಿದವರು ? ಅದರ ಕೋಮಲ ದಳಗಳನ್ನು ಒಂದೊಂದಾಗಿ ಬಿಚ್ಚಿ, ನಿಧಾನವಾಗಿ ನಾಚಿಕೆಯನ್ನು ಕಳೆದು ಇನ್ನೂ ಮೂಡದಿರುವ ಸೂರ್ಯನ ಸೆಜ್ಜೆಮನೆಗೆ ಅದನ್ನು ಸಜ್ಜುಗೊಳಿಸಿದವರು ಯಾರು ? ರಾತ್ರೆ ಮನೆಯ ಬಾಗಿಲು ಮುಚ್ಚಿದ ಬಳಿಕ, ಮಾನವ ನಿರ್ಮಿತ ಶಬ್ದಗಳೆಲ್ಲ ಸತ್ತು ಮೌನದ ಮುಸುಗಿನೊಳಗಡೆ ಪ್ರಪಂಚ ನಿಸ್ಪಂದವಾಗಿದ್ದಾಗ ಯಾರು ಅದರ ಕಿವಿಯಲ್ಲಿ ಪ್ರಣಯದ ಓಂಕಾರವನ್ನು ಪಿಸುಗುಟ್ಟಿದವರು ? ತಮ್ಮ ಹೆಜ್ಜೆಗಳ ಸದ್ದಿನಿಂದ ಆ ಎಳೆಯ ಎದೆಯನ್ನು ಯಾರು ಡವಗುಟ್ಟಿಸಿದವರು ?

ಪ್ರಣಯೋನ್ಮಾದದ ಸ್ವೇದ ಬಿಂದುಗಳು ಅದರ ದಳಗಳಲ್ಲಿ ಇನ್ನೂ ಹಸಿಯಾಗಿವೆ. ಯಾರು ? ಯಾರದು ಈ ಕರಾಮತ್ತು ?

''ಯಾರು ಬಂದರು ಇಲ್ಲಿ ಕಳೆದ ಈ ಇರುಳು ?
ಎಲೆ ಚೆಲುವೆ ! ನೀನು ಅದನುಸುರಿ ಮುಂತೆರಳು !''

ಮನುಷ್ಯರಲ್ಲ! ಯಾವ ನರಹುಳುವಿಗೂ ಕೈಗೂಡುವ ಕೆಲಸ ಅಲ್ಲ ಇದು. ಮೊಗ್ಗು ಅರಳಿ ಹೂವಾಗುವ ಹೊತ್ತು ಮನುಷ್ಯ ಮಾತ್ರರ ಲೆಕ್ಕಾಚಾರಕ್ಕೆ ಒಳಪಡುವುದಿಲ್ಲ. ಯಾವ ಮೊಗ್ಗು ಯಾವಾಗ ಅರಳಬೇಕೆಂದು ಮೌನವಾಗಿ ಇಬ್ಬನಿ ಸುರಿಸುವ ಆಕಾಶಕ್ಕೆ ಗೊತ್ತು ; ಮೌನವಾಗಿ ಬೇರಿನಿಂದ ಮೇಲೇರುವ ನೀರಿಗೆ ಗೊತ್ತು ; ಕಳುವಿಲೆ ಬಂದು ಮುದ್ದಿಸಿ ಹೋಗುವ ತಂಗಾಳಿಗೆ ಗೊತ್ತು ; ಹೊತ್ತಿಗೆ ಬಂದು ನೇವರಿಸಿ ಹೋಗುವ ಬೆಳಕಿಗೆ ಗೊತ್ತು. ಮಾತಿನ ಅಟ್ಟಹಾಸದ ಆಚೆಗಿರುವ ಮೌನದ ಸಾಮ್ರಾಜ್ಯದ ಆಗುಹೋಗುಗಳು ಅವೆಲ್ಲ.

ವಿಜೃಂಭಿಸುವ ಮಾತುಗಳು 'ಅರಳು' ಎಂದರೆ ಮೊಗ್ಗು ಅರಳೀತೇ ? ಹೊಗೆ ಕಾರಿ ಕಿಡಿ ಉಗುಳಿ ಫೂತ್ಕರಿಸುವ ಗಿರಣಿ 'ಅರಳು' ಎಂದರೆ ಅರಳೀತೇ ? ಗಾಲಿಗಳಲ್ಲಿ ಉರುಳಿ ಸಾಗುವ ಸಾವಿರ ಸಾವಿರ ವಾಹನಗಳ ಸಾಲು 'ಅರಳು' ಎಂದರೆ ಅರಳೀತೇ ? ಆಗದ ಮಾತು.

ಕಾವ್ಯವೂ ಹಾಗೇ. ಮೊಗ್ಗು ಅರಳಿದ ಹಾಗೆ, ಹೂವಾದ ಹಾಗೆ. ಮುಚ್ಚಿದ್ದ ಬಾಗಿಲು ತೆರೆದಾಗ ಫಲ್ಲನೆ ಗೆಜ್ಜೆಸದ್ದು, ಮೈ ನವಿರೇಳಿಸುವ ಸುವಾಸನೆ, ಕೋಮಲ ಸ್ಪರ್ಶದ ಸುಖಾನುಭವ. ಕತ್ತಲಾಗಿದ್ದ ಕೋಣೆಯೊಳಗೆ ಇದ್ದಕ್ಕಿದ್ದ ಹಾಗೆ ಬೆಳಕಿನ ಆವಾಹನೆ. ಮೌನದ ಗಡಿಗೆ ಒಡೆದು ಮೊಸರು ಹೊರಗೆ ಚೆಲ್ಲುತ್ತದೆ. ಹುಲ್ಲಿನ ದಳದ ಮೇಲೆ ತಣ್ಣಗೆ ಕುಳಿತ ಮಂಜಿನ ಹನಿ ಸೂರ್ಯನನ್ನೇ ಹಿಡಿಯಲು ತವಕಿಸುತ್ತದೆ.

ಮೌನದ ಮೊಗ್ಗು ಶಬ್ದಗಳಲ್ಲಿ ಅರಳುವುದು ಯಾವಾಗ ? ಹೇಳವ ಮೌನ ಶಬ್ದಗಳ ಬೆರಳು ಹಿಡಿದು ನಡೆದುಬರುವುದು ಯಾವಾಗ ? ಇದು ಮನುಷ್ಯನ ಲೆಕ್ಕಾಚಾರಕ್ಕೆ ಸಿಗುವ ಮಾತಲ್ಲ. ಬಾಗಿಲು ತೆಗೆಯಬೇಕು. ಕತ್ತಲು ಬಯಲಾಗಬೇಕು, ಬೆಳಕು ಹರಿಯಬೇಕು. ಶಬ್ದ ಶಬ್ದವಾಗಿದ್ದರಾಗಲಿಲ್ಲ, ಅದು ಮಾತಾಗಬೇಕು; ಮಾತು ಉಸಿರಾಗಬೇಕು; ಉಸಿರು ಜೀವದ ಬೇರು ಹಿಡಿದು ಮೇಲಕ್ಕೇರಬೇಕು. ಕಾವು ಕಳೆದು ಬೆಳಕಾಗಬೇಕು; ಹಾಲು ಹೆಪ್ಪಾಗಬೇಕು. ಆಗ ಕಾವ್ಯ ಅರಳುತ್ತದೆ.

ಬಾಗಿಲ ಹೊರಗೆ ಶಬ್ದಗಳು ಸಾಲು ಹಿಡಿದು ಮೆರವಣಿಗೆ ಹೊರಟರೆ ಕಾವ್ಯವಾದೀತೇ ? ಶಬ್ದಗಳು ಲೌಕಿಕ ಪ್ರಪಂಚದ ವಸ್ತು, ಮೌನ ಅಲೌಕಿಕ ಪ್ರಪಂಚದ ವಸ್ತು. ಶಬ್ದಗಳ ಆಯುಧ ಹಿಡಿದು 'ಹೊರಗೆ ಬಾ' ಎಂದು ಜಬರಿಸಿದರೆ ಕಾವ್ಯ ಬಂದೀತೇ ? ಆಗದ ಮಾತು.

ಮಗುವೂ ಮೊಗ್ಗಿನ ಹಾಗೆ. ಅದು ಹೇಗೆ ಅರಳಬೇಕೆಂದು ನಿರ್ದೇಶಿಸುವುದು ಮನುಷ್ಯನಿಂದ ಆಗದ ಮಾತು. ಮಗುವೆಂದರೆ ಹೂಗಳಿಂದ ತುಂಬಿದ ಒಂದು ಹುಲ್ಲುಗಾವಲು. ಅದು ಬಣ್ಣಗಳದೇ ಸಾಮ್ರಾಜ್ಯ. ಅಲ್ಲಿ ದೂಳಿಗೆ ಆಸ್ಪದ ಇಲ್ಲ, ಬೆವರಿನ ವಾಸನೆ ಇಲ್ಲ, ಹೆಜ್ಜೆಗಳ ಗುರುತು ಇಲ್ಲ. ಚಿಟ್ಟೆಗಳಿಗೆ ಮಾತ್ರ ಅಲ್ಲಿ ಪ್ರವೇಶವಿದೆ. ಅದೊಂದು ಕನಸುಗಳ ಕೋಟೆ. ಅದಕ್ಕೆ ಬಣ್ಣಗಳ ಕಾವಲು. ಶುಷ್ಕ ಪಾಂಡಿತ್ಯಕ್ಕೆ ಅದರೊಳಗೆ ಪ್ರವೇಶವಿಲ್ಲ, ಬಿರುಗಾಳಿಯ ಅಬ್ಬರ ಒಳಹೋಗದು.

ದಶದಿಕ್ಕುಗಳಿಂದ ಬೀಸುವ ಗಾಳಿಯೂ ಅಲ್ಲಿ ಸುಯ್ಯುತ್ತದೆ; ಯಾವ ಗಾಳಿಯ ಬೆನ್ನೇರಿ ಬಂದ ಯಾವ ಬೀಜ ಆ ಬಯಲಲ್ಲಿ ಬೇರೂರುವುದೊ ! ಬಲ್ಲವರಾರು ? ನೂರೆಂಟು ಶಬ್ದಗಳು ಆ ಬಯಲಿನಲ್ಲಿ ಹೊಕ್ಕು ಹೊರಡುತ್ತವೆ. ಯಾವ ಶಬ್ದ ಕಾಲೂರಿ ಮಾತಾಗುವುದೊ ; ಯಾವ ಮಾತು ಕಾಲೂರಿ ಉಸಿರಾಗುವುದೊ – ಯಾವ ಮನುಷ್ಯನೂ ಅರಿಯಲಾರ. ತುಂಡು ಮೋಡಗಳು ಅಂಡಲೆಯುತ್ತವೆ. ಆ ಮೋಡಗಳಿಗೆ ಬಣ್ಣ ಬಣ್ಣದ ರೆಕ್ಕೆಗಳಿರುತ್ತವೆ. ಯಾವ ಮೋಡದಿಂದ ಜಾರಿದ ಯಾವ ಒಂದು ಹನಿ ಶಕ್ತಿಯಾಗುವುದೊ ! ಹೇಳಬಲ್ಲವರಾರು ?

ಗುಲಾಬಿಯ ಮೊಗ್ಗು ನಮ್ಮ ತೋಟದಲ್ಲಿ ಬೆಳೆದದ್ದೆಂದು ನಾವು ಹೇಳಬಹುದು. ಆದರೆ ನಾವೇನು ಮಾಡಿದ್ದೇವೆ ? ಮೊಗ್ಗು ತಾನೇ ತಾನಲ್ಲದೆ ಅರಳಲಾರದು. ಕಾವ್ಯ ನಮ್ಮದೆಂದು ಹೇಳುತ್ತೇವೆ. ಅದರಲ್ಲಿ ಮೂಡಿಬಂದ ಮುಗುಳ್ನಗೆ ನಮ್ಮದೇ ? ಬೆವರು ನಮ್ಮದೇ ? ದೂಳು ನಮ್ಮದೇ ? ಹೆಜ್ಜೆ ಗುರುತು ನಮ್ಮದೇ ? ನಿಟ್ಟುಸಿರು, ನೆರಳು ನಮ್ಮದೇ ?

ಮಗು ನಮ್ಮದೆನ್ನುತ್ತೇವೆ. ಅದನ್ನು ರೂಪಿಸಿದ ಗಾಳಿಯನ್ನು ನಾವು ಮಾಡಿದ್ದೇವೆಯೇ ? ಅದನ್ನು ಆಕಾಶದಲ್ಲಿ ತೇಲಿಸಿದ ಮೋಡ ನಾವು ಮಾಡಿದ್ದೇ ? ಬಯಲಲ್ಲಿ ಬೇರುಬಿಟ್ಟ ಬೀಜವನ್ನು ನಾವು ಮಾಡಿದ್ದೇವೆಯೆ ?

ಬಾಗಿಲು ತೆರೆಯುವುದಷ್ಟೇ ನಾವು ಮಾಡಬಹುದಾದ ಕಾರ್ಯ. ಬೀಸುವ ಗಾಳಿ ಬೀಸುತ್ತದೆ - ಬೀಜ ಹಾಕಿ ತೆರಳುತ್ತದೆ. ಸುರಿವ ಇಬ್ಬನಿ ಸುರಿಯುತ್ತದೆ - ತೊಯ್ಯಿಸಿ ಮೆದುವಾಗಿ ಮಾಡುತ್ತದೆ. ಬೀಳುವ ಬೆಳಕು ಬೀಳುತ್ತದೆ - ಕಾವು ಕೊಟ್ಟು ಹೊರಟುಹೋಗುತ್ತದೆ. ನುಡಿವ ಶಬ್ದಗಳು ನುಡಿಯುತ್ತವೆ - ಉಸಿರು ಕೊಟ್ಟು ಮರಳುತ್ತವೆ.

ಮೊಗ್ಗು ಗಾಳಿಯಾಗದೆ, ನೀರಾಗದೆ, ಬೆಳಕಾಗದೆ, ಉಸಿರಾಗದೆ ಗುಲಾಬಿಯಾಗುತ್ತದೆ.

ಶಬ್ದ ಕಾವ್ಯವಾಗುತ್ತದೆ.

ಮಗು ಮಾನವನಾಗುತ್ತದೆ.

ಎಂ. ವಿ. ಚಕ್ರಪಾಣಿ
ನಂ. ೧/೧೬೦, ಕುರುದಗಡ್ಡಿ , ವೆಂಕಟೇಶ್ವರ ಗುಡಿ ಸಮೀಪ
ಹೌಸಿಂಗ್ ಬೋರ್ಡ್ ಕಾಲೋನಿ, ಹಗರಿಬೊಮ್ಮನಹಳ್ಳಿ - ೫೮೩ ೨೧೨

# ಶಿಕ್ಷಣ ಒಂದು ವೈಜ್ಞಾನಿಕ ದೃಷ್ಟಿ

## ಇಪ್ಪತ್ತೊಂದನೇ ಶತಮಾನದ ಅವಶ್ಯಕತೆಗಳು

**ಡಾ|| ಕೆ. ಕೆ. ಥೇಕೆಡತ್**

'ವೈಜ್ಞಾನಿಕ ಮಾರ್ಗ' ಎಂದರೇನು ಎಂಬ ತಾತ್ವಿಕ ಚರ್ಚೆ ನಡೆಸಬೇಕಾದುದು ಈ ಸ್ಥಳದಲ್ಲಿ ಅಲ್ಲ. ಆದರೆ, ಈ ಜಗತ್ತಿನ ವಾಸ್ತವಿಕತೆಯನ್ನು ಮತ್ತು ಅದರ ಸಮಸ್ಯೆಗಳನ್ನು ತಿಳಿಯಬಹುದು. ಮತ್ತು ಅವುಗಳನ್ನು ಹೊರಗಿನ ಯಾವುದೇ ಶಕ್ತಿಗಳ ಮಧ್ಯಪ್ರವೇಶ ಇಲ್ಲದೆ ಮಾನವರೇ ಪರಿಹರಿಸಲು ಶಕ್ತರು ಎಂಬ ವಿಶ್ವಾಸ ಮೂಡಿಸಿಕೊಳ್ಳುವುದೇ 'ವೈಜ್ಞಾನಿಕ ಮಾರ್ಗ' ಎಂದು ಸಾರ್ವತ್ರಿಕವಾಗಿ ಹೇಳಬಹುದು.

ವಿವಿಧ ವಿದ್ಯಮಾನಗಳೊಳಗೆ, ಮುಖ್ಯವಾಗಿ ಸಾಮಾಜಿಕ ವಿದ್ಯಮಾನಗಳು ಮತ್ತು ಭೌತಿಕ ಆರ್ಥಿಕ ವಾಸ್ತವಿಕತೆಗಳ ನಡುವೆ ಮೂಲಭೂತವಾದ ಅಂತರ್ ಸಂಬಂಧಗಳಿವೆ ಎಂದು ಗುರುತಿಸುವುದು 'ವೈಜ್ಞಾನಿಕ ಮಾರ್ಗ'ದ ಒಂದಂಶವಾಗಿದೆ.

ಆದುದರಿಂದ ಶಿಕ್ಷಣದ ಸಮಸ್ಯೆಗಳಿಗೆ 'ವೈಜ್ಞಾನಿಕ ಮಾರ್ಗ' ಎಂದರೆ, ನಾವು ಇಂದು ಒದಗಿಸುತ್ತಿರುವ ಶಿಕ್ಷಣದ ಸಮಸ್ಯೆಗಳಿಗೂ ಹಾಗೂ ಅಂತರ್ಗತವಾಗಿರುವ ಆರ್ಥಿಕ ವಾಸ್ತವಿಕತೆಗಳಿಗೂ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಸದ್ಯ ಕಂಡುಬರುತ್ತಿರುವ ವೈರುಧ್ಯ ಹಾಗೂ ಬಿಕ್ಕಟ್ಟುಗಳಿಗೂ ನಡುವೆ ನಿಕಟ ಸಂಬಂಧಗಳಿವೆ ಎಂದು ಅರ್ಥೈಸುವುದು.

ಒಂದು ಶಿಕ್ಷಣ ವ್ಯವಸ್ಥೆಯು ಸಾಮಾಜಿಕ ವಾಸ್ತವಿಕತೆಯನ್ನು ಮತ್ತು ಅದರೊಳಗಿನ ಚಲನಶೀಲ ಬೆಳವಣಿಗೆಗಳನ್ನು ಪ್ರತಿಬಿಂಬಿಸುತ್ತದೆ.
ನಮ್ಮ ದೇಶದ ಶಿಕ್ಷಣದ ಬೆಳವಣಿಗೆಗೂ ಮತ್ತು ನಮ್ಮ ದೇಶದ ಪ್ರಾಚೀನ ಕಾಲದ, ವಸಾಹತು ಕಾಲದ ಹಾಗೂ ಸ್ವಾತಂತ್ರ್ಯೋತ್ತರದ ವಿವಿಧ ಹಂತಗಳ ರಾಜಕೀಯ ಬೆಳವಣಿಗೆಗಳಿಗೂ ಪರಸ್ಪರ ಸಂಬಂಧಗಳಿವೆ ಎಂದು ನವಕರ್ನಾಟಕ ಪ್ರಕಾಶನದ ''ಶತಮಾನದ ಅಂಚಿನಲ್ಲಿ ಶಿಕ್ಷಣ'' ಎಂಬ ನನ್ನ ಇತ್ತೀಚೆಗಿನ ಒಂದು ಪುಸ್ತಿಕೆಯಲ್ಲಿ ತಿಳಿಸಲು ಪ್ರಯತ್ನಿಸಿದ್ದೇನೆ. ನಮ್ಮ ಶಿಕ್ಷಣ ವ್ಯವಸ್ಥೆಗೂ, ಸ್ವಾತಂತ್ರ್ಯಾನಂತರ ಅನುಸರಿಸಿಕೊಂಡು ಬಂದ ಬಂಡವಾಳಶಾಹಿ ಅಭಿವೃದ್ಧಿ ಮಾರ್ಗದಲ್ಲಿ ಅಂತರ್ಗತವಾದ ಬಿಕ್ಕಟ್ಟಿಗೂ ನಿಕಟಸಂಬಂಧ ಇದೆ ಎಂದು ನಾನು ಆ ಪ್ರಬಂಧದಲ್ಲಿ ತಿಳಿಸಿದ್ದೇನೆ. ೧೯೮೦ರ ದಶಕದ ನಂತರದ ಕಾಲಘಟ್ಟದಲ್ಲಿ ಶಿಕ್ಷಣದಲ್ಲಿ ಕಂಡುಬಂದ ಸಮಸ್ಯೆಗಳ ಕುರಿತು ನಾನು ಈ ಪ್ರಬಂಧದಲ್ಲಿ ವಿವರಿಸಿದ್ದೇನೆ.

**೨೧ನೇ ಶತಮಾನದ ಅವಶ್ಯಕತೆಗಳು**

ಯಾವುದೇ ವಿಷಯದ ಕುರಿತು ಭವಿಷ್ಯ ಹೇಳಲು ಒಂದು ಶತಮಾನ ನಿಜವಾಗಿಯೂ ಬಹಳ ದೀರ್ಘಕಾಲ. ಆದರೆ ನಮ್ಮ ಇಂದಿನ ಬದುಕಿನ ಕುರಿತು ಯೋಜನೆ ಮಾಡಲು 'ವೈಜ್ಞಾನಿಕ ಮಾರ್ಗ' ಕೆಲವು ಕರಡು ಹಾಗೂ ವಿಶ್ವಾಸಾರ್ಹ ಮಾರ್ಗದರ್ಶನಗಳನ್ನು ಕಾಣಲು ನೆರವಾಗುವುದು. ಉದಾಹರಣೆಗೆ, ಒಂದು ಪ್ರಮುಖ ಅಂಶ ನೆನಪಿಡಬೇಕಾದುದೇನೆಂದರೆ, ಸರ್ವನಾಶದ ವಿರುದ್ಧ ಮಾನವನ ನಿರಂತರ ಹೋರಾಟ. ನಮ್ಮ ಇರುವಿಕೆಗಾಗಿ ಭೂಗ್ರಹವನ್ನು ಉಳಿಸಬೇಕು ಮತ್ತು ಭೂಮಿಯ ಮೇಲೆ ಮಾನವ ಜನಾಂಗ ನಿರಂತರವಾಗಿರಬೇಕು. ಈ ವಿಷಯ ಪರಿಸರ ರಕ್ಷಣೆಯ ವಿಷಯದತ್ತ ನಮ್ಮನ್ನು ಕೊಂಡೊಯ್ಯುವುದು. ಭೂಮಿಯ ಶಾಖ ಹೆಚ್ಚುತ್ತಿರುವುದು ಇದರಲ್ಲಿ ಒಂದು ನಿರ್ದಿಷ್ಟ ಸಮಸ್ಯೆ. ಈ ದಿಸೆಯಲ್ಲಿ ಸಮುದ್ರತೀರದ ಮಾಲ್ದೀವ್ಸ್‌ನಂತಹ ಸಣ್ಣ ದ್ವೀಪಗಳ ಕುರಿತು ಜಾಗತಿಕ ಸಮುದಾಯ ವಿಶೇಷ ಗಮನ ಕೊಡಬೇಕು. ಅಮೆರಿಕದ ಸಂಯುಕ್ತ ಸಂಸ್ಥಾನಗಳು ಮತ್ತು ಗ್ರೇಟ್ ಬ್ರಿಟನ್ ವಾತಾವರಣವನ್ನು ಅತ್ಯಂತ ಕಲುಷಿತಗೊಳಿಸುತ್ತಿರುವ ದೇಶಗಳು ಎನ್ನುವುದು ಈಗ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದೆ. ಈ ಎರಡೂ ದೇಶಗಳು ತಮ್ಮಿಂದ ಹೊರಹೊಮ್ಮುತ್ತಿರುವ ಬಿಸಿ ಅನಿಲಗಳ ಪ್ರಮಾಣವನ್ನು ನಿಯಂತ್ರಿಸಲು ತಡೆ ಒಡ್ಡುತ್ತಿವೆ. ಕಾರಣ, ಈ ದೇಶಗಳ ಸರಕಾರಗಳು ತಮ್ಮ ಬಂಡವಾಳಶಾಹಿ ವ್ಯವಸ್ಥೆಯನ್ನು ರಕ್ಷಿಸಲು ಬಯಸುತ್ತಿವೆ. ಈ ದೇಶಗಳಲ್ಲಿ ಉತ್ಪಾದನೆ ಮಾರುಕಟ್ಟೆಗೆ ಮತ್ತು ಲಾಭ ಗಳಿಕೆಗೆ ಹೊಂದಿಕೊಂಡಿದೆಯೇ ಹೊರತು ಸಾಮಾಜಿಕ ಅವಶ್ಯಕತೆಗಳಿಗಲ್ಲ. ಅಮೆರಿಕದ ಹೊಸ ಅಧ್ಯಕ್ಷರು ಭೂಮಿಯ ವಾತಾವರಣವನ್ನು ಸ್ವಚ್ಛಗೊಳಿಸುವುದರಲ್ಲಿ ತನಗೆ ಆಸಕ್ತಿಯಿಲ್ಲ ಎಂದು, ಆ ಕುರಿತು ತನ್ನ ಸರಕಾರ ಯಾವುದೇ ಒಪ್ಪಂದಕ್ಕೆ ಸಹಿ ಹಾಕುವುದಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

*''ಇಪ್ಪತ್ತನೆಯ ಶತಮಾನಕ್ಕೆ ವಿಜ್ಞಾನ ಶಿಕ್ಷಣ'' ಎಂಬ ವಿಷಯವನ್ನು ಕುರಿತ ವಿಚಾರಗೋಷ್ಠಿಯೊಂದು ಬೆಂಗಳೂರಿನಲ್ಲಿ ಫೆಬ್ರವರಿ ೨೯-೨೫ರಂದು ಜರುಗಿತು. ಆಗ್ಗೆ ಶಿಕ್ಷಣದ ಸಮಸ್ಯೆಯನ್ನು ಅರ್ಥೈಸಿಕೊಳ್ಳಲು ಅನುವಾಗುವ ಪ್ರಬಂಧವೊಂದನ್ನು ಡಾ|| ಥೇಕೆಡತ್ ಮಂಡಿಸಿದರು. ''ಟೀಚರ್ಸ್ ಆಫ್ ದಿ ವರ್ಲ್ಡ್'' ಎಂಬ ತ್ರೈಮಾಸಿಕದ ಸಂಪಾದಕರು ಹಾಗೂ ಅಖಿಲ ಭಾರತ ಕಾಲೇಜು ಶಿಕ್ಷಕರ ಒಕ್ಕೂಟದ ಮಾಜಿ ಅಧ್ಯಕ್ಷರೂ ಆದ ಶ್ರೀಯುತರು ಖ್ಯಾತ ಗಣಿತ ಶಾಸ್ತ್ರಜ್ಞರು ಮತ್ತು ಮುಂಬೈ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕರು.*

ಭೂಗ್ರಹದಲ್ಲಿ ಮಾನವಜನಾಂಗ ಉಳಿಯುವ ಸರಳ ಪ್ರಶ್ನೆಯೂ ಬಂಡವಾಳಶಾಹಿ ಸಾಮಾಜಿಕ ವ್ಯವಸ್ಥೆಯ ವಿಷಯದತ್ತ ನಮ್ಮ ಗಮನ ಸೆಳೆಯುವುದು. ಪರಿಸರ ರಕ್ಷಣೆಯ ಅಧ್ಯಯನವನ್ನು ಈ ಅವೈಚಾರಿಕ ಆರ್ಥಿಕ ವ್ಯವಸ್ಥೆಯ ಸಂಭವನೀಯತೆಗಳಿಗೆ ಸಂಬಂಧಿಸದೆ ಸಾಧ್ಯವಿಲ್ಲ. ಭೂಮಿ ಕಾವೇರುತ್ತಿರುವುದರಿಂದ ಅದನ್ನು ರಕ್ಷಿಸುವುದು ೨೧ನೇ ಶತಮಾನದ ತುರ್ತಿನ ಅವಶ್ಯಕತೆ ಆಗಿದೆ. ನಮ್ಮ ಮಕ್ಕಳಿಗೆ ಯಾವ ಶಿಕ್ಷಣ ಪದ್ಧತಿಯನ್ನು ರೂಪಿಸಬೇಕೆಂದು ನಮಗೆ ಇದರಿಂದ ತಿಳಿಯುವುದು.

**ಹೊಸ ಆರ್ಥಿಕ ನೀತಿ ಮತ್ತು ಪ್ರಧಾನ ಮಂತ್ರಿಯ ಮಂಡಳಿಯ ವರದಿ**

ಪ್ರಧಾನ ಮಂತ್ರಿ ''ವ್ಯಾಪಾರ ಮತ್ತು ಕೈಗಾರಿಕೆ'' ಕುರಿತು ಒಂದು ಸಲಹಾ ಮಂಡಳಿ ರಚಿಸಿದ್ದರು. ''ಶಿಕ್ಷಣದಲ್ಲಿ ಸುಧಾರಣೆಗಳ ಕುರಿತು ಧೋರಣೆಯ ರೂಪರೇಷೆ'' ಎಂಬ ಕುರಿತು ಈ ಮಂಡಳಿಯ ವರದಿ ಇತ್ತೀಚೆಗೆ ಪ್ರಕಟವಾಗಿದೆ. ಶಿಕ್ಷಣದ ಕುರಿತು ಹಿಂದೆ ಖ್ಯಾತ ಶಿಕ್ಷಣತಜ್ಞರಾದ ಎಸ್. ರಾಧಾಕೃಷ್ಣನ್ ಅಥವಾ ಡಿ. ಎಸ್. ಕೊಠಾರಿ ನೇತೃತ್ವದ ಮಂಡಳಿಗಳು ಈ ಹಿಂದೆ ಸಲಹೆಗಳನ್ನು ನೀಡಿದ್ದವು. ಆದರೆ ಶಿಕ್ಷಣ ನೀತಿಗೆ ಸಂಬಂಧಿಸಿದ ಇತ್ತೀಚೆಗಿನ ವರದಿಯ ಸಲಹೆಗಳನ್ನು ಬಂಡವಾಳಶಾಹಿ ವರ್ಗದ ಪ್ರತಿನಿಧಿಗಳಾದ ಮುಖೇಶ್ ಅಂಬಾನಿ ಮತ್ತು ಕುಮಾರಮಂಗಲಂ ಬಿರ್ಲಾ ಇವರ ನೇರ ಉಸ್ತುವಾರಿಯಲ್ಲಿ ರೂಪಿಸಲಾಗಿದೆ ಎಂಬುದನ್ನು ಗಮನಿಸಬೇಕು.

ಬಂಡವಾಳಶಾಹಿಯ ಹೊಸ ಕಾರ್ಯವ್ಯೂಹದಂತೆ, ಸಂರಚನಾ ಹೊಂದಾಣಿಕೆಯ ಕಾರ್ಯಕ್ರಮಕ್ಕೆ (ಎಸ್.ಎ.ಪಿ.)ಅನುಗುಣವಾಗಿ ಸಬ್ಸಿಡಿ ಕಡಿತಗೊಳಿಸಲಾಗುತ್ತಿದೆ. ಸಹಜವಾಗಿಯೇ, ಈ ಅಂಬಾನಿ ಬಿರ್ಲಾ ದಸ್ತಾವೇಜು ಉನ್ನತ ಶಿಕ್ಷಣ ಮತ್ತು ವೃತ್ತಿ ಶಿಕ್ಷಣಕ್ಕೆ ನೀಡುತ್ತಿರುವ ಎಲ್ಲಾ ಸಂಪನ್ಮೂಲಗಳನ್ನು ಕಡಿತಗೊಳಿಸಬೇಕೆಂದು ಸಲಹೆ ಮಾಡಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವೂ ಖಾಸಗಿ ಬಂಡವಾಳ ಹೂಡುವಿಕೆಯನ್ನು ಅವಲಂಬಿಸಲು ಈ ವರದಿ ಸಲಹೆ ನೀಡಿದೆ. ಶಿಕ್ಷಣ ಕ್ಷೇತ್ರದಲ್ಲಿ ಆಗರ್ಭ ಶ್ರೀಮಂತರು ಮತ್ತು ಅನಿವಾಸಿ ಭಾರತೀಯರ ಬಂಡವಾಳ ಹೂಡುವಿಕೆಗೆ ತೆರಿಗೆ ರಿಯಾಯಿತಿ ನೀಡಲು ವರದಿಯಲ್ಲಿ ಸೂಚಿಸಲಾಗಿದೆ.

೧೯೮೬ರಲ್ಲಿ ರಾಜೀವ ಗಾಂಧಿ ಸರಕಾರ ಘೋಷಿಸಿದ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಸರಕಾರದ ವೆಚ್ಚ ರಾಷ್ಟ್ರೀಯ ಒಟ್ಟು ಉತ್ಪಾದನೆಯ ಶೇ. ೩ರಿಂದ ಶೇ. ೬ಕ್ಕೆ ಏರಿಸಬೇಕೆಂದು ಸೂಚಿಸಲಾಗಿತ್ತು. ಆದರೆ, ಅಂಬಾನಿ - ಬಿರ್ಲಾ ವರದಿಯು ಶಿಕ್ಷಣ ಕ್ಷೇತ್ರಕ್ಕೆ ಈಗಿನ ಜಿ.ಡಿ.ಪಿ.ಯ ಶೇ. ೩ರಷ್ಟು ಖರ್ಚು ಮಾಡುವುದರ

ಲ್ಲಿಯೂ ಕಡಿತಗೊಳಿಸಬೇಕೆಂದು ಸಲಹೆ ನೀಡಿದೆ. ಪರ್ಯಾಯ ''ಭವಿಷ್ಯತ್‌ಗಾಗಿ ಯೋಜನೆ'' ಎಂಬ ೭ನೇ ಪರಿಚ್ಛೇದದಲ್ಲಿ ಮುಂದಿನ ೧೫ ವರ್ಷಗಳ ಅವಧಿ ಶಿಕ್ಷಣದ ಅವಶ್ಯಕತೆಯನ್ನು ಸಮೀಕ್ಷೆ ನಡೆಸಿ, ಈ ಕ್ಷೇತ್ರದಲ್ಲಿ ಖಾಸಗಿ ಬಂಡವಾಳ ಹೂಡುವಿಕೆಯ ಸಪ್ರಮಾಣದಲ್ಲಿ ಸರಕಾರದ ಪಾಲು ಕಡಿತಗೊಳಿಸಲು ಸಲಹೆ ನೀಡಲಾಗಿದೆ. ಈ ವರದಿಯ ''ಶಿಕ್ಷಣ ಕ್ಷೇತ್ರದಲ್ಲಿ ಸಾರ್ವಜನಿಕ ಮತ್ತು ಖಾಸಗಿ ಬಂಡವಾಳ ಹೂಡುವಿಕೆ'' ಎಂಬ ಭಾಗದಲ್ಲಿ ಈ ಕೆಳಗಿನಂತೆ ಹೇಳಲಾಗಿದೆ:

''ಒಟ್ಟು ವೆಚ್ಚವನ್ನು 'ಸರಕಾರಿ ವೆಚ್ಚ' ಮತ್ತು 'ಖಾಸಗಿ ವೆಚ್ಚ' ಎಂದು ಪ್ರತ್ಯೇಕಿಸಲಾಗಿದೆ. ಸರಕಾರಿ ವೆಚ್ಚ ಪ್ರಾಥಮಿಕ ಶಿಕ್ಷಣಕ್ಕೆ ಶೇ. ೯೦, ಮಾಧ್ಯಮಿಕ ಶಿಕ್ಷಣಕ್ಕೆ ಶೇ. ೫೦, ಇತರ ಕ್ಷೇತ್ರಕ್ಕೆ ಶೇ. ೪೦ ಆಗಿರಬೇಕು. ಅಂದರೆ ಸಾರ್ವಜನಿಕ ವೆಚ್ಚ ರೂ. ೧,೧೭,೦೦೦ ಕೋಟಿ, ಖಾಸಗಿ ವೆಚ್ಚ ರೂ. ೬೮,೯೦೦ ಕೋಟಿಯಷ್ಟಾಗುವುದು. ಅಂದರೆ ಒಟ್ಟು ವೆಚ್ಚದಲ್ಲಿ ಸರಕಾರದ ಪಾಲು ಶೇ. ೬೩, ಖಾಸಗಿ ಪಾಲು ಶೇ. ೩೭. ಸರಕಾರದ ಒಟ್ಟು ವೆಚ್ಚ ಜಿ.ಎನ್.ಪಿ.ಯ ಶೇ. ೧.೯೮ರಷ್ಟಾಗಿರುವುದೆಂದು ನಿರೀಕ್ಷಿಸಲಾಗಿದೆ.''

೧೯೮೬ರ ನೀತಿಯಲ್ಲಿ ಶಿಕ್ಷಣದ ವೆಚ್ಚಕ್ಕೆ ಸಂಬಂಧಿಸಿ ಜಿ.ಎನ್.ಪಿ.ಯು ಕುಸಿಯುತ್ತಿರುವುದನ್ನು ಗಮನಿಸಿ, ಅದನ್ನು ಶೇ. ೬ಕ್ಕೆ ಏರಿಸಲು ಆಶ್ವಾಸನೆ ನೀಡಲಾಗಿತ್ತು. ಆದರೆ ಈಗ ಅಂಬಾನಿ-ಬಿರ್ಲಾ ವರದಿ ಶಿಕ್ಷಣಕ್ಕೆ ಸರಕಾರಿ ವೆಚ್ಚ ಜಿ.ಎನ್.ಪಿ.ಯ ಶೇ. ೧.೯೮ರಷ್ಟು ಸಾಕು ಎಂದು ಮುಕ್ತವಾಗಿ ವಾದಿಸುತ್ತಿದೆ.

ಶಿಕ್ಷಣದ ಸೌಲಭ್ಯಗಳು ಸಾಮಾಜಿಕವಾಗಿ ಅನುಕೂಲವಂತ ವಿಭಾಗದವರಿಗೇ ಹೆಚ್ಚು ಕೇಂದ್ರೀಕೃತವಾಗುವಂತೆ ಈ ವರದಿ ಮುಕ್ತವಾಗಿ ಸಮಜಾಯಿಸುತ್ತಿದೆ. ಅದು ಹೀಗೆ ಹೇಳುತ್ತಿದೆ: ''ಖಾಸಗಿ ಬಂಡವಾಳ ಹೂಡುವಿಕೆ ಖಾಸಗಿ ಸಂಸ್ಥೆಗಳಲ್ಲಿ ಮಾಡಬಹುದು ಅಥವಾ ಸಾರ್ವಜನಿಕ ಸಂಸ್ಥೆಗಳ ಸಂಪನ್ಮೂಲಗಳಿಗೆ ಪೂರಕವಾಗಿ ಮಾಡಬಹುದು. ಖಾಸಗಿ ಶಾಲೆಗಳು ಮತ್ತು ವಿಶ್ವವಿದ್ಯಾಲಯಗಳು ಸಾಮಾಜಿಕ ಆರ್ಥಿಕ ಹಿನ್ನೆಲೆಗಳುಳ್ಳ ಹೆಚ್ಚು ಅನುಕೂಲ ಪರಿಸರದ ಮಕ್ಕಳನ್ನು ಆಕರ್ಷಿಸಲಿವೆ. ಆ ಮೂಲದ ವಿಭಿನ್ನತೆಗೆ ಮತ್ತು ಮುಖ್ಯವಾಗಿ ಉನ್ನತಮಟ್ಟದ ಶಿಕ್ಷಣದಲ್ಲಿ ಖಾಸಗಿ ಹಾಗೂ ಸಾರ್ವಜನಿಕ ಸಂಸ್ಥೆಗಳ ಮಧ್ಯೆ ಉಪಯುಕ್ತ ಸ್ಪರ್ಧೆ ನಡೆಯಲು ಪ್ರೋತ್ಸಾಹ ನೀಡಲಿದೆ.''

ಶಿಕ್ಷಣ ಸಮಸ್ಯೆಗಳ ಕುರಿತು ವೈಜ್ಞಾನಿಕ ಮಾರ್ಗ ಎಂದರೆ, ಮಕ್ಕಳು ಮಧ್ಯದಲ್ಲೇ ಶಾಲೆ ಬಿಡುವ (೧ನೇ ತರಗತಿಯಲ್ಲಿ ಶೇ. ೩೦ರಷ್ಟು ) ಮತ್ತು ಅನಕ್ಷರತೆಯ (ಶೇ. ೬೨ರಷ್ಟು ಸಾಕ್ಷರರು) ಗಂಭೀರ ಸಮಸ್ಯೆಗಳತ್ತ ಗಮನಹರಿಸುವುದಾಗಿದೆ. ಸಾಕ್ಷರತೆ ಕೂಡಾ ಅಸಮಾನವಾಗಿದೆ. ಕೇರಳದಲ್ಲಿ ಮಹಿಳಾ ಸಾಕ್ಷರತೆ ಶೇ. ೯೨ರಷ್ಟಾಗಿದ್ದರೆ, ರಾಜಸ್ಥಾನದಲ್ಲಿ ಶೇ. ೧೨ರಷ್ಟು ಇದೆ. ಬೃಹತ್ ಪ್ರಮಾಣದ ಜನಸಂಖ್ಯೆ ಇರುವ ದೇಶಗಳು ಇಂತಹ ಸಮಸ್ಯೆಗಳನ್ನು ಹೇಗೆ ಪರಿಹರಿಸಿದವು ಎಂದು ಪರಿಶೀಲಿಸಬೇಕಾಗಿದೆ. ಈ ವರದಿಯಲ್ಲಿ ಚೀನಾದ ಅನುಭವವನ್ನು ಕೇವಲ ಪ್ರಸ್ತಾಪಿಸಿ ಬದಿಗಿರಿಸಲಾಗಿದೆ. ಈ ವರದಿ ಮಾರುಕಟ್ಟೆ ಆರ್ಥಿಕತೆಯ ತತ್ವಜ್ಞಾನವನ್ನು ಮುಂದೊಡ್ಡಲು ಆಸಕ್ತವಾಗಿದೆ ಮತ್ತು ಸಮಾಜವಾದಿ ಸಮಾಜಗಳು ಸುಸಂಬಂಧವಾಗಿಲ್ಲ ಎಂದು ತಳ್ಳಿಹಾಕಿದೆ. ''ಮಾರುಕಟ್ಟೆ ಆರ್ಥಿಕತೆ ಜಗತ್ತಿನ ಶೇ. ೮೦ರಷ್ಟು ಜನಸಂಖ್ಯೆ ಇರುವ ದೇಶಗಳಲ್ಲಿ ಜಾರಿಯಲ್ಲಿದೆ'' ಎಂದು ವರದಿಯಲ್ಲಿ ಜಂಬ ಕೊಚ್ಚಿಕೊಳ್ಳಲಾಗಿದೆ. ನಾನು ಬಂದಿರುವ ಮುಂಬಯಿ ನಗರದ ಹೊರವಲಯಕ್ಕಿಂತಲೂ ಕಡಿಮೆ ಜನಸಂಖ್ಯೆ ಇರುವ, ೩.೫ ಮಿಲಿಯ ಜನಸಂಖ್ಯೆಯ ಸಿಂಗಾಪುರವನ್ನು ಮಾದರಿಯಾಗಿಟ್ಟುಕೊಳ್ಳಬೇಕೆಂದು ಈ ವರದಿ ಬಯಸುತ್ತದೆ. ವೈಜ್ಞಾನಿಕ ಕಣ್ಣೋಟವನ್ನು ಗಾಳಿಗೆ ತೂರಿಬಿಡಲಾಗಿದೆ. ಶಿಕ್ಷಣದ ಮೌಲ್ಯದ ಕುರಿತು ಯಾವುದೇ 'ಇಸಂ' ಮಧ್ಯೆ ಪ್ರವೇಶಿಸದಂತೆ ಎಚ್ಚರ ವಹಿಸಬೇಕೆಂದು ಅಂಬಾನಿ ಬಿರ್ಲಾ ವರದಿ ಪ್ರತಿಪಾದಿಸುವ ಮೂಲಕ ಅವರ ಪೂರ್ವಗ್ರಹ ಪೀಡಿತ ಹಾಗೂ ಅವೈಜ್ಞಾನಿಕ ಅಭಿಪ್ರಾಯವನ್ನು ಬಯಲುಗೊಳಿಸಿದೆ.

ಪರಿಸರ ರಕ್ಷಣೆಯ ಕುರಿತಾಗಿ ಯಾರೂ ಮಾತಾಡಬಾರದೆಂದು, ಆ ಕುರಿತು ಮಾತನಾಡುವುದಕ್ಕೆ ಅತ್ಯಂತ ಕಟುವಾಗಿ ವಿರೋಧಿಸುವ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಜೀವನದ ಮೌಲ್ಯದ ಕುರಿತು ಮತ್ತು ಮಾನವ ಜನಾಂಗದ ನಿರಂತರ ಅಸ್ತಿತ್ವದ ಕುರಿತು ಯಾರಾದರೂ ಏನನ್ನು ಕಲಿಸಬೇಕು ? ಬಂಡವಾಳಶಾಹಿ ಸಹಜವಾಗಿಯೇ ಒಂದು ''ಇಸಂ''. ಆದರೆ, ನಾವು ಆ ವ್ಯವಸ್ಥೆಯಲ್ಲಿರುವುದರಿಂದ ಮಾರುಕಟ್ಟೆ ಶ್ರೇಷ್ಠತೆಯ ಬಂಡವಾಳಶಾಹಿ ತತ್ವಜ್ಞಾನ ಪ್ರತಿಪಾದಿಸುವ ಅಂಬಾನಿ - ಬಿರ್ಲಾ ವರದಿ ಅದನ್ನು ''ಇಸಂ'' ಎಂದು ಪರಿಗಣಿಸುತ್ತಿಲ್ಲ. ಬಂಡವಾಳಶಾಹಿ ವ್ಯವಸ್ಥೆಯನ್ನು ಒಂದು ''ಇಸಂ'' ಅಥವಾ ಒಂದು ವ್ಯವಸ್ಥೆಯಾಗಿ ಅಧ್ಯಯನ ಮಾಡುವ ಮೂಲಕ, ಮಾನವ ಪರಿಶ್ರಮಗಳನ್ನು ಪರ್ಯಾಯ ರೀತಿಯಲ್ಲಿ ಅಣಿನೆರೆಸಬಹುದೇ ಮತ್ತು ಸಮಾಜವಾದ ಸಾಧ್ಯವೇ ಎಂಬ ವೈಜ್ಞಾನಿಕ ಪ್ರಶ್ನೆಗಳೂ ಮೂಡಿಬರುವುವು. ಮುಖ್ಯವಾಗಿ ಚೀನಾದಲ್ಲಿ ಶೇ. ೯೨ರಷ್ಟು ಸಾಕ್ಷರತೆ ಸಾಧಿಸಲು ಸಾಧ್ಯವಾದಾಗ ಮತ್ತು ಶಾಲೆಗಳಲ್ಲಿ ಮಕ್ಕಳನ್ನು ಸಂಪೂರ್ಣವಾಗಿ ಉಳಿಸಿಕೊಳ್ಳಲು ಸಾಧ್ಯವಾದಾಗ, ಸಮಾಜವಾದದಂತಹ ಪ್ರಶ್ನೆ ಸಹಜವಾಗಿಯೇ ಉದ್ಭವಿಸುವುದು.

ಅಂಬಾನಿ - ಬಿರ್ಲಾ ವರದಿ ಈ ಪ್ರಶ್ನೆಯನ್ನು ಎತ್ತಲು ಜಾಗರೂಕತೆಯಿಂದ ತಪ್ಪಿಸಿಕೊಳ್ಳುತ್ತಿದೆ ಮತ್ತು ಈಗಿನ ವ್ಯವಸ್ಥೆ ತನ್ನ ಎಲ್ಲಾ ಆಂತರಿಕ ವೈರುಧ್ಯಗಳಿಂದ ಕೂಡಿದ್ದರೂ ಅದು ಪ್ರಶ್ನಾತೀತ ಎಂದು ಅವೈಜ್ಞಾನಿಕವಾಗಿ ಪ್ರತಿಪಾದಿಸುತ್ತಿದೆ.

ಈ ವರದಿ ಎನ್.ಡಿ.ಎ. ಸರಕಾರದ ಧೋರಣೆಯನ್ನು ಪ್ರತಿಬಿಂಬಿಸುತ್ತದೆ. ಅದು ಶ್ರೀಮಂತರ ಪರವಾಗಿದೆ ಮತ್ತು ಐ.ಎಮ್.ಎಫ್. ಹಾಗೂ ಜಾಗತಿಕ ಬ್ಯಾಂಕಿನ ಯಜಮಾನರ ಆಣತಿಯಂತೆ ಸರಕಾರ ಶಿಕ್ಷಣ ಕ್ಷೇತ್ರದಿಂದ ಹಿಂಜರಿಯಬೇಕೆಂದು ಪ್ರಚಾರ ಮಾಡುತ್ತಿದೆ. ಶಿಕ್ಷಣರಂಗ ಸಂಪೂರ್ಣವಾಗಿ ಖಾಸಗೀಕರಣಗೊಳ್ಳುವಂತೆ ಮತ್ತು ಸ್ವಯಂ ಸಂಪನ್ಮೂಲ ಹೊಂದುವಂತೆ ಸಲಹೆ ನೀಡುತ್ತದೆ. ಈ ಸಲಹೆ ರೋಗಿಯನ್ನು ಕೊಲ್ಲಲಿದೆ. ಅಂದರೆ ರೋಗಗ್ರಸ್ತವಾಗಿರುವ ನಮ್ಮ ಶಿಕ್ಷಣ ವ್ಯವಸ್ಥೆ ಸಂಪೂರ್ಣವಾಗಿ ಸಾಯುವಂತೆ ಮಾಡಲಿದೆ. ಇಂತಹ ಧೋರಣೆಯಿಂದ ಹಾನಿಗೊಳಗಾಗುತ್ತಿರುವ ವಿವಿಧ ಕ್ಷೇತ್ರಗಳ ದುಡಿಯುವ ಜನರೊಂದಿಗೆ ಶಿಕ್ಷಕರೂ ಕೈ ಜೋಡಿಸಬೇಕು. ಆ ಮೂಲಕ ಧೋರಣೆಗಳನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸಬೇಕು. ಶಿಕ್ಷಣದ ಸಮಸ್ಯೆಗಳಿಗೆ ವೈಜ್ಞಾನಿಕ ಮಾರ್ಗ ಎಂದರೆ, ಮಾನವ ಜನಾಂಗದ ಹಿತಾಸಕ್ತಿಗಳನ್ನು ಬದಿಗೊತ್ತಿ ಮಾರುಕಟ್ಟೆ ಶಕ್ತಿಗಳು ಜಗತ್ತಿನಾದ್ಯಂತ ಮುಂದೊತ್ತಿ ಬರುತ್ತಿರುವುದನ್ನು ನಿಲ್ಲಿಸುವುದೇ ೨೧ನೇ ಶತಮಾನದ ಮುಖ್ಯ ಅವಶ್ಯಕತೆ ಎಂದು ತಿಳಿಯುವುದಾಗಿದೆ. ೨೧ನೇ ಶತಮಾನವು ಬಂಡವಾಳಶಾಹಿ ವ್ಯವಸ್ಥೆಯ ಮೇಲುಗೈ ಆಗದೆ ಸಮಾಜವಾದದ ಶತಮಾನವಾಗಬೇಕಾಗಿದೆ ಎಂದು ವೈಜ್ಞಾನಿಕ ಮಾರ್ಗ ಸೂಚಿಸುತ್ತದೆ.




ಅನುವಾದ : ಸಿ. ಆರ್. ಭಟ್
೪. [illegible]ಕ್ತಿ ಅಪಾರ್ಟ್‌ಮೆಂಟ್, ಶ್ರೀದೇವಿ ನಗರ
ವಿದ್ಯಾಗಿರಿ, ಧಾರವಾಡ - ೫೮೦ ೦೦೪

ಸಂದರ್ಶನ : ಡಾ॥ ಸಿದ್ದನಗೌಡ ಪಾಟೀಲ

*''ಮಠಗಳು ಜಾತಿ ವ್ಯವಸ್ಥೆಯ ಕೇಂದ್ರಗಳಾಗಿದ್ದವು, ಅನೈತಿಕ ಸಂಪತ್ತಿನ ಕೇಂದ್ರಗಳಾಗಿದ್ದವು, ಅಜ್ಞಾನ ಪೋಷಣೆಯ ಕೇಂದ್ರಗಳಾಗಿದ್ದವು. ಈ ಕಾರಣಕ್ಕಾಗಿಯೇ ಬಸವಣ್ಣ ಮಠಗಳನ್ನು ನಿರಾಕರಣೆ ಮಾಡಿದ. ದೇವಸ್ಥಾನ ನಿರಾಕರಣೆ ಮಾಡಿ ಸ್ಥಾವರದ ಬದಲಾಗಿ ಜಂಗಮತ್ವವನ್ನು ಸಾರಿದ. ಜ್ಞಾನ ದಾಸೋಹ ಅನ್ನದಾಸೋಹಕ್ಕಾಗಿ ಹುಟ್ಟಿಕೊಂಡ ಮಠಗಳು ಶೋಷಣೆಯ ಕೇಂದ್ರಗಳಾಗಿವೆ, ದೇವರು ಧರ್ಮದ ಹೆಸರಿನಲ್ಲಿ ಸುಲಿಗೆ ನಡೆಯುತ್ತಿದೆ. ಪವಾಡ ಸುಳ್ಳು, ಸ್ವರ್ಗ ನರಕ ಸುಳ್ಳು, ಮನುಷ್ಯನಿಗಾಗಿ ಧರ್ಮ, ಮನುಷ್ಯನಿಗಾಗಿ ದೇವರು; ಮನುಷ್ಯನಿಲ್ಲದಿದ್ದರೆ ದೇವರು ಧರ್ಮ ಅರ್ಥಹೀನ. ಎಲ್ಲ ಧರ್ಮಗಳು ಸುಳ್ಳು ಹೇಳುತ್ತವೆ, ಭಯ ಹುಟ್ಟಿಸುತ್ತವೆ. ಪುನರ್ಜನ್ಮ, ಪೂರ್ವಜನ್ಮ ಎಲ್ಲಾ ಸುಳ್ಳು. ಹುಟ್ಟಿನ ಪೂರ್ವ ಮತ್ತು ಸತ್ತ ನಂತರ ಯಾವ ಲೋಕವೂ ಇಲ್ಲ. ಬದುಕು ಮಾತ್ರ ಸತ್ಯ. ಮಾನವ - ಮನುಷ್ಯತ್ವ ನಮ್ಮ ಚಿಂತನೆಯ ಕೇಂದ್ರವಾಗಬೇಕು. ಅಂಥ ಒಂದು 'ಮಾನವ ಧರ್ಮ'ಕ್ಕಾಗಿ ನನ್ನ ಹೋರಾಟ.'' ಈ ಮೇಲಿನ ಮಾತುಗಳು ಒಂದು ಮಠದ ಪೀಠಾಧೀಶರ ಅಭಿಪ್ರಾಯಗಳು.*

*ಜಾತಿ ಧರ್ಮದ ಹೆಸರಿನಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿರುವ, ಧರ್ಮದ ಹೆಸರಿನಿಂದ ರಾಜಕೀಯ ಮಾಡುತ್ತಿರುವ, ಧರ್ಮ - ಜಾತಿ, ಉಪಜಾತಿಗಳ ಹೆಸರಿನಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಡೊನೇಷನ್ ಕ್ಯಾಪಿಟೇಷನ್ ಪಡೆದು ಕೋಟ್ಯಾಧಿಪತಿಗಳಾಗುತ್ತಿರುವ ಮಠಾಧಿಪತಿಗಳ, ಜಗದ್ಗುರುಗಳ ರಾಜಗುರುಗಳ ಉರುವಣಿಗೆ ಮೆರವಣಿಗೆಯ ಈ ಕಾಲದಲ್ಲಿ ಮಠೀಯ ವ್ಯವಸ್ಥೆಯ ಮಧ್ಯದಿಂದಲೇ ತೂರಿಬರುತ್ತಿರುವ ಈ ಹೊಸ ಪೀಠಾಧೀಶರ ಮಾತುಗಳು ಧಾರ್ಮಿಕ ವಲಯದಲ್ಲಿ ಒಂದು ಕಂಪನವನ್ನುಂಟುಮಾಡಿವೆ. ೧೯೯೦ರಲ್ಲಿ ನಿಡುಮಾಮಿಡಿ ಪೀಠಾರೋಹಣ ಮಾಡಿದ ಈ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರು ಹೊಸ ಪರಿಭಾಷೆಯಲ್ಲಿ, ಅಂದರೆ ಜಗದ್ಗುರುಗಳ ಭಾಷೆಗೆ ಬದಲಾಗಿ ಮನುಷ್ಯರ ಭಾಷೆಯಲ್ಲಿ, ಮಾತನಾಡುತ್ತಿದ್ದಾರೆ. ಇಂಥ ಮಾತುಗಳ ಮೂಲಕ ಟೀಕೆಗೂ ಮೆಚ್ಚುಗೆಗೂ ಏಕಕಾಲಕ್ಕೆ ಗುರಿಯಾಗುತ್ತಿರುವ ಈ ಸಂದರ್ಭದಲ್ಲಿ 'ಹೊಸತು' ಅವರನ್ನು ಮಾತನಾಡಿಸಿದೆ.*

# ಮಠಗಳು ಅನೈತಿಕ ಸಂಪತ್ತಿನ ಕೇಂದ್ರಗಳು

**- ವೀರಭದ್ರ ಚನ್ನಮಲ್ಲ ಸ್ವಾಮೀಜಿ**



೧.೬.೧೯೬೦ರಲ್ಲಿ ಚಿತ್ರದುರ್ಗದಲ್ಲಿ ಜನಿಸಿದ ಶ್ರೀ ವೀರಭದ್ರ ಸ್ವಾಮಿ ಅವರು ಬಡಕುಟುಂಬದಲ್ಲಿ ಬೆಳೆದವರು. ತಂದೆ ಸಾರಂಗ ಮಠದ ಗಂಗಾಧರಯ್ಯನವರು ಸದಾ ಸಂಚಾರಿ, ಸ್ವಾತಂತ್ರ್ಯ ಹೋರಾಟಗಾರ. ಸುಭಾಸ್ ಚಂದ್ರ ಬೋಸರ ಅನುಯಾಯಿಯಾಗಿದ್ದ ಅವರು ಇಂಚಗೇರಿ (ವಿಜಾಪುರ) ಮುರುಗೋಡ ಮಹಾದೇವಪ್ಪನವರ ಜೊತೆಗೂಡಿ ಸದಾ ತೀವ್ರವಾದಿ ಚಟುವಟಿಕೆಯಲ್ಲಿದ್ದವರು. ಅಂದಿನ ಸ್ವಾತಂತ್ರ್ಯ ಹೋರಾಟದ ತೀವ್ರವಾದಿ ಚಟುವಟಿಕೆಗಳಾದ ರೈಲ್ವೆ ಕಂಬಿ ಕೀಳುವುದು, ಟೆಲಿಫೋನ್ ತಂತಿ ಕತ್ತರಿಸುವುದು, ಪೋಸ್ಟ್ ಆಫೀಸ್‌ಗಳಿಗೆ ಬೆಂಕಿ ಇಡುವುದು, ಭೂಗತವಾಗಿ ಬದುಕುವುದು – ಹೀಗೆ ಮನೆಯ ಕಡೆಗೆ ಲಕ್ಷ್ಯ ಕೊಡದೆ ಹೋರಾಟದ ಬದುಕಿನಲ್ಲೇ ಜೀವಿಸಿದವರು. ಹಿಂಡಲಗಾ ಜೈಲು ವಾಸವನ್ನೂ ಅನುಭವಿಸಿದವರು.

ತಾಯಿ ಗಿರಿಜಮ್ಮ. ಗಂಡನ ಖಾಸಗಿ ಬದುಕಿನ ದಿವ್ಯ ನಿರ್ಲಕ್ಷ್ಯದ ಮಧ್ಯೆಯೂ ಹರಿದು ತಿನ್ನುವ ಬಡತನದ ಮಧ್ಯೆಯೂ ಹನ್ನೊಂದು ಮಕ್ಕಳನ್ನು ಹೆತ್ತು ಹೊತ್ತು ಸಾಕಿದವಳು. ಗಂಡನ ಅನುಪಸ್ಥಿತಿಯಲ್ಲಿ ಅನಾರೋಗ್ಯಕ್ಕೆ ತುತ್ತಾಗಿ ಔಷಧಿಗೂ ದಿಕ್ಕಿಲ್ಲದೆ ಸತ್ತ ಮಕ್ಕಳನ್ನು ಒಡಲಲ್ಲಿಟ್ಟುಕೊಂಡು ದುಃಖಿಸಿದಾಕೆ. ಕೊನೆಗೆ ಉಳಿದ ಆರು ಮಕ್ಕಳನ್ನು ಚಿತ್ರದುರ್ಗದ ಮಿಲ್‌ನಲ್ಲಿ ಕೂಲಿ ಕೆಲಸ ಮಾಡಿ ಸಲಹಿದ ಮಹಾಮಾತೆ. ಅವಿದ್ಯಾವಂತಳಾದರೂ ಬುದ್ಧಿವಂತೆ.

ಗಂಗಾಧರಯ್ಯನವರ ಸ್ವಂತ ಊರಾದ ಚಿತ್ರದುರ್ಗ ತಾಲ್ಲೂಕಿನ ಚಿಕ್ಕಪ್ಪನ ಹಳ್ಳಿಯಲ್ಲಿ ದಾಯಾದಿಗಳ ದ್ವೇಷದಿಂದಾಗಿ ಉಟ್ಟ ಬಟ್ಟೆಯಲ್ಲೇ ಊರುಬಿಟ್ಟು ಚಿತ್ರದುರ್ಗ ಸೇರಿದ ಕುಟುಂಬವಿದು. ಸಾಕಷ್ಟು ಆಸ್ತಿ ಇದ್ದರೂ ಬಡತನಕ್ಕೆ ತಳ್ಳಲ್ಪಟ್ಟಿದ್ದಾರೆ. ಗಿರಿಜಮ್ಮನವರು ತವರಿನ ಸಹಾಯದಿಂದ ಬಡತನ ಹಾಗೂ ಸ್ವಾತಂತ್ರ್ಯ ಹೋರಾಟದ ಬಿಸಿಯನ್ನು ನಿಭಾಯಿಸಿದ್ದಾರೆ. ಮನೆಯ ಅರಿವಿಲ್ಲದೆ ಸ್ವಾತಂತ್ರ್ಯ ಹೋರಾಟ, ಪರೋಪಕಾರಿ ಜೀವನ ನಡೆಸಿದ ಗಂಗಾಧರಯ್ಯನವರು ಒಳ್ಳೆಯ ಮನುಷ್ಯರಾಗಿದ್ದರು. ಆದರೆ ಹೊಣೆಗಾರ ಪತಿಯಾಗಿರಲಿಲ್ಲ, ಜವಾಬ್ದಾರಿಯುತ ತಂದೆಯಾಗಿರಲಿಲ್ಲ. ಸ್ವತಃ ಅನಕ್ಷರಸ್ಥೆಯಾದರೂ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಆಗ್ರಹಿಸಿದ ಗಿರಿಜಮ್ಮ ಎಲ್ಲ ಮಕ್ಕಳನ್ನೂ ಮಠಗಳಲ್ಲಿ, ಯಾರ್‍ಯಾರದೋ ಹತ್ತಿರ ಕಳಿಸಿ ವಿದ್ಯಾಭ್ಯಾಸ ಮಾಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಈ ಹಿನ್ನೆಲೆಯಲ್ಲಿಯೇ ಗಿರಿಜಮ್ಮನವರ ಉಳಿದ ಆರು ಮಕ್ಕಳಲ್ಲಿ ಐದನೆಯವರಾದ ವೀರಭದ್ರ ಸ್ವಾಮಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಖಾನಾ ಮಡಗು ಶರಣಪ್ಪ ಸ್ವಾಮಿಗಳ ದಾಸೋಹ ಮಠಕ್ಕೆ ಸೇರಿದರು. ಐದನೇ ತರಗತಿಯಿಂದ ಒಂಭತ್ತನೇ ತರಗತಿಯವರೆಗೆ ಅಲ್ಲಿ ಕಲಿತು ಹೆಬ್ಬಾಳು (ದಾವಣಗೆರೆ) ರುದ್ರಸ್ವಾಮಿ ಮಠದಲ್ಲಿ ಹತ್ತನೇ ತರಗತಿ ಕಲಿತು, ಬೆಂಗಳೂರಿನ ಸರ್ಪಭೂಷಣ ಮಠದಲ್ಲಿದ್ದು ಪಿ.ಯು.ಸಿ. ಓದಿದ್ದಾರೆ. ಚಿತ್ರದುರ್ಗದಲ್ಲಿ ಪದವಿ, ಮೈಸೂರು ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ವ್ಯಾಸಂಗ ಮಾಡಿದ ವೀರಭದ್ರ ಸ್ವಾಮಿಗಳು ೧೯೮೫ರಲ್ಲಿ ಮೈಸೂರಿನ ರಾಮಕೃಷ್ಣಾಶ್ರಮದ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡಿದ್ದಾರೆ. ನಂತರ ೧೯೮೬ರಿಂದ ೧೯೯೦ರವರೆಗೆ ಚಿತ್ರದುರ್ಗದ ಮುರುಘರಾಜೇಂದ್ರ ಮಹಿಳಾ ಕಾಲೇಜಿನಲ್ಲಿ ಉಪನ್ಯಾಸಕರಾಗಿ ದುಡಿದು ೧೯೯೦ರಿಂದ ನಿಡುಮಾಮಿಡಿ ಪೀಠದ ಜವಾಬ್ದಾರಿ ವಹಿಸಿಕೊಂಡಿದ್ದಾರೆ.

ಇಂದು ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮಿಗಳು ವಿಭಿನ್ನವಾಗಿ ಮಾತನಾಡುವುದಕ್ಕೆ ಕಾರಣಗಳಿವೆ. ಬಾಲ್ಯದಲ್ಲಿ

ಹಸಿವಿನ ಬೆಂಕಿಯಲ್ಲಿ ಬೆಂದಿದ್ದಾರೆ. ತಾಯಿಯ ಅಸಹಾಯಕತೆಯನ್ನೂ ಅವಿರತ ದುಡಿಮೆಯನ್ನೂ ನೋಡಿದ್ದಾರೆ. ಕೆಳವರ್ಗದವರಾಗಿ ಅವಮಾನ ಉಂಡಿದ್ದಾರೆ. ಮಠಗಳೊಳಗೆ ಇದ್ದು ಅಲ್ಲಿನ ಎಷ್ಟೋ ಅರ್ಥಹೀನ ಆಚರಣೆಗಳನ್ನು ನೋಡಿದ್ದಾರೆ. ಜಗದ್ಗುರುಗಳ ಡಂಭಾಚಾರವನ್ನು ಕಣ್ಣಾರೆ ಕಂಡಿದ್ದಾರೆ. ಈ ಎಲ್ಲದರ ಹಿನ್ನೆಲೆಯಲ್ಲಿ ಅವರ ಅನುಭವ ಇಂದು ಈ ರೀತಿ ಮಾತನಾಡಿಸುತ್ತಿದೆ. ಅವರ ಓದು ಅವರಿಗೆ ಹೊಸ ಮಾರ್ಗ ತೋರಿಸಿದೆ. ಧಾರ್ಮಿಕ ವಲಯದಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಧಾರ್ಮಿಕ ಸಂಸ್ಥೆಯೊಂದರ ವಕ್ತಾರರಾಗಿಯೇ ಖಂಡಿಸುತ್ತಿದ್ದಾರೆ. ಪತ್ರಿಕೆ ಕೇಳಿದ ತೀರ ಮುಜುಗರದ ಪ್ರಶ್ನೆಗಳಿಗೂ ಅವರು ಶಾಂತವಾಗಿ ಉತ್ತರಿಸಿದ್ದಾರೆ.

**ಹೊಸತು :** ಸ್ವಾಮೀಜಿ, ನೇರವಾಗಿ ವಿಷಯಕ್ಕೆ ಬಂದುಬಿಡೋಣ. ಒಬ್ಬ ಮಠಾಧಿಪತಿಗಳಾಗಿ ಮಠೀಯ ವ್ಯವಸ್ಥೆಯ ವಿರುದ್ಧ ಮಾತಾಡ್ತಾ ಇದೀರಿ ಅಂತ ಅನ್ನಿಸೋದಿಲ್ಲೇನು ?

**ಸ್ವಾಮೀಜಿ :** ನಾನು ಸಹಜವಾಗಿ ನನ್ನ ಅಭಿಪ್ರಾಯಗಳನ್ನು ಹೇಳ್ತೀನಿ. ಇವತ್ತಿನ ಸಾಮಾಜಿಕ ಧಾರ್ಮಿಕ ವ್ಯವಸ್ಥೆಯಲ್ಲಿ ಧರ್ಮ, ಮಠ, ಜಗದ್ಗುರುಗಳು ಎಲ್ಲಾ ಶೋಷಣೆಯ ಕೇಂದ್ರಗಳಾಗಿದ್ದರಿಂದ ಅದನ್ನು ಯಾರಾದರೂ ಟೀಕೆ ಮಾಡಿದರೆ ಅದು ತೀವ್ರವಾದಿ ವಿಚಾರ ಅನ್ನಸ್ತದ.

**ಹೊ :** ನೀವು ಈ ಥರಾ ಮಾತಾಡೋದಿದ್ರೆ ಕಾವಿ ಯಾಕೆ ಧರಿಸಬೇಕು ಅನ್ನೋದು ಕೆಲವರ ಟೀಕೆ. ನಿಮ್ಮ ಅಭಿಪ್ರಾಯ ಏನು ?

**ಸ್ವಾ :** ಕಾವಿ ಅನ್ನೋದು ಒಂದು ಸಂಕೇತ. ವಕೀಲರಿಗೆ ಕರೀ ಕೋಟು, ಪೊಲೀಸರಿಗೆ ಖಾಕಿ ಬಟ್ಟೆ, ಆ ಥರಾ ಸ್ವಾಮೀಜಿಗಳಿಗೆ ಕಾವಿ ಅನ್ನೋದು ಅವರ ವಸ್ತ್ರ. ಬದಲಾಗಿ ಸ್ವಾಮಿಗಳು ಕೋಟು ಪ್ಯಾಂಟು ಹಾಕಾಕ ಬರೂದಿಲ್ಲ. ನಿಜ, ಕೆಲವರು ಕಾವಿ ಬಟ್ಟೆಯ ಹಿಂದಿನ ಅರ್ಥಗಳಿಗೆ ವ್ಯತಿರಿಕ್ತವಾಗಿ ನಡೆದುಕೊಂಡಿರಬಹುದು. ಹಾಗಂತ ಅದು ಆ ನೀತಿಯ ತಪ್ಪಲ್ಲ. ಇಷ್ಟಕ್ಕೂ ಕಾವಿ ಧರಿಸಿದವರು, ಸಾಮಾಜಿಕ ವಾಸ್ತವಗಳನ್ನು, ವೈರುಧ್ಯಗಳನ್ನು ಮಾತಾಡಬಾರದು ಅಂತ ಎಲ್ಲಿ ಅದ ? ಈ ರೀತಿ ಟೀಕೆ ಮಾಡುವವರು, ಅದೂ ನನ್ನ ವಿಷಯದೊಳಗ, ಪೂರ್ವಾಗ್ರಹಕ್ಕೊಳಗಾಗಿರಬಹುದು ಅಥವಾ ನಾನು ಪ್ರತಿಪಾದಿಸುತ್ತಿರೋ ವಿಚಾರಗಳು ಅವರಿಗೆ ಸಹನೆಯಾಗದೇ ಈ ಥರಾ ಮಾತಾಡ್ತಾ ಇರಬಹುದು.

**ಹೊ :** ಬೇರೆಯವರ ವಿಷಯ ಇರ್ಲಿ. ಈ ಮಠ, ಪೀಠ, ದೇವರು, ಧರ್ಮ ಇವೆಲ್ಲ ಇವತ್ತು ಶೋಷಣೆಯ ಅಸ್ತ್ರಗಳಾಗಿವೆ ಅಂತ ನಿಮಗೆ ಅನಸೂದಿಲ್ಲ ?

**ಸ್ವಾ :** ಹೌದು, ಈಗ ಅಷ್ಟೇ ಅಲ್ಲ, ಬಸವಣ್ಣನವರ ಕಾಲದಿಂದಲೂ ಇದನ್ನ ಕಾಣತೇವಿ. ಮಠಗಳು ಜಾತಿ ವ್ಯವಸ್ಥೆಯ ಕೇಂದ್ರಗಳಾಗಿದ್ದವು. ಅನೈತಿಕ ಸಂಪತ್ತಿನ ಕೇಂದ್ರಗಳಾಗಿದ್ದವು. ಅಜ್ಞಾನ ಪೋಷಣೆಯ ಕೇಂದ್ರಗಳಾಗಿದ್ದವು. ಈ ಕಾರಣಕ್ಕೇನೆ ಬಸವಣ್ಣನವರು ಮಠಗಳನ್ನು ದೇವಸ್ಥಾನಗಳನ್ನು ನಿರಾಕರಿಸಿದರು, ಸ್ಥಾವರವನ್ನು ವಿರೋಧಿಸಿ ಜಂಗಮತ್ವವನ್ನು ಸಾರಿದರು. ನಿಜವಾದ ಅರ್ಥದಲ್ಲಿ ಮಠ ಸಂಸ್ಕೃತಿ ಅನ್ನೋದು ಜ್ಞಾನ



ದಾಸೋಹದ ಕೇಂದ್ರವಾಗಬೇಕು, ಅನ್ನ ದಾಸೋಹದ ಕೇಂದ್ರವಾಗಬೇಕು. ಆದರೆ ಇವತ್ತು ಧರ್ಮ ಸಂಸ್ಥೀಕರಣಗೊಂಡು ಅಪ್ರಾಮಾಣಿಕ ಜಗದ್ಗುರುಗಳ ಶೋಷಣೆಯ ಅಸ್ತ್ರಗಳಾಗಿ ಮಠಗಳು ಅವರ ಧಾರ್ಮಿಕ ಮೂಲಭೂತವಾದಿ ಪ್ರಚಾರ ತಾಣಗಳಾಗಿವೆ. ಮಠಗಳು ಉಸಿರುಗಟ್ಟುವ ಸಾಮಾಜಿಕ ವಾತಾವರಣ ನಿರ್ಮಾಣ ಮಾಡಿವೆ.

**ಹೊ :** ನೀವು ಮೊದಲಿನಿಂದಲೂ ಮಠಗಳಲ್ಲಿಯೇ ಬೆಳೆದವರು. ಆಗ ಏನೂ ಅನ್ನಿಸ್ಲಿಲ್ಲೇನು ?

**ಸ್ವಾ :** ನಾನು ಮೊದಲಿನಿಂದಲೂ ಬಂಡುಕೋರನೇ. ಪ್ರತಿಭಟನಾ. ಗುಣ ನನ್ನ ವ್ಯಕ್ತಿತ್ವದಲ್ಲೇ ಇತ್ತು. ಡಂಭಾಚಾರಗಳನ್ನು, ಸುಳ್ಳು ಪ್ರತಿಷ್ಠೆಗಳನ್ನು ಖಂಡಿಸ್ತಿದ್ದೆ. ನಾನು ಏಳನೇ ಈಯತ್ತೆ ಓದುವಾಗ್ಲೇ ಮಠ ತೊರೆದು ಓಡಿ ಬಂದಿದ್ದೆ. ಆದರೆ ಬಡತನ, ತಾಯಿ ನೆನಪಾಗಿ ಮತ್ತೆ ಹಿಂತಿರುಗಿ ಹೋದೆ. ಬಹುಶಃ ನನ್ನ ಬಡತನ ಮತ್ತು ನನ್ನ ಕೀಳರಿಮೆ ಕಾರಣ ಇರಬೇಕು. ನನ್ನೊಳಗೆ ಅಹಂಕಾರ ಅತಿಯಾಗಿತ್ತು. ಯಾರನ್ನೂ ಸುಲಭವಾಗಿ ಒಪ್ಪುತ್ತಿರಲಿಲ್ಲ. ಚಿಕ್ಕವನಿದ್ದಾಗ ಹಲವಾರು ತಪ್ಪುಗಳನ್ನ ಸಹ ಮಾಡಿದೀನಿ. ಜೂಜಾಡಿದೀನಿ, ಹೊಟ್ಟೆ ಹಸಿದಾಗ ಕಳ್ಳತನ ಮಾಡಿದೀನಿ. ಆದರ ಒಬ್ಬನೇ ಕುಳಿತು ದೇವರ ಗದ್ದುಗೆ ಮುಂದೆ ನನ್ನ ತಪ್ಪುಗಳ ನಿವೇದನಾ ಮಾಡಿಕೊಳ್ತಿದ್ದೆ. ಆದರೆ ಮಠದ ಸಂಪ್ರದಾಯಗಳೊಳಗಿನ ಮೌಢ್ಯತೆಗಳನ್ನು ತಿರಸ್ಕರಿಸ್ತಿದ್ದೆ. ಯಾರಿಗಾದ್ರೂ ಕಾಲಿಗೆ ಬೀಳಬೇಕೂ ಅಂದ್ರೆ ಯಾಕೆ ಕಾಲಿಗಿ ಬೀಳಬೇಕು ಅನ್ನೂವಷ್ಟು ನಾನು ಬಂಡುಕೋರನಾಗಿದ್ದೆ. ಆದರೆ ನನ್ನ ತಾಯಿ ಬಗ್ಗೆ ಮಾತ್ರ ಅತಿಯಾದ ಗೌರವ ಇತ್ತು.

**ಹೊ :** ಆವಾಗ್ಲೆ ನೀವು ನಾಸ್ತಿಕರಾಗಿದ್ರೇನು ?

**ಸ್ವಾ :** ಇಲ್ಲ, ನಾನು ನಾಸ್ತಿಕನಾಗಿರಲಿಲ್ಲ. ಆದರ ಅರ್ಥವಿಲ್ಲದ ಆಚರಣೆಗಳನ್ನು ಒಪ್ಪುತ್ತಿರಲಿಲ್ಲ. ನಾನು ನನ್ನ ಏಳನೇ ತರಗತಿಯಿಂದ ಮೂರನೆಯ ಬಿ.ಎ. ಓದುವವರೆಗೂ ಪೌರೋಹಿತ್ಯ ಮಾಡೀನಿ. ಆದರ ಚಿತ್ರದುರ್ಗದೊಳಗ ಒಂದು ಘಟನಾ ನೋಡಿದ ಮ್ಯಾಲೆ ಈ ಪೌರೋಹಿತ್ಯ ನಿಲ್ಲಿಸಿದೆ. ನಾನು ಡಿಗ್ರಿ ಓದುವಾಗ ಒಂದಿನ ಪೂಜಾ ಮಾಡೋದಕ್ಕೆ ಅಂತ ಗುಡಿಗೆ ಹೋದೆ. ಅಲ್ಲಿ ಲಿಂಗದ ಮೇಲೆ ನಾಯಿ ಉಚ್ಚೆ ಹೊಯ್ತಾ ಇತ್ತು. ಇದು ನನ್ನ ಮೇಲೆ ಭಾಳ ಪರಿಣಾಮ ಮಾಡಿತು. ಅವತ್ನಿಂದ ನಾನು ಮೂರ್ತಿ ಪೂಜೆ ಬಿಟ್ಟುಬಿಟ್ಟೆ. ಮುಂದೆ ಧ್ಯಾನ ಮಾತ್ರ ಮುಂದುವರೆಯಿತು.

**ಹೊ :** ಅಂದ್ರೆ ನೀವು ದೇವರ್ನ ನಂಬೂದಿಲ್ಲೇನು ?

**ಸ್ವಾ :** ಹಾಗಲ್ಲ. ನಂಬಿಕೆ ಬೇರೆ, ಆಚರಣೆ ಬೇರೆ. ನಾನು ಮೂರ್ತಿಪೂಜೆಯನ್ನ ಈ ಮೇಲೆ ಹೇಳಿದ ಘಟನೆಯಿಂದ ಬಿಟ್ಟುಬಿಟ್ಟೆ. ಮುಂದೆ ಮೈಸೂರಿನಲ್ಲಿದ್ದಾಗ ನಾನೊಂದು ವಿಚಾರವಾದಿಗಳ ಸಂಘ ಕಟ್ಟಿದ್ದೆ. ಅಲ್ಲಿ ಸದಸ್ಯರಿಗೆ ಮತಾಂಧತೆ ವಿರುದ್ಧ, ವರದಕ್ಷಿಣೆ ವಿರುದ್ಧ, ಲಂಚದ ವಿರುದ್ಧ ಪ್ರತಿಜ್ಞಾ ಮಾಡಿಸ್ತಿದ್ದೆ. ಒಂದು ಸಲ ನನಗೂ ಒಬ್ಬ ಜಂಗಮ ಪಂಡಿತನಿಗೂ ತೀವ್ರವಾದ ವಾದವಿವಾದವಾಗಿ ನನಗೆ ನಿಮ್ಮ ಧರ್ಮ, ದೇವರ ಹಂಗಿಲ್ಲ, 'ನಾನು ಮುಕ್ತ ಮಾನವ' ಅಂತ ಘೋಷಿಸಿಕೊಂಡ್ಬಿಟ್ಟೆ. ನಾನು ಈ ಜಗದ್ಗುರುಗಳು, ಮತಾಂಧರು ನಂಬಿದ ದೇವರನ್ನು ನಂಬೂದಿಲ್ಲ. ನನ್ನ ಮೇಲೆ ಪ್ರಭಾವ ಬೀರಿದವರು ಬಸವಣ್ಣ, ಅಕ್ಕಮಹಾದೇವಿ. ನನ್ನ ಸನ್ಯಾಸಕ್ಕೆ ವಿವೇಕಾನಂದರ ಚಿಂತನೆಗಳು ಕಾರಣ. ತೋಲ್‌ಸ್ತೋಯ್ ಸಾಹಿತ್ಯ ನನ್ನ ವೈಯಕ್ತಿಕ ಬದುಕಿನ ಮೇಲೆ ಪ್ರಭಾವ ಬೀರಿದೆ. ಚಾರ್ವಾಕ ಹಾಗೂ ಅಂಬೇಡ್ಕರ ನನ್ನ ಚಿಂತನೆಯ ವಿಭಿನ್ನತೆಗೆ ಕಾರಣ. ಬಹುಶಃ ವಿಶ್ವದ ಬಹುತೇಕ ಹೋರಾಟಗಾರರ ಜೀವನ ಚರಿತ್ರೇನ ಓದಿದೀನಿ. ಈ ಎಲ್ಲದರ ಅಧ್ಯಯನ, ಅನುಭವದಿಂದ ಮಾನವತೆಯೇ ದೇವರು ಅಂತ ನಾನು ನಂಬಿದೀನಿ. ಇಷ್ಟಕ್ಕೂ ಮನುಷ್ಯನೇ ಈ ದೇವರು, ಧರ್ಮ ಮಾಡಿಕೊಂಡದ್ದು. ಮನುಷ್ಯನಿಗಾಗಿ ಧರ್ಮ, ಮನುಷ್ಯನಿಗಾಗಿ ದೇವರು. ಮನುಷ್ಯ ಇಲ್ಲದಿದ್ರೆ ದೇವರು ಧರ್ಮ ಎಲ್ಲ ಅರ್ಥಹೀನ. ಇನ್ನೊಂದು ಮಾತು : ಅಪ್ರಾಮಾಣಿಕ ಆಸ್ತಿಕರೂ ಅಪ್ರಾಮಾಣಿಕ ನಾಸ್ತಿಕರಿಬ್ಬರೂ ಅಪಾಯಕಾರಿಗಳೇ. ಇವರ ಹೊರತಾಗಿ ಒಬ್ಬ ಪ್ರಾಮಾಣಿಕನಾಗಿ ತನ್ನ ದೇವರನ್ನು ನಂಬಿದರೆ ತಪ್ಪಲ್ಲ. ಅದು ಯಾವುದೇ ಧರ್ಮದ ದೇವರಾಗಿರಬಹುದು. ತನ್ನ ನಂಬಿಕೆಯೊಂದಿಗೆ ತಾನು ಬದುಕುತ್ತಾನೆ. ಇಂಥ ಆಸ್ತಿಕರು ನಮ್ಮಲ್ಲಿ ಬಹುತೇಕ ಜನ ಇದ್ದಾರೆ. ಹಾಗೇ ನಾಸ್ತಿಕರು ತಮ್ಮ ಪಾಡಿಗೆ ತಾವು ಜೀವನ ನಡೆಸ್ತಾರೆ. ಆದರೆ ಈ ಆಸ್ತಿಕತೆ ನಾಸ್ತಿಕತೆಯನ್ನು ಬಂಡವಾಳ ಮಾಡಿಕೊಂಡು ಬದುಕುವವರದಾರಲ್ಲಾ ಅವರು ಅಪಾಯಕಾರಿಗಳು. ಇಲ್ಲಿ ದೇವರ ವಿಷಯ ಗೌಣ. ಇದು ತೀರ ಅಂತರಂಗದ ವಿಷಯ. ಇದರ ಮೇಲೆ ಯೋಗ್ಯಾಯೋಗ್ಯ ಎನ್ನುವುದು ತಪ್ಪು. ಒಟ್ಟಿನ ಮೇಲೆ ನಮ್ಮ ನಂಬಿಕೆಯಿಂದ ಇನ್ನೊಬ್ಬರಿಗೆ ತೊಂದರೆ ಆಗಬಾರದು, ವಂಚನೆ ಆಗಬಾರದು, ಮೋಸ ಆಗಬಾರದು.

**ಹೊ :** ನೀವು ಈ ಮಠಕ್ಕೆ ಬರುವ ಮುಂಚೆ ಉಪನ್ಯಾಸಕರಾಗಿದ್ರಿ, ಸಾಮಾಜಿಕ ಜೀವನದೊಳಗ ಬೆರೆತಿದ್ರಿ. ಆಗ ನಿಮಗೆ ಮದಿವಿ ಆಗಬೇಕು ಅನ್ನಿಸ್ಲಿಲ್ಲೇನು ?

**ಸ್ವಾ :** ನಾನು ಉಪನ್ಯಾಸಕನಾಗುವ ಹೊತ್ತಿಗೆ

ವಿವೇಕಾನಂದ ನನ್ನ ಚಿಂತನೆಗಳ ಮೇಲೆ ಪ್ರಭಾವ ಮಾಡಿದ್ರು. ನನಗೆ ಮದುವೆ ಆಗಬೇಕು ಅನ್ನೋ ತೀವ್ರತೆ ಏನೂ ಇರಲಿಲ್ಲ. ಆದರೆ ಆಗೋದಾದ್ರೆ, ದೇವದಾಸೀನೋ ಅಥವಾ ದಲಿತ ಹುಡುಗೀನೋ ಆಗಬೇಕು ಅಂತ ಆಲೋಚನೆ ಇತ್ತು. ಆದರೆ ಒಂದು ಸಲ ಒಂದು ಘಟನೆ ನಡೀತು. ಜಗದ್ಗುರು ಒಬ್ಬರು ಒಂದು ಪೀಠಕ್ಕೆ ನನ್ನನ್ನು ಆಯ್ಕೆ ಮಾಡಕೋಬೇಕೂಂತಿದ್ರು. ನಾನು ಒಪ್ಪಿಕೊಳ್ಳಲಿಲ್ಲ. ಆಗ ಅಲ್ಲಿ ಕಾಶಿಯ ಪ್ರಸಿದ್ಧ ಹಸ್ತಸಾಮುದ್ರಿಕರೊಬ್ಬರಿದ್ರು. ಸುಮ್ಮನೆ ನನ್ನ ಹಸ್ತ ತೋರಿಸಲು ಹೇಳಿದರು. ನಾನು ನಿರಾಕರಿಸಿದೆ. ಜಗದ್ಗುರುಗಳು ತಮ್ಮ ಸಮಾಧಾನಕ್ಕಾಗಿ ತೋರಿಸಲು ಹೇಳಿದರು. ಆಗ ಹಸ್ತಸಾಮುದ್ರಿಕ ನನ್ನ ಹಸ್ತ ನೋಡಿ ಇವನು ಗುರು ಆಗಲಾರ. ೩೧ನೇ ವಯಸ್ಸಿಗೆ ಇವನು ಮದುವೆ ಆಗ್ತಾನೆ ಅಂತ ಹೇಳಿದ. ಆಗ ನಾನು ನಿಮ್ಮ ಈ ಮೂಢ ಶಾಸ್ತ್ರಗಳ ಬಗ್ಗೆ ನನಗೆ ನಂಬಿಕೆ ಇಲ್ಲ ಎಂದೆ. ನನಗೆ ಆ ಜಗದ್ಗುರುವಿನ ಮರಿ ಆಗೋ ಕಿರಿಕಿರಿ ತಪ್ಪಿದ್ದು ಸಂತೋಷವೇ ಆಯ್ತು. ಆದರೆ ಈ ಹಸ್ತಸಾಮುದ್ರಿಕನ ಮೌಢ್ಯತೆ ಒಪ್ಪೊಕ್ಕಾಗ್ಲಿಲ್ಲ. ವಾದ ಮಾಡುವಾಗ ಆ ಕಾಶಿ ಪಂಡಿತ ನನ್ನದು ನಲವತ್ತು ವರ್ಷದ ಅನುಭವ, ನನ್ನ ಭವಿಷ್ಯ ಸುಳ್ಳಾಗೋದಿಲ್ಲ ಎಂದ. ನಾನು ನಿನ್ನ ಮಾತನ್ನ ಹುಸಿ ಮಾಡ್ತೇನೆ ಅಂತ ಪ್ರತಿಜ್ಞೆ ಮಾಡಿದೆ. ಹೀಗೆ ಪರೋಕ್ಷವಾಗಿ ನನ್ನನ್ನು ನಾನು ನಿರ್ಬಂಧಿಸಿಕೊಂಡೆ. ಇಷ್ಟಕ್ಕೂ ನಾನು ಒಂದು ಪ್ರತ್ಯೇಕವಾದ, ಈ ಮಠಪೀಠಗಳಿಂದ ದೂರವಾದ ಒಂದು ವೈಚಾರಿಕ ಚಳುವಳಿ ಆರಂಭಿಸಬೇಕು ಅಂತ ಆಸೆಪಟ್ಟಿದ್ದೆ. ಸಾಂಪ್ರದಾಯಿಕ ಮಠೀಯ ವ್ಯವಸ್ಥೆಗೆ ಪ್ರತಿಯಾಗಿ, ಪರ್ಯಾಯವಾಗಿ, ಒಂದು ಚಳುವಳಿ ಮಾಡಬೇಕು ಅಂತ ಆಶಿಸಿದ್ದೆ.

**ಹೊ** : ಹಾಗಾದ್ರೆ ಇಷ್ಟೆಲ್ಲ ಆಲೋಚನೆ ಇದ್ದೂ ಅಂತಿಮವಾಗಿ ನೀವೂ ಒಂದು ಪೀಠಕ್ಕೆ ಬಂದದ್ದು ಯಾಕೆ ?

**ಸ್ವಾ** : ನಿಜ, ಇದು ನೀವು ಕೇಳಬಹುದಾದ ಮತ್ತು ನನಗೆ ಮುಜುಗರವಾಗಬಹುದಾದ ಪ್ರಶ್ನೆ. ಈ ಪೀಠಕ್ಕೆ ಬರುವ ಮುಂಚೆ ಐದಾರು ದೊಡ್ಡ ಜಗದ್ಗುರು ಪೀಠಕ್ಕೆ ಆಹ್ವಾನ, ಒತ್ತಾಯ ಬಂದಿತ್ತು. ನಾನು ನಿರಾಕರಿಸಿದ್ದೆ. ಮೊದಲನೆಯದಾಗಿ, ನಾನು ಈ ಜಗದ್ಗುರು ಅನ್ನುವ ಪರಿಕಲ್ಪನೆಯನ್ನೇ ಒಪ್ಪುತ್ತಿರಲಿಲ್ಲ. ಎರಡನೆಯದಾಗಿ, ನಾನು ಅಲ್ಲಿ ಹೋಗುವುದರಿಂದ ವಿನಾಕಾರಣ ತೊಂದರೆಗಳು, ಅಭಿಪ್ರಾಯ ಭಿನ್ನತೆ, ಸಂಘರ್ಷ ಇವೆಲ್ಲ ನನಗೆ ಒಪ್ಪಿಗೆಯಾಗಿರಲಿಲ್ಲ. ಅದೇ ಸಂದರ್ಭದಲ್ಲಿ ಹಲವಾರು ಮಠಗಳ ಹಿರಿ ಕಿರಿ ಸ್ವಾಮಿಗಳ ಮಧ್ಯೆ ಯುದ್ಧವೇ ನಡೆದಿತ್ತು. ಹೀಗಾಗಿ ನಾನು ಆ ಮುಂಚೆ ನನಗೆ ಬಂದ ಆಹ್ವಾನಗಳನ್ನು ಸ್ಪಷ್ಟವಾಗಿ ನಿರಾಕರಿಸಿದ್ದೆ. ಆದರೆ ಒಂದು ಸಲ ೧೯೮೭ರಲ್ಲಿ ಈ ಪೀಠದ ಜಚನಿ ಸ್ವಾಮೀಜಿಯವರು ಚಿತ್ರದುರ್ಗದ ಸಭೆಗೆ ಬಂದಿದ್ರು. ನಾನೂ ಅಲ್ಲಿ ಅತಿಥಿಯಾಗಿ ಹೋಗಿದ್ದೆ. ಆವತ್ತು ಜಚನಿ ಸ್ವಾಮೀಜಿಯವರಿಗೂ ನನಗೂ ವಾದ ವಿವಾದವಾಗಿತ್ತು. ಅವರ ವಿಚಾರಗಳಿಗೆ ಭಿನ್ನಾಭಿಪ್ರಾಯ ವ್ಯಕ್ತಮಾಡಿದ್ದೆ, ವಿರೋಧಿಸಿದ್ದೆ. ವಿಚಿತ್ರ ಅಂದ್ರೆ ಮುಂದೆ ಆ ಸ್ವಾಮಿಗಳು ನನ್ನನ್ನೇ ತಮ್ಮ ಉತ್ತರಾಧಿಕಾರಿ ಆಗಬೇಕೂಂತ ಪ್ರಸ್ತಾಪ ಮಾಡಿದರು. ನಾನು ನಿರಾಕರಿಸಿದೆ. ನನ್ನ ತಂದೆ ಮತ್ತು ನನ್ನ ಹಿತೈಷಿಗಳು ಎಲ್ಲರೂ ವಿಪರೀತ ಒತ್ತಡ ತಂದರು. ನಾನು ಒಪ್ಪಿರಲಿಲ್ಲ. ಕೊನೆಯದಾಗಿ ನಾನು ಬಹಳ ಗೌರವಿಸುತ್ತಿದ್ದ ಶ್ರೀ ಶೈಲ ಪರಶಿವ ಸ್ವಾಮೀಜಿ ಅವರು (ಪೂರ್ವಾಶ್ರಮದಲ್ಲಿ ನನ್ನ ಅಣ್ಣ ಅವರು; ನನಗೆ ತಂದೆ ಸ್ಥಾನದ ಪ್ರೀತಿ ತೋರಿಸಿದವರು) ಒತ್ತಾಯ ಮಾಡಿ ನಿನ್ನ ಚಿಂತನೆ, ಭಾವನೆಗಳನ್ನು ಅನುಷ್ಠಾನ ಮಾಡೋಕೆ ಒಂದು ಸ್ಥಳ ಬೇಕು, ಆ ಕಾರಣಕ್ಕಾಗಿ ನೀನು ನಿಡುಮಾಮಿಡಿ ಪೀಠಕ್ಕೆ ಹೋಗಲು ಒಪ್ಪಿಕೋ ಎಂದು ಪ್ರಸ್ತಾಪ ಮಾಡಿದರು. ಹೀಗೆ ಎಲ್ಲ ಹಿತೈಷಿಗಳ ಒತ್ತಾಯದ ಮೇಲೆ ಸುಮ್ಮನೆ ಜಚನಿ ಸ್ವಾಮೀಜಿಯವರಿಗೆ ಭೇಟಿಯಾಗುವ ಸಂದರ್ಭ ಬಂತು. ಆಗ ಅವರಿಗೆ ನಾನು ಬರೆದ 'ಚಿಂತನ ಚೇತನ' ಹಾಗೂ ಇತರ ಪುಸ್ತಕಗಳನ್ನು ಕೊಟ್ಟೆ. ಅದರಲ್ಲಿ ಯಾವ ಸಾಂಪ್ರದಾಯಿಕ ಮಠಾಧೀಶರೂ ಒಪ್ಪಲಾರದ ಸಹಿಸಲಾರದ ವಿಚಾರಗಳಿದ್ದವು. ಆದರೆ ಜಚನಿ ಸ್ವಾಮೀಜಿಯವರು ನನ್ನ ಎಲ್ಲ ವಿಚಾರಾ ತಿಳಿದೂ ಮತ್ತೂ ನನ್ನನ್ನು ಈ ಪೀಠಕ್ಕೆ ಆಹ್ವಾನಿಸಿದರು. ನನಗೆ ಆಶ್ಚರ್ಯವಾಯಿತು. ಅಂತಿಮವಾಗಿ ನಾನು ಸ್ವಾಮೀಜಿಯವರಿಗೆ ಮೂರು ಷರತ್ತುಗಳನ್ನು ಹಾಕಿದೆ. ಗುರು ಶಿಷ್ಯನಿಗೆ ಷರತ್ತು ಹಾಕುವುದು ಸಹಜ. ಆದರೆ ಶಿಷ್ಯನೇ ಗುರುವಿಗೆ ಷರತ್ತು ಹಾಕೋದು ಯಾರೂ ಸಹಿಸಲ್ಲ. ಹೀಗಾದ್ರೂ ನನ್ನನ್ನು ಬಿಟ್ಟುಬಿಡಲಿ ಅಂತ ಷರತ್ತು ಹಾಕಿದೆ. ಮೊದಲನೇದು ನನಗೆ ಅಭಿವ್ಯಕ್ತಿ ಸ್ವಾತಂತ್ರ್ಯ ಇರಬೇಕು. ಎರಡನೇದಾಗಿ ಕ್ರಿಯಾ ಸ್ವಾತಂತ್ರ್ಯ ಇರಬೇಕು. ಕೊನೆಯದಾಗಿ ನನ್ನ 'ಚಿಂತನ ಚೇತನ' ಎರಡನೇ ಭಾಗ ಓದಿದ ಮೇಲೂ ತಾವು ನನ್ನನ್ನು ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳಬೇಕು ಅನ್ನಿಸಿದರೆ ಮಾಡಿಕೊಳ್ಳಬಹುದು. ನನ್ನ 'ಚಿಂತನ ಚೇತನ' ಎರಡನೇ ಭಾಗದ ಪುಸ್ತಕದಲ್ಲಿ ಪವಾಡಗಳು ಸುಳ್ಳು, ಜಗದ್ಗುರುಗಳು

ಯಾರೂ ಇಲ್ಲ, ಎಲ್ಲಾ ಜಾತಿ ಗುರುಗಳು, ಜಾಗದ ಗುರುಗಳು, ದೇವರು ಸುಳ್ಳು, ಮಠಗಳು - ಮತಾಂಧತೆ, ಹೀಗೆ ಹಲವಾರು ನನ್ನ ವಿಚಾರಗಳನ್ನು ಆ ಪುಸ್ತಕದಲ್ಲಿ ಬರೆದಿದ್ದೆ. ಇದನ್ನೆಲ್ಲಾ ನೋಡಿ ನನ್ನ ಕೈ ಬಿಡಬಹುದು ಅನ್ನೋ ಆಶೆ ಇತ್ತು. ಆದರೆ ಸ್ವಾಮೀಜಿಯವರು ನಿಮಗೆ ಸಂಪೂರ್ಣ ಸ್ವಾತಂತ್ರ್ಯ ಇದೆ, ನಿಮ್ಮ ಭಾವನೆಗಳಿಗೆ ನಮ್ಮ ಸಹಮತ ಇದೆ ಅಂತ ಪತ್ರ ಬರೆದರು. ನನಗೆ ಆಶ್ಚರ್ಯ, ಸಂತೋಷ ಎರಡೂ ಆಯ್ತು. ನನ್ನಂಥವನನ್ನು ತಮ್ಮ ಉತ್ತರಾಧಿಕಾರಿಯಾಗಿ ಸ್ವೀಕರಿಸಲು ಸಿದ್ಧರಿದ್ದದ್ದಕ್ಕೆ ಆಶ್ಚರ್ಯವಾದರೆ, ಇಂಥಾ ಸ್ವಾಮಿಗಳೂ ಇದ್ದಾರಲ್ಲಾ ಅಂತ ಸಂತೋಷವಾಯಿತು. ನಿರಾಕರಿಸಲು ಕಾರಣ ಇರಲಿಲ್ಲ. ನನ್ನ ಚಿಂತನೆಗಳನ್ನು, ನಾನು ನಂಬಿದ ತತ್ವಗಳನ್ನು ಜಾರಿ ಮಾಡೋಕೆ ಇದೊಂದು ಕ್ಷೇತ್ರ ಅಂತ ಬಂದಿದೀನಿ. ಇದು ಅನಿವಾರ್ಯತೇನೂ ಹೌದು, ಆಕಸ್ಮಿಕವೂ ಹೌದು. ಇಷ್ಟಕ್ಕೂ ಜಗದ್ಗುರು ಆಗಿ ಮೆರೀಬೇಕು, ಪಲ್ಲಕ್ಕಿ ಬೇಕು, ಪಾದಪೂಜಾ ಮಾಡಿಸ್ಕೋಬೇಕು, ಸಂಪತ್ತು ಮಾಡಬೇಕು ಅನ್ನೋ ಯಾವ ಭಾವನೆಗಳೂ ನನ್ನಲ್ಲಿಲ್ಲ. ಒಟ್ಟಾರೆ ನನ್ನ ಕಲ್ಪನೆಯ 'ಮಾನವ ಧರ್ಮ'ದ ಹೋರಾಟದ ಭಾಗವೇ ಇದು ಅಂತ ನಾನು ಭಾವಿಸ್ಕೊಂತೀನಿ.

**ಹೊ** : ಏನೇ ಆದ್ರೂ ಇವತ್ತು ಮಠ ಅನ್ನೋದು ಶೋಷಣೆ ಹಾಗೂ ಮೌಢ್ಯದ ಕೇಂದ್ರ ಅನಿಸೋದಿಲ್ಲೇನು ?

**ಸ್ವಾ** : ಧರ್ಮದ ಅನುಷ್ಠಾನಕ್ಕೆ ಮಠಗಳು ಹುಟ್ಟಿಕೊಂಡಿವೆ. ಚರ್ಚ್, ಗುರುದ್ವಾರ, ಮಸೀದಿ ಇವೆಲ್ಲ ಧರ್ಮ ಸಾಂಸ್ಥೀಕರಣಗೊಂಡದ್ದರ ರೂಪಗಳು. ಧರ್ಮವನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗಲಿಕ್ಕೆ ಈ ಮಠಗಳು ಹುಟ್ಟಿಕೊಳ್ತವೆ. ಮಠ ಅಂದ್ರ ಜ್ಞಾನದಾಸೋಹ, ಅನ್ನದಾಸೋಹ ಕೇಂದ್ರಗಳಾಗಿದ್ದವು. ಧಾರ್ಮಿಕ ಭಾವನೆ ಆಮೇಲೆ ಸೇರಿಕೊಳ್ತು. ಧಾರ್ಮಿಕ ಸಂಸ್ಕಾರಗಳನ್ನು, ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಮಠಗಳು ಸಾಂಸ್ಥಿಕ ರೂಪ ಪಡೆದಿವೆ. ಆಗಲೇ ಬಸವಣ್ಣ ಮಠಗಳನ್ನು ರಿಜೆಕ್ಟ್ ಮಾಡಿದ್ದರು. ದೇವರನ್ನು ರಿಜೆಕ್ಟ್ ಮಾಡಿದ ವಿದ್ವಾಂಸರಿದ್ದಾರೆ. ಆದರೆ ಮಠಗಳನ್ನು ರಿಜೆಕ್ಟ್ ಮಾಡಿದವರಿಲ್ಲ. ಆದರೆ ಬಸವಣ್ಣ ಅದನ್ನೂ ಮಾಡಿದ. ಮಠಗಳು ಜಾತಿ ವ್ಯವಸ್ಥೆಯನ್ನು ಪೋಷಣೆ ಮಾಡುವ ಕೇಂದ್ರಗಳಾಗಿದ್ದವು. ಅನೈತಿಕ ಸಂಪತ್ತಿನ ಕೇಂದ್ರಗಳಾಗಿದ್ದವು. ಸಾಮಾಜಿಕ ಅನಿಷ್ಟಗಳನ್ನು ಮುಂದುವರೆಸುವ ಅಸ್ತ್ರಗಳು ಕೂಡಾ ಆಗಿದ್ದವು. ಈ ಮೂರು ಕಾರಣಗಳಿಗಾಗಿ ಬಸವಣ್ಣ ದೇವಸ್ಥಾನಗಳನ್ನೂ, ಮಠಗಳನ್ನೂ ರಿಜೆಕ್ಟ್ ಮಾಡಿದರು. ೧೨ನೇ ಶತಮಾನದ ಯಾವ ಶರಣರೂ ಮಠ ಕಟ್ಟಲಿಲ್ಲ. ಮುಂದೆ ಬಸವಣ್ಣನ ಅನುಯಾಯಿಗಳು ಕಟ್ಟಿದಷ್ಟು ಮಠಗಳನ್ನು ಯಾರೂ ಕಟ್ಟಲಿಲ್ಲ! ಇವತ್ತು ಮಠಗಳು ಜಾತಿ ವ್ಯವಸ್ಥೆಯ ರೂಪಗಳಾಗಿವೆ. ಕಪ್ಪು ಹಣದ ಕೇಂದ್ರಗಳಾಗಿವೆ. ಪುರೋಹಿತಶಾಹಿಯ ಸ್ವಾರ್ಥವನ್ನು ಮಠಗಳು ಕಾಪಾಡುತ್ತಿವೆ. ಆದರೆ ಒಂದು ಪರಂಪರೆಯ ಜನ, ಒಂದು ಪ್ರದೇಶದಲ್ಲಿ ಇವುಗಳನ್ನು ಸ್ವೀಕಾರ ಮಾಡಿದ್ದಾರೆ. ಇಂಥ ಮಠಗಳಿಂದ ಆ ಶೋಷಣೆಯ ಮುಖಗಳನ್ನು ತೊಡೆದು ಹಾಕಿ, ಆ ಮಠಗಳ ಶಕ್ತಿಯನ್ನು ರಚನಾತ್ಮಕವಾಗಿ ಯಾಕ ಬಳಸ್ಕೊಳ್ಳಬಾರದು ? ಸಮಾಜದ ಒಳಿತಿಗೆ ಮಠಗಳನ್ನು ಯಾಕ ಬಳಸ್ಕೊಳ್ಳಬಾರದು ? ಇದು ಯೋಚನೆ ಮಾಡಬೇಕಾದಂಥ ಅಂಶ ಅಂತ ನಾನು ಭಾವಿಸ್ತೀನಿ. ಇನ್ನೊಂದು ವಿಷಯ : ದೇವರು ಧರ್ಮದ ವಿಷಯವನ್ನು ತೊರೆದು ಬದುಕುವವರು ಅಲ್ಲೊಬ್ಬರು ಇಲ್ಲೊಬ್ಬರು ಇರಬಹುದು. ದೇವರು ಧರ್ಮದ ಹಂಗನ್ನು ತೊರೆದು ಬದುಕುವವರು ಎಲ್ಲೋ ಒಬ್ಬರು. ಆ ಮಾನಸಿಕ ಎತ್ತರವನ್ನು ಪಡೆದವರು ಭಾಳ ಕಡಿಮೆ. ಆದರೆ ಜಗತ್ತಿನ ಬಹುಪಾಲು ಜನ, ಬಹುಪಾಲು ಕಾಲದಲ್ಲಿ ಒಂದು ನಂಬಿಕೆಯೊಂದಿಗೆ ಬದುಕ್ತಾರೆ. ಆ ನಂಬಿಕೆಯನ್ನ ತೊರೆದು ಹಾಕಾಕಾಗೋದಿಲ್ಲ. ಬಹಳ ಕಠಿಣ. ಜಗತ್ತಿನಲ್ಲಿ ಸರ್ವಶಕ್ತ ದೇವರೊಬ್ಬನಿದ್ದಾನೆ ಅನ್ನೋದನ್ನ ವೈಯಕ್ತಿಕವಾಗಿ ನಾನು ಒಪ್ಪೂದಿಲ್ಲ. ಆದರೆ ಯಾವುದೇ ಧರ್ಮ ಇರಲಿ, ವಿಶ್ವದ ಜನ ಆ ನಂಬಿಕೆ, ಶ್ರದ್ಧೆಯೊಂದಿಗೆ ಬದುಕಿದ್ದಾರೆ. ಅದಕ್ಕೆ ಈ ಚರ್ಚು, ಮಸೀದಿ, ದೇವಸ್ಥಾನ, ಮಠ ತುಂಬಿದಾವೆ. ಮಾನಸಿಕ ಎತ್ತರವನ್ನು ಪಡೆದ ವ್ಯಕ್ತಿ ಈ ನಂಬಿಕೆಯನ್ನು ತೊರೆಯಬಹುದು. ಆದರೆ ಸಮಷ್ಟಿಗೆ ಅದು ಸಾಧ್ಯ ಇಲ್ಲ. ಅವನಿಗೆ ಭಯ ಇದೆ. ಅಸಹಾಯಕತೆ ಇದೆ. ಆ ಕಾರಣಕ್ಕೆ ಒಂದು ಅತೀತವಾದ ಶಕ್ತಿಯನ್ನು ಆಶ್ರಯಿಸಿ, ಧೈರ್ಯವನ್ನು ಸಾಂತ್ವನವನ್ನು ಪಡೀತಾನೇನೋ ಅನಿಸುತ್ತೆ.

**ಹೊ** : ನಾವು ಜನರ ನಂಬಿಕೇನ ಪ್ರಶ್ನಿಸ್ತಿಲ್ಲ. ಆದರೆ ಭಯದಿಂದಲೋ ಮುಗ್ಧತೆಯಿಂದಲೋ ಅಜ್ಞಾನದಿಂದಲೋ ಸಾಮಾನ್ಯ ಜನ ಹೊಂದಿರೋ ಧಾರ್ಮಿಕ ಅಥವಾ ದೈವೀ ನಂಬಿಕೆಗಳನ್ನ ಈ ಮಠಗಳು ಅಥವಾ ಧಾರ್ಮಿಕ ಸಂಸ್ಥೆಗಳು, ಧಾರ್ಮಿಕ ಸಂಘಟನೆಗಳು, ಆರ್ಥಿಕ, ಸಾಮಾಜಿಕ, ರಾಜಕೀಯ ಲಾಭಕ್ಕಾಗಿ ಬೇರೆ ಬೇರೆ ಹಿತಾಸಕ್ತಿಗಳಿಗಾಗಿ ಬಳಸ್ತಿವೆಯಲ್ಲ, - ಅದರ ಬಗ್ಗೆ ನೀವೇನು ಹೇಳ್ತೀರಿ ?

**ಸ್ವಾ** : ನಂಬಿಕೆ ಇಲ್ಲದೆ ಮನುಷ್ಯ ಬದುಕಲಾರ. ಆದರೆ ಆ ನಂಬಿಕೆಯನ್ನು ಕೆಲವರು ದುರುಪಯೋಗ ಮಾಡಿಕೊಳ್ತಿದ್ದಾರೆ ಅನ್ನೋದು ಪ್ರಮುಖವಾದ ಅಂಶ. ಜನರ ನಂಬಿಕೇನ ಬದಲಿಸೋದು ಸಾಧ್ಯ ಇಲ್ಲ. ದೇವರ ಕುರಿತ ಭಾವನೆಯನ್ನು ಸಮಷ್ಟಿಯಿಂದ ಅಳಿಸಲು ಸಾಧ್ಯವಿಲ್ಲ. ಆದರೆ ಈ ನಂಬಿಕೆಯನ್ನು ಕೆಲವರು ದುರುಪಯೋಗಪಡಿಸಿಕೊಳ್ತಿರೋದನ್ನ ತಡೀಲೇಬೇಕು. ಧರ್ಮ - ದೇವರು ಅನ್ನೋದು ತುಂಬಾ ಖಾಸಗಿ ಆದ ವಿಚಾರ. ಆದರೆ ಯಾವಾಗ ಧರ್ಮ ಸಾಂಸ್ಥಿಕ ರೂಪ ತಾಳಿ, ಸಿದ್ಧಾಂತದ ರೂಪ ತಾಳಿ ಹೊರಬರುತ್ತದೋ ಆಗ ಏನಾಗ್ತದೆ ಅಂದ್ರೆ, ಅದನ್ನ ನಂಬಿ ಹೀಗೇ ಬದುಕಬೇಕು, ಈ ಧರ್ಮವೇ ಸತ್ಯ, ಎಲ್ಲ ಧರ್ಮಗಳವರೂ ತಮ್ಮ ಧರ್ಮವೇ ಅಂತಿಮ ಸತ್ಯ ಎನ್ನುತ್ತಾರೆ. ಧರ್ಮ-ದೇವರು ಖಾಸಗಿ ವಿಷಯವಾಗದೆ ಸಾಂಸ್ಥಿಕ ರೂಪ ಪಡೆದು ಹೊರಬಂದಾಗ ಈ ಮೋಸ, ವಂಚನೆ, ದಬ್ಬಾಳಿಕೆ, ಸಾಮಾಜಿಕ ಅಸಮಾನತೆ ಆರಂಭವಾಗ್ತದೆ. ಈ ಹಂತದಲ್ಲಿ ಎಲ್ಲ ಧರ್ಮಗಳೂ ಸುಳ್ಳು ಹೇಳುತ್ತವೆ. ಎಲ್ಲ ಧರ್ಮಗಳೂ ಸುಳ್ಳಿನ ಮೇಲೆ ತಮ್ಮ ತತ್ವಜ್ಞಾನವನ್ನು ಕಟ್ಟಿದ್ದಾವೆ. ಜನರಲ್ಲಿ ಭಯವನ್ನು ಆಳವಾಗಿಸ್ತವೆ. ಈ ಅನ್ಯಾಯವನ್ನು ವಿರೋಧಿಸಬೇಕು, ಪ್ರತಿಭಟಿಸಬೇಕು, ಇದರ ವಿರುದ್ಧ ಹೋರಾಡಬೇಕು.

**ಹೊ** : ಬಹುತೇಕವಾಗಿ ನಾವು ಕ್ರಿಯೆಗೆ ಪ್ರತಿಕ್ರಿಯೆಯನ್ನು ಮಾತ್ರ ಕೊಡ್ತೇವೆ. ಈ ಪ್ರತಿಕ್ರಿಯೆ ಪ್ರತಿಭಟನೆಗಳ ಜೊತೆ ಪರ್ಯಾಯ ಕ್ರಿಯೆಗಳನ್ನು ಯಾಕೆ ಹಮ್ಮಿಕೊಳ್ಳಬಾರದು ? ಉದಾಹರಣೆಗೆ, ಜನ ತಮ್ಮ ಶೋಷಣೆ, ಅನ್ಯಾಯ, ನೋವು, ದಬ್ಬಾಳಿಕೆ, ಬಡತನ, ಅಜ್ಞಾನ ಈ ಕಾರಣಗಳಿಗಾಗಿಯೇ ದೇವರು ಧರ್ಮದ ಮೊರೆ ಹೋಗ್ತಾರೆ. ಈ ಮಠ-ಪೀಠಗಳನ್ನು ಬಿಟ್ಟು ಅವರ ಸಮಸ್ಯೆ ನಿವಾರಣೆಯ ಹೋರಾಟ ಕೈಗೊಂಡು, ಅವರ ನಂಬಿಕೆಯಲ್ಲಿಯೇ ಬದಲಾವಣೆ ತರಲು ಸಾಧ್ಯವಿಲ್ಲವೇ ?

**ಸ್ವಾ** : ಖಂಡಿತ ಇದೆ. ಪ್ರಯತ್ನಗಳಾಗಿವೆ. ಬುದ್ಧಿವಾದಿಗಳು, ಆತ್ಮವಾದಿಗಳು ಮೊದಲಿನಿಂದಲೇ ಆಗಿಹೋಗಿದ್ದಾರೆ. ಆದರೆ ಬುದ್ಧಿವಾದಿಗಳ ಪ್ರಯತ್ನ ಅಲ್ಪ ಕಾಲದ ಕಂಪನವನ್ನು ಮಾತ್ರ ಉಂಟುಮಾಡಿತು. ಆದರೆ ಆತ್ಮವಾದಿಗಳ ವಾದ ಪ್ರಬಲ ಆಗ್ತಾ ಬಂದಿದೆ. ಬುದ್ಧ, ಮಹಾವೀರರು ನಾಸ್ತಿಕರಾಗಿದ್ದರು. ಆದರೆ ಜನ ಅವರನ್ನು ದೇವರನ್ನಾಗಿಸಿ ಆರಾಧಿಸ್ತಿದ್ದಾರೆ. ನಾಸ್ತಿಕ ಧರ್ಮಗಳೂ ಕೆಲವೊಮ್ಮೆ ಆಸ್ತಿಕವಾಗಿ ಪರಿವರ್ತನೆ ಆಗಿ ಚಾರ್ವಾಕ, ಲೋಕಾಯತರು ಎಷ್ಟು ಜನ ಆಗಿಹೋಗಿದ್ದಾರೆ ? ಅವರೆಲ್ಲರ ಚಿಂತನೆಗಳು ಎಷ್ಟು ಪರಿಣಾಮ ಮಾಡಿವೆ ? ವೈಯಕ್ತಿಕವಾಗಿ ನಾನು ಪ್ರಭಾವಿತನಾಗಿದ್ದೇನೆ. ಆದರೆ ಸಮಷ್ಟಿ ದೃಷ್ಟಿಯಿಂದ ನೋಡಬೇಕು.

**ಹೊ** : ಸ್ವಾಮೀಜಿ, ನಾನು ಕೇಳೋದು : ಸಾಮಾಜಿಕ ಸಮಸ್ಯೆಗಳನ್ನು ಎದುರಿಸೋದರ ಮೂಲಕ ಸಮಸ್ಯೆಗೊಳಗಾದ ಜನರ ಸಂಘಟಿತ ಹೋರಾಟದ ಮೂಲಕ ಅವರ ನಂಬಿಕೆಯಲ್ಲಿ ಬದಲಾವಣೆ ತರಲು ಸಾಧ್ಯವಿಲ್ಲವೆ ? ಅಥವಾ ಹೊಸ ನಂಬಿಕೆ ತುಂಬಲು ಸಾಧ್ಯವಿಲ್ಲವೆ ? ಅವರ ಬದುಕಿಗೆ ಭದ್ರತೆ ಒದಗಿಸೋದರ ಮೂಲಕ ಜನರ ಭಯ ನಿವಾರಣೆ ಮಾಡೋಕೆ ಸಾಧ್ಯವಿಲ್ಲವೆ ?

**ಸ್ವಾ** : ಸಾಮಾಜಿಕವಾದ, ಆರ್ಥಿಕವಾದ, ರಾಜಕೀಯವಾದ ಅಸಮಾನತೆಗಳು, ಅಭದ್ರತೆಗಳು - ಇವಕ್ಕೆ ಅದೇ ಕ್ಷೇತ್ರದಲ್ಲಿಯೇ ಪರಿಹಾರ ಕಂಡುಕೊಳ್ಳಬೇಕು. ಆದರೆ ಇದು ಅವೆಲ್ಲಕ್ಕಿಂತ ಭಿನ್ನವಾದ ಸಮಸ್ಯೆ. ಮಾನವನ ಅಸ್ತಿತ್ವದೊಂದಿಗೆ ಇರುವ ಒಂದು ನಂಬಿಕೆ ಇದು. ಸಾಮಾಜಿಕವಾದ ಏರುಪೇರುಗಳಿಗೆ ಸಾಮಾಜಿಕವಾದ ಪರಿಹಾರವಿದೆ. ಆರ್ಥಿಕ ಅಸಮಾನತೆಗಳಿಗೆ ಆರ್ಥಿಕ ಮಾರ್ಗದಲ್ಲಿ ಪರಿಹಾರ ಕಂಡುಕೊಳ್ಳಬೇಕು. ರಾಜಕೀಯ ಅನ್ಯಾಯ ಅಸಮಾನತೆಗಳಿಗೆ ರಾಜಕೀಯವಾದ ಪರಿಹಾರವಿದೆ. ದೇವರು ಧರ್ಮದ ವಿಚಾರ ಅವೆಲ್ಲಕ್ಕಿಂತ ಭಿನ್ನವಾದ ವಿಚಾರ. ಅದಕ್ಕೂ ಇದಕ್ಕೂ ಸಂಬಂಧವಿಲ್ಲ. ಜಗತ್ತಿನ ಅತ್ಯಂತ ಸಿರಿವಂತ ದೇಶಗಳ ಜನ ಮತ್ತು ಈ ನಮ್ಮಂಥ ಸಮಸ್ಯೆಗಳಿಲ್ಲದ ಜನ : ಶ್ರೀಮಂತಿಕೆ ಇದ್ದರೂ ಅವರು ಚರ್ಚಿಗೆ ಯಾಕೆ ಹೋಗ್ತಾ ಇದಾರೆ ? ಮಸೀದಿಗೆ ಯಾಕೆ ಹೋಗ್ತಾ ಇದಾರೆ ? ಭೌತಿಕ ಶ್ರೀಮಂತಿಕೆ ಕೊಟ್ಟ ಮಾತ್ರಕ್ಕೆ ಮನುಷ್ಯನ ಭಾವನೆಗಳನ್ನು ಬದಲಾವಣೆ ಮಾಡೋಕೆ ಸಾಧ್ಯಾನಾ ? ಸಾಧ್ಯ ಇಲ್ಲ. ನಾನು ಪ್ರಾಮಾಣಿಕ ನಾಸ್ತಿಕ, ಅಪ್ಪಟ ನಾಸ್ತಿಕನಾಗಿ ಹೇಳ್ತೀನಿ. ವಾಸ್ತವಿಕವಾದ ವಿಚಾರ ಅಂದರೆ ಸಾಮಾಜಿಕ, ರಾಜಕೀಯ, ಆರ್ಥಿಕ ಸಮಸ್ಯೆಗಳಿಗೆ ಆಯಾ ಕ್ಷೇತ್ರದಲ್ಲೇ ನಾವು ಪರಿಹಾರಗಳನ್ನು ಕಂಡುಕೊಂಡು ಸರಿಪಡಿಸಿಕೊಳ್ಳಬೇಕು. ಆದರೆ ಅವೆಲ್ಲವುಗಳಿಗಿಂತ ವಿಭಿನ್ನವಾದ ವಿಚಾರ ದೇವರು, ಧರ್ಮದ್ದು. ಕೆಲವು ವ್ಯಕ್ತಿಗಳ ನಂಬಿಕೆಯನ್ನು ಬದಲಿಸಬಹುದು. ಆದರೆ ದೇವರ ನಂಬಿಕೆ, ಆರಾಧನೆ ವಿಷಯದಲ್ಲಿ ಸಮಷ್ಟಿಯ ನಂಬಿಕೆಯನ್ನು ಬದಲಿಸುವುದು ಅಸಾಧ್ಯ. ಇದು ಅವನ ಹುಟ್ಟಿನಿಂದಲೇ ಬಂದದ್ದು. ಇದಕ್ಕೆ ಸಾಮಾಜಿಕ ಮಾರ್ಗಕ್ಕಿಂತ ಭಿನ್ನ ಮಾರ್ಗದಲ್ಲಿ ಪರಿಹಾರ ಕಂಡುಕೊಳ್ಳಬೇಕು.

ಸಂದರ್ಶನ : **ಡಾ|| ಸಿದ್ದನಗೌಡ ಪಾಟೀಲ**
ಶ್ರೀನಗರ, ಧಾರವಾಡ - [illegible]

# ಬಾಬಾರ ಬಣ್ಣ ಬಯಲಾಗುತ್ತಿದೆ

ಬಿ. ವಿ. ವೀರಭದ್ರಪ್ಪ

ಇಂದು ವಿದ್ಯುನ್ಮಾನ ಸಂಪರ್ಕ ಸಾಧನಗಳು ವಿಶಾಲ ಪ್ರಪಂಚವನ್ನು ಒಂದು ಅಂಗೈ ಅಗಲದ ಕುಗ್ರಾಮವನ್ನಾಗಿ ಮಾರ್ಪಡಿಸಿವೆ. ಹಿಂದೆ ದೇಶ - ವಿದೇಶಗಳಲ್ಲಿ ಮಾನವ-ಮಾನವರ ನಡುವೆ ದೂರ ವಿಸ್ತಾರವಾಗಿತ್ತು. ಇಂದು ಮಾನವನು ಕಾಲ ಮತ್ತು ದೇಶಗಳ ಅಂತರವನ್ನು ಬಹು ಮಟ್ಟಿಗೆ ಗೆದ್ದಿದ್ದಾನೆ. ಸಂಪರ್ಕ ಮತ್ತು ಸಂವಹನ ಮಾಧ್ಯಮಗಳು ಊಹಾತೀತವಾಗಿ ಬೆಳೆದಿವೆ. ಒಂದು ಕಾಲದಲ್ಲಿ ಪತ್ರಿಕೆಗಳಲ್ಲಿ ಅಪ್ರಿಯ ಸುದ್ದಿ ಪ್ರಕಟವಾಗದಂತೆ ತಡೆಹಿಡಿಯಲು ಅನೇಕ ಕುಟಿಲೋಪಾಯಗಳಿದ್ದುವು. ಇಂದು ಇಂಟರ್‌ನೆಟ್‌ನಿಂದ ಮಾಹಿತಿಯನ್ನು ನಿರಾತಂಕವಾಗಿ ಬಟ್ಟ ಬಯಲು ಮಾಡಲು ಸಾಧ್ಯವಾಗಿದೆ; ವಿಶ್ವದಾದ್ಯಂತ ಸಮಾನ ಚಿಂತಕರನ್ನು ಸಂಘಟಿಸಿ ಅನ್ಯಾಯ, ಅಕ್ರಮಗಳನ್ನು ತಡೆಹಿಡಿಯಲು ಸಾಮರ್ಥ್ಯ ನೀಡಿದೆ.

ಡಿಸೆಂಬರ್ ೧೪, ೨೦೦೦ ದಂದು ಆಂಧ್ರಪ್ರದೇಶದ ಪೊಲೀಸರು 'ವಿಜಯ ವಿಹಾರಂ' ಎಂಬ ಮಾಸ ಪತ್ರಿಕೆಯ ಕಛೇರಿಯ ಮೇಲೆ ಮತ್ತು ಪತ್ರಿಕಾ ವಿತರಣ ಕೇಂದ್ರಗಳ ಮೇಲೆ ದಾಳಿ ಮಾಡಿ ಪತ್ರಿಕೆಯ ಡಿಸೆಂಬರ್ ಸಂಚಿಕೆಯ ೧೦,೦೦೦ ಪ್ರತಿಗಳನ್ನು ವಶಪಡಿಸಿಕೊಂಡರು. ಪತ್ರಿಕಾ ಕಛೇರಿಯನ್ನು ಸೀಲು ಮಾಡಿ ಸಂಪಾದಕ ಟಿ. ವಿ. ರಮಣ ಮೂರ್ತಿಯವರಿಗೆ ಜಾಮೀನುರಹಿತ ವಾರೆಂಟನ್ನು ಜಾರಿ ಮಾಡಿದರು. ಈ ವಿಷಯ ಸಂಪಾದಕರಿಗೆ ಮೊದಲೇ ಗೊತ್ತಾಗಿ ಅವರು ತಲೆಮರೆಸಿಕೊಂಡರು. ಪೊಲೀಸರು ಸಹಸಂಪಾದಕರಾದ ವೀರಭದ್ರರಾವ್ ಮತ್ತು ಜಹಂಗೀರ್ ಅವರನ್ನು ಬಂಧಿಸಿ ಮೂರು ದಿನ ಗೋಪ್ಯ ಸ್ಥಳಕ್ಕೆ ಕೊಂಡೊಯ್ದರು.

ರಮಣ ಮೂರ್ತಿ ಮತ್ತು ಅವರ ಸಹೋದ್ಯೋಗಿಗಳು ಧಾರ್ಮಿಕ ಗುಂಪುಗಳ ನಡುವೆ ದ್ವೇಷ ಬಿತ್ತುವ ಮತ್ತು ಮುಸ್ಲಿಮರ ಧಾರ್ಮಿಕ ನಂಬಿಕೆಗಳಿಗೆ ಆಘಾತವನ್ನುಂಟು ಮಾಡುವ ಅಪರಾಧವನ್ನೆಸಗಿದ್ದಾರೆ ಎಂದು ಅವರನ್ನು ಭಾರತೀಯ ದಂಡ ಸಂಹಿತೆ ೧೫೩ (ಎ) ಮತ್ತು ೨೯೫ (ಎ) ನಿಬಂಧನೆಗಳ ಪ್ರಕಾರ ಆಪಾದನೆಗಳಿಗೆ ಗುರಿಪಡಿಸಲಾಯಿತು. ಪತ್ರಿಕೆಯಲ್ಲಿ ಪ್ರಕಟವಾದ ಒಂದು ಲೇಖನದ ವಿರುದ್ಧ ಮುಸ್ಲಿಮರಿಂದ ದೂರು ಬಂದಿರುವುದಾಗಿ ಪೊಲೀಸರು ಹೇಳುತ್ತಿದ್ದರು.

ಪ್ರಸಿದ್ಧ ಹಿಂದು ಧರ್ಮ ಸುಧಾರಕ ಮತ್ತು ಆರ್ಯಸಮಾಜದ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿ (೧೮೨೪-೧೮೮೩) ಯವರನ್ನು ಕುರಿತ ಒಂದು ಲೇಖನ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದರಲ್ಲಿ ದಯಾನಂದರ 'ಸತ್ಯಾರ್ಥ ಪ್ರಕಾಶ' ಎಂಬ ಪ್ರಸಿದ್ಧ ಗ್ರಂಥದಿಂದ ಕೆಲವು ಭಾಗಗಳನ್ನು ಎತ್ತಿ ಬರೆಯಲಾಗಿತ್ತು. ಇಸ್ಲಾಂ ಧರ್ಮ ಮತ್ತು ಪ್ರವಾದಿ ಮಹಮ್ಮದ್, ಹಿಂದು ಪುರಾಣಗಳಲ್ಲಿ ಬರುವ ದಶಾವತಾರಗಳು ಹಾಗೂ ಕ್ರೈಸ್ತ ಧರ್ಮದಲ್ಲಿ ನಿರೂಪಿಸಲಾದ ಏಸುವಿನ ಮಾತೆಯಾದ ಕನ್ಯಾ ಮೇರಿ ಇವರನ್ನು ಆ ಲೇಖನದಲ್ಲಿ ಟೀಕೆಗೊಳಪಡಿಸಲಾಗಿತ್ತು. ಕಳೆದ ೧೨೫ ವರ್ಷಗಳಿಂದ ಭಾರತದಾದ್ಯಂತ ಎಲ್ಲ ಅಂಗಡಿಗಳು ಮತ್ತು ಸಾರ್ವಜನಿಕ ಗ್ರಂಥಾಲಯಗಳಲ್ಲಿ ಯಥೇಚ್ಛವಾಗಿ ಲಭ್ಯವಿರುವ ಪುಸ್ತಕದಿಂದ ಆ ಭಾಗಗಳನ್ನು ಎತ್ತಿ ಬರೆಯಲಾಗಿತ್ತು. ಇದುವರೆಗೆ ಯಾರೂ ಅದನ್ನು ಧಾರ್ಮಿಕ ಸಾಮರಸ್ಯಕ್ಕೆ ಬಾಧಕವಾಗಿದೆ ಎಂದು ಹೇಳಿರಲಿಲ್ಲ! ಈಗ ಇದ್ದಕ್ಕಿದ್ದಂತೆ ಅದರ ಮೇಲೇಕೆ ಗೂಬೆಯ ಕಣ್ಣು? ಮುಖ್ಯ ಕಾರಣವೇ ಬೇರೆ? ಈ ಪ್ರಕರಣದಲ್ಲಿ ಅತ್ಯುನ್ನತ ಮಟ್ಟದ ನಾಲ್ಕು ಪೊಲೀಸ್ ಕಮಿಷನರುಗಳು ಕಾರ್ಯೋನ್ಮುಖರಾಗಲು ಇರುವ ಕಾರಣಗಳೇ ಬೇರೆ. ವಾಸ್ತವ ಸಂಗತಿ ಏನೆಂದರೆ ''ದೇವ ಮಾನವ'' ನೆಂದು ಕರೆಯಿಸಿಕೊಳ್ಳುವ ಸತ್ಯ ಸಾಯಿಬಾಬಾರ ಲೈಂಗಿಕ ಹಗರಣಗಳಿಗೆ ಸಂಬಂಧಿಸಿದ ಲೇಖನಗಳು 'ವಿಜಯ ವಿಹಾರಂ' ನಲ್ಲಿ ಧಾರಾವಾಹಿಯಾಗಿ ಪ್ರಕಟವಾಗುತ್ತಿದ್ದುವು. ಡಿಸೆಂಬರ್ ೨೦೦೦ದ ಲೇಖನ ಆ ಮಾಲೆಯಲ್ಲಿ ೧೧ ನೆಯದಾಗಿತ್ತು. ಅವೆಲ್ಲಾ ವಿಶ್ವದಾದ್ಯಂತ ಇಂಟರ್‌ನೆಟ್ ಮೂಲಕ ಬಾಬಾರ ಭಕ್ತರ ಗಮನ ಸೆಳೆದಿವೆ. ದಯಾನಂದರ ಕೇವಲ ಕೆಲವು ಉದ್ಧೃತ ವಾಕ್ಯಗಳಿಗೆ ಪ್ರತಿಯಾಗಿ ಬಾಬಾರನ್ನು ಕುರಿತು ೧೦ ಪುಟಗಳು ಮೀಸಲಾಗಿದ್ದವು. ಅಲ್ಲದೆ ಸತ್ಯ ಸಾಯಿಬಾಬಾರ ಅಧಿಕೃತ ವಿದ್ಯಾ ಸಂಸ್ಥೆಯಲ್ಲಿ ಏರ್ಪಡಿಸಲಾಗಿದ್ದ 'ಶೈಕ್ಷಣಿಕ ಮೌಲ್ಯಗಳು' ವಿಚಾರ ಸಂಕಿರಣದಲ್ಲಿ ಭಾಗವಹಿಸಬೇಕಾಗಿದ್ದ ಯುನೆಸ್ಕೋ ದಿಢೀರನೆ ಹಿಂದೆ ಸರಿಯಿತು ಎಂದೂ ತಿಳಿಸಲಾಗಿತ್ತು. ಬಾಬಾರವರು ಮಕ್ಕಳ ಮೇಲೆ ಲೈಂಗಿಕ ಅತ್ಯಾಚಾರವೆಸಗಿದ್ದಾರೆ ಎಂಬ ಆರೋಪವಿರುವುದರಿಂದ ಯುನೆಸ್ಕೋ ಅಂತಹ ತೀರ್ಮಾನ ತೆಗೆದುಕೊಳ್ಳಬೇಕಾಯಿತು ಎಂದು ಬರೆಯಲಾಗಿತ್ತು. ಅದರ ಜೊತೆಗೆ ಹೈದರಾಬಾದ್‌ನ ಭಾರತೀಯ ವಿಚಾರವಾದಿ ಸಂಘದೊಡನೆ ಸೇರಿಕೊಂಡು 'ವಿಜಯ ವಿಹಾರಂ'ನ ಸಂಪಾದಕರು ಸತ್ಯ ಸಾಯಿಬಾಬಾರ ಜಯಂತಿ ಉತ್ಸವಕ್ಕೆ ಹೋಗಿಬರಲು ಭಕ್ತರಿಗೆ ಶೇ. ೫೦ ರೈಲ್ವೇ ರಿಯಾಯಿತಿ ನೀಡುವುದು ನ್ಯಾಯಬಾಹಿರ ಎಂದು ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಹೂಡಲು ತೀರ್ಮಾನಿಸಿರುವುದಾಗಿ ಪ್ರಕಟಿಸಿತ್ತು.

ಭಾರತದ ಪ್ರಧಾನಮಂತ್ರಿ, ಆಂಧ್ರ ಪ್ರದೇಶದ ಮುಖ್ಯಮಂತ್ರಿ ಮತ್ತು ರಾಜ್ಯದ ಎಲ್ಲ ಪೊಲೀಸ್ ಅಧಿಕಾರಿಗಳು ಸತ್ಯ ಸಾಯಿಬಾಬಾರ ಭಕ್ತರೇ ಆಗಿದ್ದಾರೆ. ಈ ಕಾರಣದಿಂದ ಮಾನವತಾವಾದಿಗಳು ಮತ್ತು ವಿಚಾರವಾದಿಗಳನ್ನು ಬಲಿಪಶುಗಳನ್ನಾಗಿ ಪರಿಗಣಿಸಲಾಗುತ್ತಿದೆ ಎಂದು 'ವಿಜಯ ವಿಹಾರಂ'ನ ಸಂಪಾದಕ ಮತ್ತು ಭಾರತೀಯ ವಿಚಾರವಾದಿ ಸಂಘದ ನಾಯಕರು ಆರೋಪಿಸುತ್ತಿದ್ದಾರೆ. ಇದಕ್ಕೆ ಪೂರಕವಾಗಿ ಅಂತರ ರಾಷ್ಟ್ರೀಯ ಮಾನವಿಕ ಮತ್ತು ನೈತಿಕ ಸಂಘಟನೆ ಎಂಬ ಒಂದು ಸಂಸ್ಥೆ ಈ ತುರ್ತು ಪರಿಸ್ಥಿತಿಗೆ ಕ್ಷಿಪ್ರವಾಗಿ ಪ್ರತಿಕ್ರಿಯಿಸಿದೆ. ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಧಾರ್ಮಿಕ ಸ್ವಾತಂತ್ರ್ಯ ಪರಿಶೀಲನಾ ಸಮಿತಿಗೆ ತುರ್ತು ಸಂದೇಶವನ್ನು ಕಳಿಸಿ ಅದನ್ನು ಎಚ್ಚರಗೊಳಿಸಿದೆ ಮತ್ತು ಈ ಪ್ರಕರಣವನ್ನು ಒಂದೇ ಸಮನೆ ಗಮನಿಸುತ್ತಿರಲು ಒಂದು ವಿಶೇಷ ವೆಬ್‌ಸೈಟನ್ನು ಪ್ರಾರಂಭಿಸಿದೆ (www.iheu.org). ಬಂಧನದಿಂದ ತಪ್ಪಿಸಿಕೊಂಡ ರಮಣ ಮೂರ್ತಿಯ ಫೋಟೋ ಮತ್ತು ಅವರು ಬಂದು ಸಾರ್ವಜನಿಕ ಸಭೆಯಲ್ಲಿ ದಿಢೀರನೆ ಹಾಜರಾದ ವಿವರಗಳು ಅದರಲ್ಲಿ ದೊರೆಯುತ್ತವೆ.

ಅಂತರರಾಷ್ಟ್ರೀಯ ಮಾನವಿಕ ಮತ್ತು ನೈತಿಕ ಸಂಘಟನೆಯ (IHEU) ಅಧ್ಯಕ್ಷ ಲೆವಿ ಫ್ರಾಗೆಲ್ ಆಂಧ್ರ ಪ್ರದೇಶದ ಮುಖ್ಯಮಂತ್ರಿಗಳಿಗೆ ಒಂದು ಪ್ರತಿಭಟನಾ ಸಂದೇಶವನ್ನು ಕಳಿಸಿದ್ದಾರೆ. ಅದರಲ್ಲಿ ಸಾಮಾಜಿಕ ಸುಧಾರಣೆಯ ದೃಷ್ಟಿಯಿಂದ ಧಾರ್ಮಿಕ ಮೂಢನಂಬಿಕೆಗಳನ್ನು ಟೀಕಿಸುವ ಹಕ್ಕನ್ನು ಎತ್ತಿಹಿಡಿದು, ಕೂಡಲೆ ಪತ್ರಿಕೋದ್ಯಮಿಗಳ ಮೇಲೆ ಆಗುತ್ತಿರುವ ದಬ್ಬಾಳಿಕೆಯನ್ನು ನಿಲ್ಲಿಸಬೇಕೆಂದಿದ್ದಾರೆ. ಅಂತರರಾಷ್ಟ್ರೀಯ ಸಂಸ್ಥೆಯು ರಮಣ ಮೂರ್ತಿ ಮತ್ತು ಭಾರತೀಯ ವಿಚಾರವಾದಿಗಳ ಸಂಘಕ್ಕೆ ತಮ್ಮ ಸಂಪೂರ್ಣ ಬೆಂಬಲವನ್ನು ವ್ಯಕ್ತಪಡಿಸಿದೆ. ಭಾರತದ ಧರ್ಮಾತೀತ, ಸಮಾಜವಾದಿ, ಪ್ರಜಾಸತ್ತಾತ್ಮಕ ಸಂವಿಧಾನದ ನಿಯಮ ೫೧ (ಎ) (ಎಚ್) ನ್ನು ಮುಖ್ಯಮಂತ್ರಿಗಳು ಗಮನಿಸಬೇಕೆಂದು ನೆನಪು ಮಾಡಿದೆ. ಅದರಲ್ಲಿ ವೈಜ್ಞಾನಿಕ ಮನೋಭಾವ, ಮಾನವೀಯತೆ, ಅನ್ವೇಷಣಾ ಪ್ರವೃತ್ತಿ ಮತ್ತು ಸುಧಾರಣೆಗಳನ್ನು ಅಭಿವೃದ್ಧಿಪಡಿಸುವುದು ಭಾರತದ ಪ್ರತಿಯೊಬ್ಬ ಪ್ರಜೆಯ ಮೂಲಭೂತ ಕರ್ತವ್ಯ ಎಂದು ಘೋಷಿಸಲಾಗಿದೆ. ವಿಚಾರ ವಿಮರ್ಶೆಗೆ ಸಮ್ಮತವಾಗದ ಧಾರ್ಮಿಕ ಮತ್ತು ಸಾಮಾಜಿಕ ನಂಬಿಕೆಗಳು ಹಾಗೂ ಆಧುನಿಕ ಮತ್ತು ನಾಗರಿಕ ನಡೆವಳಿಕೆಗಳಿಗೆ ಹೊಂದಿಕೆಯಾಗದ ವರ್ತನೆಗಳ ವಿರುದ್ಧ ಹೋರಾಡುವುದು ತಮ್ಮ ಕರ್ತವ್ಯವೆಂದು ಮಾನವತಾವಾದಿಗಳು ಭಾವಿಸುತ್ತಾರೆ. ಪ್ರಾಮಾಣಿಕ ಸಮಾಜ ಸುಧಾರಣಾ ಚಳುವಳಿಗಳು ಸಮಾಜದ ನೈತಿಕ ಮಟ್ಟವನ್ನು ಉತ್ತಮಗೊಳಿಸುವ ಪ್ರಯತ್ನಗಳಾಗಿವೆಯೇ ಹೊರತು ಧಾರ್ಮಿಕ ನಂಬಿಕೆಗಳಿಗೆ ಆಘಾತವನ್ನುಂಟು ಮಾಡುವ ದುರುದ್ದೇಶಗಳನ್ನು ಹೊಂದಿಲ್ಲ.

ಈ ಅಂತರರಾಷ್ಟ್ರೀಯ ಮಾನವಿಕ ಮತ್ತು ನೈತಿಕ ಸಂಘಟನೆಯ ಕರೆಯನ್ನು ಸ್ವಾಗತಿಸಿರುವ ಪ್ರಸಿದ್ಧ ಪರಿಸರವಾದಿ ಮೇಧಾ ಪಾಟ್ಕರ್, ಲೇಖಕ ಸುರೇಂದ್ರ ಮೋಹನ್, ಹಿಂದಿನ ಕೇಂದ್ರ ಮಂತ್ರಿ ಮಧು ದಂಡವತೆ ಮತ್ತು ಆಂಧ್ರದ ಬುದ್ಧಿಜೀವಿಗಳು ಈಗಾಗಲೇ ಆಂಧ್ರ

*(ಮುಂದಿನ ಪುಟಕ್ಕೆ)*

**ಸೂಫಿ ಕಥೆ**

# ಬಾಗ್ದಾದ್ ನಗರಕ್ಕೆ ಮೃತ್ಯುವಿನ ಆಗಮನ

ಬಾಗ್ದಾದಿನ ಸೂಫಿಯ ಶಿಷ್ಯರಲ್ಲೊಬ್ಬನು ಒಂದು ದಿನ ಪ್ರವಾಸಿ ಮಂದಿರದಲ್ಲಿ ಕುಳಿತಿದ್ದ. ಇಬ್ಬರು ವ್ಯಕ್ತಿಗಳಂತಹ ಎರಡು ಆಕೃತಿಗಳು ಮಾತನಾಡಿಕೊಳ್ಳುತ್ತಿರುವುದನ್ನು ಅವನು ಗಮನಿಸಿದ. ಅವರ ಮಾತುಗಳನ್ನು ಕಿವಿಗೊಟ್ಟು ಆಲಿಸಿದ. ಆ ಇಬ್ಬರಲ್ಲಿ ಒಬ್ಬನಂತೂ ಯಮಲೋಕದಿಂದ ಬಂದವನೆಂಬುದು ಖಚಿತಗೊಂಡಿತು.

''ಮುಂದಿನ ಮೂರು ವಾರಗಳ ಕಾಲ ಈ ನಗರದಲ್ಲಿ ನಾನು ವಾಸ್ತವ್ಯ ಹೂಡಬೇಕಾಗಿದೆ. ಇಲ್ಲಿಂದ ಕರೆದೊಯ್ಯಬೇಕಾದ ಹಲವಾರು ಜನರ ಪಟ್ಟಿಯೇ ನನ್ನಲ್ಲಿದೆ'' ಎಂಬುದಾಗಿ ಆ ಯಮಕಿಂಕರನು ಮತ್ತೊಬ್ಬನಿಗೆ ಹೇಳುತ್ತಲಿದ್ದ.

ಶಿಷ್ಯನಿಗೆ ಮೈ ಬೆವರತೊಡಗಿತು. ಆ ಇಬ್ಬರು ಪ್ರವಾಸಿ ಮಂದಿರದಲ್ಲಿರುವವರೆಗೂ ಕಣ್ಣಿಗೆ ಬೀಳದಂತೆ ಅಡಗಿಕೊಂಡು ಕುಳಿತ. ಯಮಕಿಂಕರನ ಪಾಶದಿಂದ ಪಾರಾಗುವ ಬಗೆ ಹೇಗೆ ಎಂಬ ಚಿಂತೆಯು ಅವನನ್ನು ಆವರಿಸಿಕೊಂಡಿತು. ಮೃತ್ಯುವಿಗೆ ಕೈಕೊಟ್ಟು ನುಣುಚಿಕೊಳ್ಳಲು ತನ್ನ ಬುದ್ಧಿಶಕ್ತಿಯನ್ನೆಲ್ಲಾ ಉಪಯೋಗಿಸಿದ. ಒಂದು ಉಪಾಯ ಹೊಳೆಯಿತು. ಯಮಕಿಂಕರನು ಆಗಮಿಸಿರುವುದು ಬಾಗ್ದಾದ್ ನಗರವನ್ನು ಪ್ರವೇಶಿಸುವ ಸಲುವಾಗಿಯೇ. ನಾನು ಅಲ್ಲಿಗೆ ಹೋಗದೇ ಇದ್ದರೆ! ಬಾಗ್ದಾದ್‌ನಿಂದ ಬಹುದೂರದ ಬೇರೊಂದು ಊರಿಗೆ ಅವನ ಪಾಶವು ತನ್ನನ್ನು ತಲುಪಲು ಸಾಧ್ಯವಾಗದಷ್ಟು ದೂರದ ಊರಿಗೆ ಹೋಗಿಬಿಟ್ಟರೆ! ಅವನ ಪಾಶದಿಂದ ತಪ್ಪಿಸಿಕೊಂಡಂತೆಯೇ ಸರಿ ಎಂದುಕೊಂಡ.

ಹೀಗೆ ಯೋಚಿಸಿದ ಅವನು ವಾಯುವೇಗದಿಂದ ಓಡುವ ಕುದುರೆಯೊಂದನ್ನು ಬಾಡಿಗೆಗೆ ಪಡೆದ. ಅದರ ಮೇಲೇರಿ ಬಾಗ್ದಾದ್‌ನಿಂದ ಅದೆಷ್ಟೋ ದೂರವಿರುವ ಸಾಮರ್‌ಕಂಡ್ ನಗರದ ಮಾರ್ಗ ಹಿಡಿದು ಹಗಲು ರಾತ್ರಿ ಒಂದೇ ಸಮನೆ ದಾರಿ ಸವೆಸಿದ.

ಇತ್ತ ಬಾಗ್ದಾದ್ ನಗರವನ್ನು ಪ್ರವೇಶಿಸಿದ ಯಮಕಿಂಕರನು ಅಲ್ಲಿನ ಸೂಫಿಯನ್ನು ಸಂಧಿಸಿದ. ಅವರಿವರೆಂಬಂತೆ ಹಲವು ಬಗೆಯ ಜನಗಳನ್ನು ಕುರಿತು ಅವರು ಪರಸ್ಪರ ಮಾತುಕತೆ ನಡೆಸಿದರು. ಮಾತಿನ ನಡುವೆ ಯಮಕಿಂಕರನು ಏನನ್ನೋ ನೆನೆಪಿಸಿಕೊಂಡವನಂತೆ, 'ಆ ನಿನ್ನ ಶಿಷ್ಯ... ಎಂತದೋ ಹೆಸರು... ಅವನೆಲ್ಲಿ ? ಕಾಣ್ತಿಲ್ವಲ್ಲಾ' ಎಂದು ಕೇಳಿದ.

''ಇದೇ ಊರಲ್ಲಿ ಎಲ್ಲೋ ಇರಬೇಕು. ಬಹುಶಃ ಯಾವುದೋ ಯಾತ್ರಿಕರ ಗುಂಪು ಹೂಡಿರುವ ಶಿಬಿರದಲ್ಲಿ ಅಲ್ಲಾನ ಗುಣಗಾನ ಮಾಡುತ್ತ ಮೈ ಮರೆತಿರಬಹುದು'' ಎಂದು ಸೂಫಿ ಹೇಳಿದ.

''ಆಶ್ಚರ್ಯ. ನನ್ನ ಪಟ್ಟಿಯಲ್ಲಿ ಅವನ ಹೆಸರಿದೆ. ಹೌದು. ಇಲ್ಲೇ ಇದೆ. ಇದಕ್ಕಾಗಿಯೇ ನಾನು ಸಾಮರ್‌ಕಂಡ್ ನಗರಕ್ಕೂ ಹೋಗುವುದು ಈಗ ಅನಿವಾರ್ಯವಾಗಿಬಿಟ್ಟಿದೆ. ನನಗಿರುವ ನಾಲ್ಕು ವಾರಗಳ ಗಡುವಿನಲ್ಲಿ ಈ ಕೆಲಸ ಮುಗಿಸಲೇಬೇಕು'' ಎಂದು ಯಮಕಿಂಕರನು ನುಡಿದ.

*ಕನ್ನಡಕ್ಕೆ : ಗಂಗಾಧರ ಮೂರ್ತಿ* — *ಸೂಫಿ ಫುದಾಯಲ್ ಅಯಾದ್*

*(ಹಿಂದಿನ ಪುಟದಿಂದ)*

ಪ್ರದೇಶದ ಸರ್ಕಾರಕ್ಕೆ ತಮ್ಮ ಪ್ರತಿಭಟನೆಗಳನ್ನು ಸಲ್ಲಿಸಿದ್ದಾರೆ.

ಡಿಸೆಂಬರ್ ೨೨ ರಂದು ಆಂಧ್ರ ಪ್ರದೇಶದ ಉಚ್ಚ ನ್ಯಾಯಾಲಯ ರಮಣ ಮೂರ್ತಿಯವರ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ ಮಧ್ಯ ಪ್ರವೇಶಿಸಿದ ಪೊಲೀಸರಿಗೆ ಛೀಮಾರಿ ಹಾಕಿ ವಶಪಡಿಸಿಕೊಂಡ ಆಸ್ತಿ ಪಾಸ್ತಿಗಳನ್ನು ಕೂಡಲೆ ಹಿಂತಿರುಗಿಸಲು ಆಜ್ಞೆ ಮಾಡಿದೆ. ತನ್ನ ಮೇಲಿನ ಜಾಮೀನು ರಹಿತ ಬಂಧನದ ಆಜ್ಞೆಯನ್ನು ರದ್ದುಪಡಿಸಲು ರಮಣ ಮೂರ್ತಿ ಕೋರಿರುವ ಇನ್ನೊಂದು ಪ್ರಕರಣ ಇದೇ ಜನವರಿ ೧೮ ರಂದು ವಿಚಾರಣೆಗೆ ಬಂದಿದೆ. ವಿವರಗಳು ತಿಳಿದಿಲ್ಲ. ರಮಣ ಮೂರ್ತಿ ಈಗಿನ್ನೂ ಭೂಗತರಾಗಿಯೇ ಇದ್ದಾರೆ. ವಿಶ್ವ ಮಾನವಿಕ ಮತ್ತು ನೈತಿಕ ಸಂಘಟನೆಯನ್ನು ದೂರವಾಣಿ ಮೂಲಕ ಸಂಪರ್ಕಿಸಿ ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಾ ''ಈ ಹೋರಾಟ ನಿಲ್ಲದೆ ಮುಂದುವರಿಯುತ್ತದೆ. ಪೊಲೀಸರ ಬೆದರಿಕೆಗೆ ತಲೆಬಾಗುವ ಪ್ರಶ್ನೆಯೇ ಇಲ್ಲ. ನಾನು ಒಬ್ಬ ಮುಕ್ತ ಮತ್ತು ಸ್ವತಂತ್ರ ಮಾನವನೆಂಬುದನ್ನು ಸಾಬೀತುಪಡಿಸಲು ಮತ್ತು ನನ್ನ ಮುಕ್ತ ಚಿಂತನೆಯನ್ನು ಯಾರೂ ತಡೆಯಲು ಶಕ್ಯವಿಲ್ಲ ಎಂಬುದನ್ನು ತೋರಿಸಿಕೊಡಲು ಪ್ರಯತ್ನಿಸುತ್ತೇನೆ'' ಎಂದಿದ್ದಾರೆ. ಸಾರ್ವಜನಿಕರು ಈ ಪ್ರಕರಣದ ಬಗ್ಗೆ ಕೂಡಲೆ ಪ್ರತಿಭಟನೆಯನ್ನು ಸಲ್ಲಿಸಿ ಅದರ ಪ್ರತಿಯನ್ನು campaign@iheu.org. ನಲ್ಲಿ ದಾಖಲಿಸಲು ಕೋರಲಾಗಿದೆ.

ಬಿ. ಎ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ದೃಷ್ಟಿ ಭ್ರಮಣೆ

### ಗಿರಕಿ ಹೊಡೆಸುವ ಬಳೆಗಳು



ಈ ಮೂರು ಬಳೆಗಳಲ್ಲಿ ಯಾವುದು ಸ್ವಲ್ಪವೂ ಅಂಕುಡೊಂಕಿಲ್ಲದೆ ಗುಂಡಾಗಿದೆ ಹೇಳಬಲ್ಲಿರಾ ?

ಉತ್ತರ : ಮೂರೂ ಗುಂಡಾಗಿಯೇ ಇವೆ. ಹಿನ್ನೆಲೆಯಲ್ಲಿರುವ ರೇಖಾ ವಿನ್ಯಾಸ ನಿಮ್ಮಲ್ಲಿ ಬಳೆಗಳು ಡೊಂಕಾಗಿರುವಂತೆ ಭ್ರಮೆ ಹುಟ್ಟಿಸುತ್ತವೆ.

### ಆಟವಾಡುವ ರೇಖೆಗಳು



ಈ ಎರಡು ತೆಳ್ಳಗಿನ ರೇಖೆಗಳಲ್ಲಿ ಯಾವುದು ಹೆಚ್ಚು ಉದ್ದವಾಗಿದೆ ?

ವಿವರಣೆ : ಎರಡರ ಅಳತೆಯೂ ಒಂದೇ. ಅಕ್ಕಪಕ್ಕದಲ್ಲಿರುವ ದಪ್ಪನಾದ ರೇಖೆಗಳು ಉದ್ದಳತೆಗಳಲ್ಲಿ ಬೇರೆ ಬೇರೆ ಆಗಿರುವುದರಿಂದ ವ್ಯತ್ಯಾಸವಿರುವಂತೆ ಕಾಣಿಸುತ್ತದೆ.

# THE HUTCHINSON POCKET DICTIONARY SERIES

This recently launched range of pocket dictionaries meet a genuine need. Produced to a compact design and suitable for home and school use, the *Hutchinson Pockets* are none the less clearly laid out and elegantly designed to a format that is more readable than any other pocket dictionaries available. Providing up-to-date essential information in a nutshell, each topic is clearly explained, and, where appropriate, illustrated.



Rs. 60



Rs. 60



Rs. 60



Rs. 60



Rs. 70



Rs. 60



Rs. 60



Rs. 60

*OTHER TITLES IN THIS SERIES .......*

| | |
|---|---|
| Hutchinson Pocket Dictionary of Spelling | Rs. 60 |
| Hutchinson Pocket Dictionary of Chemistry | Rs. 60 |
| Hutchinson Pocket Dictionary of Biology | Rs. 60 |
| Hutchinson Pocket Dictionary of Science | Rs. 70 |
| Hutchinson Pocket Dictionary of Quotations | Rs. 70 |
| Hutchinson Pocket Guide of Countries of the World | Rs. 60 |
| Hutchinson Pocket Encyclopedia | Rs. 90 |

***......Ideal for study use at school or home..***

There are now 15 titles in the popular Hutchinson Pocket Series available at special Low-price Indian Reprints, that cover a broad range of subjects. These books are small but perfectly formed. Easy to carry, the books are concise and well cross-referenced and represent very good value for money. Ideal for study use at school or home.

*Available at all leading book-shops*
*or write to*

## GENERAL BOOK DEPOT

1691, Nai Sarak, Post Box 1220, Delhi - 110006 (India)
Tel : (011) 326 3695 Fax : (011) 294 0861

# ಬೇಟೆಗಾರನ ನಾಯಿ(ಗಳು)

**ಮೊನ್ನೆ** ನಿನ್ನೆಯವರೆಗೂ ಸಂಜೆ ಎತ್ತಿದೊಡನೆ ಕಣ್ಣಿಗೆ ಬೀಳುತ್ತಿದ್ದವು ಎರಡು ಪ್ರಕಾಶಮಾನ ಕಾಯಗಳು - ಗುರು ಮತ್ತು ಶನಿ. ಈಗ ಅವು ಪಶ್ಚಿಮದ ಅಂಚಿಗೆ ಸರಿಯುತ್ತಿವೆ. ನೆತ್ತಿಯ ಮೇಲೆ ಕಾಣುವ ಸಿರಿಯಸ್ (ಲುಬ್ಧಕ) ಅತಿ ಪ್ರಕಾಶಮಾನವಾದ ನಕ್ಷತ್ರ ಈಗ ಮುಖ್ಯ ಆಕರ್ಷಣೆಯಾಗಿದೆ. ಇದು ತನ್ನ ಸುತ್ತಲಿನ ನಕ್ಷತ್ರಗಳೊಡನೆ ಸೇರಿ ನಾಯಿಯ ಆಕಾರವನ್ನು ನೆನಪಿಗೆ ತರುತ್ತದೆ. ಆದ್ದರಿಂದ ಈ ನಕ್ಷತ್ರ ಪುಂಜದ ಹೆಸರು 'ಮಹಾಶ್ವಾನ' ಎಂದು. ಇದು ಬೆಳಗಿನ ಝಾವ ಸೂರ್ಯೋದಯಕ್ಕೆ ಮುಂಚೆ ಕಂಡಿತೆಂದರೆ ಮಳೆಗಾಲದ ಆರಂಭ; ನೈಲ್ ನದಿಯಲ್ಲಿ ಪ್ರವಾಹದ ಮುನ್ಸೂಚನೆ ಕೊಡುವ ಈ ನಕ್ಷತ್ರಕ್ಕೆ ಇಜಿಪ್ಷಿಯನ್ನರು 'ನಾಯಿ ನಕ್ಷತ್ರ' ಎಂದು ಹೆಸರಿಟ್ಟರು. 'ಮಹಾ' ಎಂಬ ವಿಶೇಷಣ ಏಕೆ ? ಏಕೆಂದರೆ ಸಮೀಪದಲ್ಲೇ ಇನ್ನೊಂದು ಪುಟ್ಟ ನಾಯಿ ಲಘುಶ್ವಾನವೂ ಇದೆ. ಪ್ರೋಸಿಯೋನ್ (ಪೂರ್ವಶ್ವಾನ) ಎಂಬುದು ಲಘುಶ್ವಾನದ ಪ್ರಕಾಶಮಾನ ನಕ್ಷತ್ರ. ತಲೆ ಎತ್ತಿ ನೋಡಿ. ತ್ರಿಭುಜಾಕೃತಿಯನ್ನು ಕಲ್ಪಿಸಿಕೊಂಡರೆ ಅದರ ಮೂರು ಮೂಲೆಗಳಲ್ಲಿ ಸಿರಿಯಸ್ (ಲುಬ್ಧಕ), ಬಿಟಲ್ ಜ್ಯೂಸ್ (ವ್ಯಾಧಭುಜ), ಪ್ರೋಸಿಯೋನ್ (ಪೂರ್ವಶ್ವಾನ) ಕಾಣುತ್ತವೆ. ಚಳಿಗಾಲದುದ್ದಕ್ಕೂ ಸಂಜೆಯ ಆಕಾಶದಲ್ಲಿ ಇವು ಕಾಣುವುದರಿಂದ ಇದಕ್ಕೆ ಚಳಿಗಾಲದ ತ್ರಿಭುಜ ಎಂದು ಹೆಸರಿಸಿದವರು ಪ್ಯಾಟ್ರಿಕ್ ಮೂರ್ (ಪಾಶ್ಚಾತ್ಯ ನಕ್ಷತ್ರ ವೀಕ್ಷಕರಿಗೆ ಈ ಹೆಸರು ಸುಪರಿಚಿತ). ಈ ಎರಡು ಶ್ವಾನಗಳ ನಡುವೆ ಇರುವ ಕ್ಷೀಣವಾದ ನಕ್ಷತ್ರಗಳು ಮಾನೊಸೆರಸ್ ಎಂಬ ಪುಂಜಕ್ಕೆ ಸೇರಿವೆ. ಈ ಪ್ರಾಣಿ ಮಾನೊಸೆರೆಸ್ ಯೂನಿಕಾರ್ನ್ ಎಂದು ಪರಿಚಿತ. ಏಕಶೃಂಗಿ ಎಂಬುದು ನಮ್ಮಲ್ಲಿಯ ಹೆಸರು. ಇದಕ್ಕೆ ಕುದುರೆಯ ತಲೆ, ಜಿಂಕೆಯ ಕಾಲುಗಳು, ಸಿಂಹದ ಬಾಲ, ಸಾಲದೆಂಬಂತೆ ಹಣೆಯ ಮೇಲೆ ಒಂದೇ ಒಂದು ಕೊಂಬು - ಇಂಥ ವಿಚಿತ್ರ ಪ್ರಾಣಿಯನ್ನು ಊಹಿಸಿಕೊಳ್ಳುವುದು ಎಷ್ಟು ಕಷ್ಟವೋ,

ಲಘುಶ್ವಾನ
ವ್ಯಾಧಭುಜ
ಒರ್ೖಯನ್
ಏಕಶೃಂಗಿ
ಪೂರ್ವಶ್ವಾನ
ಲುಬ್ಧಕ
ಮಹಾಶ್ವಾನ

**ಚಳಿಗಾಲದ ತ್ರಿಭುಜ ಜಾರ್ಜ್ ರೀಡ್ ಕಂಡಂತೆ**

ಆಕಾಶದಲ್ಲಿ ಗುರುತಿಸುವುದೂ ಅಷ್ಟೇ ಕಷ್ಟ. ಈ ಕಷ್ಟವನ್ನು ಜಾರ್ಜ್ ರೀಡ್ ಅವರ ವ್ಯಂಗ್ಯಚಿತ್ರ ಸ್ವಲ್ಪಮಟ್ಟಿಗೆ ಪರಿಹರಿಸುತ್ತದೆ. ಹಿಂಗಾಲ ಮೇಲೆ ನಿಂತಿರುವ (ಮಹಾ)ಶ್ವಾನ ಆಶೆಬುರುಕನಂತೆ ಕಾಣುತ್ತದೆ (ಅಂದ ಹಾಗೆ ಲುಬ್ಧಕ ಎಂಬ ಪದಕ್ಕೆ ಆಶೆಬುರುಕ ಎಂಬ ಅರ್ಥವೂ ಇದೆ).




(ಲಘು) ಶ್ವಾನ ಮೂಳೆಯ ತುಂಡಾಗಿ ನಾಯಿಯ ನಾಲಗೆಯಲ್ಲಿ ನೀರೂರಿಸಿದೆ. ಮಧ್ಯೆ ಏಕಶೃಂಗಿ ಸತ್ತುಬಿದ್ದಿದೆ. ಈ ಕಲ್ಪನೆ ಏನೇ ಇರಲಿ, ಒರ್ೖಯನ್‌ನ ಸಹಾಯದಿಂದ ಈ ನಕ್ಷತ್ರ ಪುಂಜಗಳನ್ನು ಗುರುತಿಸುವುದು ಸುಲಭವಾಗಿದೆ.

ಮಹಾಶ್ವಾನ ಎಂಬ ಈ ನಾಯಿಯ ಎದೆಯ ಭಾಗವನ್ನು ದುರ್ಬೀನಿನಿಂದ ಗಮನಿಸಿ. ಅಲ್ಲೊಂದು ಸುಂದರ (ನಕ್ಷತ್ರ) ಗುಚ್ಛ ಕಾಣುತ್ತದೆ. ಚಾರ್ಲ್ಸ್ ಮೆಸಿಯರ್ ಎಂಬಾತ ಗುರುತಿಸಿ ಮಾಡಿದ ಪಟ್ಟಿಯಲ್ಲಿ ೪೧ ನೆಯ ವಸ್ತು ಇದು - ಆದ್ದರಿಂದ M೪೧ ಎಂಬುದೇ ಇದರ ಹೆಸರು. ಮಹಾಶ್ವಾನ ಮತ್ತು ಲಘುಶ್ವಾನಗಳೆರಡರ ಪ್ರಕಾಶಮಾನ ನಕ್ಷತ್ರಗಳಿಗೆ (ಆಲ್ಫಾ ಕ್ಯಾನಿಸ್ ಮೇಜರ್ ಮತ್ತು ಆಲ್ಫಾ ಕ್ಯಾನಿಸ್ ಮೈನರ್ ಅಂದರೆ ಸಿರಿಯಸ್ ಮತ್ತು ಪ್ರೋಸಿಯೋನ್) ಶ್ವೇತ ಕುಬ್ಜ ಸಂಗಾತಿಗಳಿವೆ.

ಗುರು ಮತ್ತು ಶನಿಗ್ರಹಗಳು ದಿನೇ ದಿನೇ ಪಶ್ಚಿಮದ ಅಂಚಿಗೆ ಸರಿಯುತ್ತವೆ. ತಿಂಗಳ ಕೊನೆಯಲ್ಲಿ ಸಂಧ್ಯಾ ಪ್ರಕಾಶದಲ್ಲಿ ಕರಗಿಹೋದಾಗ ಗುರುತಿಸುವುದೇ ಕಷ್ಟವಾಗುತ್ತದೆ. ೨೭ರಂದು ಬಾಲಚಂದ್ರನ ಸಹಾಯ ಪಡೆದು ಗುರುತಿಸಿದ ಮೇಲೆ ಇವು ಸಂಜೆಯ ಆಕಾಶದಿಂದ ನಿರ್ಗಮಿಸುತ್ತವೆ.

ಶುಕ್ರಗ್ರಹ ಸಂಜೆಯಿಂದ ಬೆಳಗಿನ ಝಾವಕ್ಕೆ ಜಾರಿದುದನ್ನು ಕಳೆದ ತಿಂಗಳೇ ಕಂಡೆವಲ್ಲವೇ ? ತಿಂಗಳ ಮೊದಲ ಭಾಗದಲ್ಲಿ ಬುಧಗ್ರಹವೂ ಬೆಳಗಿನ ಝಾವ ಕಾಣುತ್ತದೆ. ೬ರಂದು ಅವೆರಡರ ನಡುವಿನ ಕೋನ ಕನಿಷ್ಠ. ಆಗ ಶುಕ್ರನ ಸಹಾಯದಿಂದ ಬುಧನನ್ನು ಗುರುತಿಸುವ ಪ್ರಯತ್ನ ಮಾಡಬಹುದು. ತಿಂಗಳ ಕೊನೆಯ ಹೊತ್ತಿಗೆ ಬುಧ ಬೆಳಿಗ್ಗೆ ಕಾಣದೇ ಸಂಜೆಯ ಆಕಾಶದಲ್ಲಿ ನೋಡಲು ಸಿಗುತ್ತದೆ. ಶುಕ್ರ ಮಾತ್ರ ಬೆಳಗಿನ ಝಾವವೇ ಕಾಣುತ್ತದೆ. ಕಳೆದ ತಿಂಗಳು ಮೀನದಿಂದ ಹಿಮ್ಮುಖ ಚಲನೆ ಆರಂಭಿಸಿದ ಶುಕ್ರ ಕುಂಭದ ದಿಕ್ಕಿಗೆ ಹೊರಟಿತ್ತು. ಈ ತಿಂಗಳ ೨೦ರವರೆಗೂ ಅದೇ ದಿಕ್ಕಿನಲ್ಲಿ ಮುಂದುವರಿದು ಆಮೇಲೆ ಪುನಃ ಮೇಷದತ್ತ ತಿರುಗುತ್ತದೆ. ಈ ಚಲನೆಯನ್ನು ಗುರುತಿಸಲು ಪ್ರತಿದಿನ ಅದರ ಚಲನೆಯನ್ನು ನಿಮ್ಮಲ್ಲಿಯ ನಕ್ಷೆಯಲ್ಲಿ ಗುರುತುಮಾಡಿಕೊಳ್ಳಬಹುದು. ಅದರ ಮುಂದಿನ ಚಲನೆ ನೇರ – ಮೀನದಿಂದ ಮೇಷ, ಮೇಷದಿಂದ ವೃಷಭ..... ಹೀಗೆ.

ಕೆಂಪುಗ್ರಹ ಮಂಗಳ ಮಧ್ಯ ರಾತ್ರಿ ಉದಯಿಸಿ, ಬೆಳಗಿನ ಝಾವ ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ಕಾಣುತ್ತದೆ. ಒಫಿಯೂಕಸ್ - ಧನುರಾಶಿಯ ನಡುವೆ ಕಾಣುವ ಇದರ ಸಹಾಯದಿಂದ ಧನುರಾಶಿಯನ್ನೂ ಸಾವಿರಾರು ನಕ್ಷತ್ರಗಳಿಂದ ತುಂಬಿದ (ಆಕಾಶಗಂಗೆಯ) ಕೇಂದ್ರಭಾಗವನ್ನೂ ನೋಡಬಹುದು.

ಈ ತಿಂಗಳಲ್ಲಿ ಚಂದ್ರನ ಸಹಾಯದಿಂದ ಏಕಾಂಗಿ ಚಿತ್ತಾನಕ್ಷತ್ರವನ್ನು ಪತ್ತೆ ಮಾಡಬಹುದು - ಚಿತ್ತಾ ಪೂರ್ಣಿಮೆ (ಬೆಂಗಳೂರಿನ ಕರಗ)ಯಂದು.

ಎರಡು ಮುಖ್ಯ ಉಲ್ಕಾ ವೃಷ್ಟಿಗಳು ಈ ತಿಂಗಳಲ್ಲಿವೆ. ಲೈರಾ ಎಂಬ ನಕ್ಷತ್ರಪುಂಜದಿಂದ ಹೊರಟಂತೆ ಕಾಣುವುವು ಲಿರಿಡ್ಸ್ - ಇವು ೧೮೬೧ರಲ್ಲಿ ಥ್ಯಾಚರ್ ಎಂಬ ಹೆಸರಿನ ಧೂಮಕೇತು ಬಿಟ್ಟುಹೋದ ಧೂಳಿನ ಕಣಗಳು. ಇದೇ ರೀತಿ ಕುಂಭರಾಶಿಯ ಈಟಾ ಎಂಬ ಸಂಖ್ಯೆಯ ನಕ್ಷತ್ರದಿಂದ ಹೊರಡುವಂತೆ ಕಾಣುವ ಉಲ್ಕೆಗಳು ಈಟಾ ಅಕ್ವಾರಿಡ್ಸ್. ಇವುಗಳ ಮೂಲ ಹ್ಯಾಲೀ ಧೂಮಕೇತು. ಗಂಟೆಗೆ ೨೦-೩೦ ಉಲ್ಕೆಗಳನ್ನು ನಿರೀಕ್ಷಿಸಬಹುದು. ಎರಡೂ ಗುಂಪಿನ ಉಲ್ಕೆಗಳ ಪ್ರಖರತೆಯಲ್ಲಿ ಮತ್ತು ವೇಗದಲ್ಲಿ ವ್ಯತ್ಯಾಸ ಇರುವುದನ್ನು ಸೂಕ್ಷ್ಮಗ್ರಾಹಿಗಳು ಗುರುತಿಸಿ, ದಾಖಲು ಮಾಡಿದ್ದಾರೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಕನ್ನಡದಲ್ಲಿ ಮಕ್ಕಳ ಸಾಹಿತ್ಯ - ಒಂದು ಮುನ್ನೋಟ

ಸೂ. ಸುಬ್ರಹ್ಮಣ್ಯಂ

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಬೆಳೆದುಬಂದ ಬಗೆಯನ್ನು ನಾವು ಆಗಾಗ ಸಭೆ-ಸಮಾರಂಭಗಳಲ್ಲಿ, ಗೋಷ್ಠಿಗಳಲ್ಲಿ ಹೇಳುತ್ತಾ ಬಂದಿದ್ದೇವೆ. ಕೆಲವು ಹಿರಿಯ ಲೇಖಕರ ಹೆಸರನ್ನು ಸೂಚಿಸಿ, ಕೆಲವೊಂದು ಸಂಘ-ಸಂಸ್ಥೆಗಳನ್ನು ಹೆಸರಿಸಿ ಈವರೆಗೆ ಆಗಿರುವ ಮಕ್ಕಳ ಸಾಹಿತ್ಯ ಕೃಷಿಯನ್ನು ಗುರುತಿಸಲು ಪ್ರಯತ್ನಪಟ್ಟಿದ್ದೇವೆ. ಇಂಥ ಅವಲೋಕನಗಳು ಬಹುಮಟ್ಟಿಗೆ ಒಂದು ಪಟ್ಟಿಯಾಗಿ ಬೆಳೆಯುತ್ತವೆ, ಇಲ್ಲವೇ ಒಂದು ಸಮೀಕ್ಷೆಯಾಗಿ, ಸಂಕ್ಷಿಪ್ತ ವರದಿಯಾಗಿ ರೂಪುಗೊಳ್ಳುತ್ತವೆ. ಶತಮಾನದಂಚಿನಿಂದ ಹೊಸ ಶತಮಾನಕ್ಕೆ ಜಿಗಿದಿರುವ ಈ ಸಂದರ್ಭದಲ್ಲಿ ನಮ್ಮ ದೃಷ್ಟಿಯನ್ನು ಭವಿಷ್ಯದತ್ತ ನೆಟ್ಟು ಆಗಬೇಕಾದ ಕಾರ್ಯಗಳು, ಕಾರ್ಯವಿಧಾನ, ಮಾರ್ಪಾಟು, ಬದಲಾವಣೆಗಳ ದಿಕ್ಸೂಚಿಗಳನ್ನು ನೀಡುವುದು ಪ್ರಸ್ತುತದಲ್ಲಿ ತೀರ ಸಮಂಜಸವೆನಿಸುತ್ತದೆ. ಮಕ್ಕಳ ಸಾಹಿತ್ಯದಲ್ಲಿನ ವಸ್ತು, ಶೈಲಿ, ನಿರೂಪಣೆ, ಪರಿಸರ ಪ್ರಜ್ಞೆ, ವೈಜ್ಞಾನಿಕ ಮನೋಭಾವ, ಪ್ರತಿಭೆ-ಸ್ವೋಪಜ್ಞತೆಗಳ ವಿಲಾಸ, ಸೈದ್ಧಾಂತಿಕ ನೆಲೆ-ಗತಿ-ಗಮನಗಳಲ್ಲಿ ಒಂದು ಅಂತರಲಾಗ ಹಾಕಬೇಕಾಗಿರುವುದು ಅವಶ್ಯಕ ಹಾಗೂ ಅನಿವಾರ್ಯವೆಂದರೂ ತಪ್ಪಾಗದು. ಈಗ ಅಗತ್ಯ ಬೇಕೆನಿಸಿರುವುದು ಒಂದು ಪರ್ವಕಾಲದ ಸನ್ನಿಹತೆ, ಒಂದು ಕಿರುಕ್ರಾಂತಿಯ ಪದಾರ್ಪಣೆ, ಒಂದು ನೂತನ ದೃಷ್ಟಿಯ ಆವಿರ್ಭವ.

ಬಹುಮಟ್ಟಿಗೆ ಪಂಚತಂತ್ರ, ಹಿತೋಪದೇಶ, ಕಥಾಸರಿತ್ಸಾಗರ, ಬೃಹತ್ಕಥೆ ಈ ಮೂಲಗಳಿಂದಲೂ, ಈಸೋಪನ ಕಥೆಗಳು, ಗ್ರಿಮ್ ಸೋದರರ ಕಥೆಗಳು, ಅರೇಬಿಯನ್ ನೈಟ್ಸ್ ಕಥೆಗಳು ಹಾಗೂ ಇನ್ನಿತರ ದೇಶವಿದೇಶಗಳ ಪ್ರಾಚೀನ ಕಥೆಗಳ ಅನುವಾದಗಳು ಅಥವಾ ಅಂತಹುಗಳನ್ನು ಆಧರಿಸಿ ಕಥೆಗಳು ಆಗಾಗ ಕನ್ನಡದಲ್ಲಿ ತಲೆಯೆತ್ತುತ್ತಲೇ ಇರುತ್ತವೆ. ನಮ್ಮ ದೇಶದ ವೇದ, ಪುರಾಣೇತಿಹಾಸ ಹಾಗೂ ಮಹಾಕಾವ್ಯ ಮತ್ತು ಜಾನಪದ ಮೊದಲಾದವುಗಳಲ್ಲಿ ಬರುವ ಕಥೆ ಹಾಗೂ ಉಪಾಖ್ಯಾನಗಳು ಸಹ ಕನ್ನಡ ಕಥಾಸಾಮ್ರಾಜ್ಯಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿವೆ. ಹೀಗೆ, ದೈವಭಕ್ತಿ ಹಾಗೂ ಒಳಿತು ಕೆಡುಕುಗಳ ಚೌಕಟ್ಟಿನಲ್ಲಿಯೇ ಕನ್ನಡ ಮಕ್ಕಳ ಸಾಹಿತ್ಯ ಪ್ರಾಚೀನದಿಂದಲೂ ನಡೆದು ಬಂದಿದೆಯೆಂದರೆ ಉತ್ಪ್ರೇಕ್ಷೆಯೆನಿಸದು. ಮಕ್ಕಳ ಸಾಹಿತ್ಯವೆಂಬ ವಿಶಾಲಾರ್ಥದ ವ್ಯಾಪ್ತಿಯಲ್ಲಿ ಈ ಎಲ್ಲವನ್ನೂ ನಾವು ಸೇರಿಸಿದ್ದೇವೆಯೇನೋ ಎಂದೆನಿಸುತ್ತದೆ.

ವಾಸ್ತವದಲ್ಲಿ ನಾವಿಂದು ಕನ್ನಡದಲ್ಲಿ ಬರೆಯುತ್ತಿರುವ ಮಕ್ಕಳ ಸಾಹಿತ್ಯವನ್ನು ಮಕ್ಕಳ ವಯೋಧರ್ಮಕ್ಕೆ ಹಾಗೂ ಮಾನಸಿಕ ಮಟ್ಟಕ್ಕೆ ಅನುಗುಣವಾಗಿ ಮೂರು ಮುಖ್ಯಘಟ್ಟ ಅಥವಾ ಮಜಲುಗಳಲ್ಲಿ ಗುರುತಿಸಬಹುದಾಗಿದೆ. ಅವೆಂದರೆ ಶಿಶುಸಾಹಿತ್ಯ, ಬಾಲಸಾಹಿತ್ಯ ಮತ್ತು ಕಿಶೋರಸಾಹಿತ್ಯ. ಐದು ವರ್ಷದವರೆಗಿನ ಮಕ್ಕಳಿಗಾಗಿ ರಚಿಸಿದ ಸಾಹಿತ್ಯವನ್ನು ಶಿಶುಸಾಹಿತ್ಯವೆಂದೂ, ಆರು ವರ್ಷದಿಂದ ಹತ್ತು ವರ್ಷದ ಮಕ್ಕಳಿಗಾಗಿ ರಚಿತವಾದ ಸಾಹಿತ್ಯವನ್ನು ಬಾಲಸಾಹಿತ್ಯವೆಂದೂ, ಹನ್ನೊಂದರಿಂದ ಹದಿನಾರು ವರ್ಷದ ಮಕ್ಕಳಿಗಾಗಿ ರಚಿಸಿದ ಸಾಹಿತ್ಯವನ್ನು ಕಿಶೋರಸಾಹಿತ್ಯವೆಂದೂ ಹೆಸರಿಸಿ ಈ ಶಬ್ದಗಳ ಖಚಿತಾರ್ಥದ ಪ್ರಯೋಗಕ್ಕೆ ಅಥವಾ ಮಕ್ಕಳ ಸಾಹಿತ್ಯದ ಈ ವಿವಿಧ ಮಜಲುಗಳಿಗೆ ಒಂದು ವೈಜ್ಞಾನಿಕ ದೃಷ್ಟಿಯನ್ನು ನೀಡಬೇಕಾದುದು ಅತ್ಯಗತ್ಯವೆನಿಸಿದೆ. ಬರೆದುದೆಲ್ಲವನ್ನೂ ಮಕ್ಕಳ ಸಾಹಿತ್ಯವೆಂಬ ವಿಶಾಲಾರ್ಥದಲ್ಲಿ ಅಡಕಗೊಳಿಸುವುದಕ್ಕಿಂತ ಶಿಶುಸಾಹಿತ್ಯ, ಬಾಲಸಾಹಿತ್ಯ, ಕಿಶೋರಸಾಹಿತ್ಯವೆಂಬ ಖಚಿತಾರ್ಥ ಪ್ರಯೋಗದ ಬಳಕೆ ಮಕ್ಕಳ ಸಾಹಿತ್ಯದ ಸಮಗ್ರ ಬೆಳವಣಿಗೆಯ ದೃಷ್ಟಿಯಿಂದ ಅತ್ಯಾವಶ್ಯಕವಾದುದಾಗಿದೆ. ಒಂದು ನಿಖರ ಚಿಂತನೆಯ ಚೌಕಟ್ಟಿನೊಳಗಿನ ವಿಶಿಷ್ಟ ವರ್ಗದ ಸಾಹಿತ್ಯದ ತುಲನಾತ್ಮಕ ವಿಮರ್ಶೆಗೆ ಈ ಬಗೆಯ ವೈಜ್ಞಾನಿಕ ವರ್ಗೀಕರಣ ತೀರ ಉಪಯುಕ್ತವಾದುದು.

ಯಾರು ಯಾವ ವಯಸ್ಸಿನ ಅಥವಾ ಯಾವ ಮಾನಸಿಕ ಮಟ್ಟದ ಮಕ್ಕಳಿಗೆ ಏನನ್ನು ಬರೆಯಲು ಹೊರಟಿದ್ದಾರೆ, ಅದು ಎಷ್ಟರಮಟ್ಟಿಗೆ ಯುಕ್ತ ಹಾಗೂ ಸೂಕ್ತ, ವಸ್ತು, ಶೈಲಿ, ನಿರೂಪಣೆಗಳು ಆ ಮಾನಸಿಕ ಮಟ್ಟಕ್ಕೆ ಸಮಂಜಸವೆನಿಸಬಲ್ಲವೇ? – ಈ ಬಗೆಯ ವೈಜ್ಞಾನಿಕ ವಿಶ್ಲೇಷಣಾ ದೃಷ್ಟಿಗೆ ಮಕ್ಕಳ ಸಾಹಿತ್ಯವನ್ನು ಒಳಪಡಿಸಿ ಅನಂತರ ಆ ಬಗೆಗೆ ಸಂಶೋಧನೆಗಳಲ್ಲಿ ತೊಡಗಬೇಕಾಗುತ್ತದೆ. ಈವರೆಗೆ ಬಂದಿರುವ ಮಕ್ಕಳ ಸಾಹಿತ್ಯದ ಸಂಗ್ರಹಣೆಯಲ್ಲಿ ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಣೆ ವರ್ಗೀಕರಣಗಳಲ್ಲಿ ತೊಡಗಬೇಕಾಗಿರುವುದು ಈಗ ನಮ್ಮ ಮುಂದಿರುವ ಮುಖ್ಯ ಸಮಸ್ಯೆ. ಇಂಥ ವರ್ಗೀಕರಣದಲ್ಲಿ ಮಕ್ಕಳ ಗ್ರಹಣ ಶಕ್ತಿಗೆ ಗುರುತರವಾದ ಸ್ಥಾನವಿರುತ್ತದೆ. ಸಾಮಾನ್ಯಾರ್ಥದಲ್ಲಿ ಮಕ್ಕಳ ಸಾಹಿತ್ಯವೆಂದು ಕರೆದರೂ ಈ ಒಳಪ್ರಭೇದಗಳು ವೈಜ್ಞಾನಿಕ ಅವಲೋಕನೆಗೆ ಅನುವಾಗುವುದರಲ್ಲಿ ಯಾವ ಸಂದೇಹವೂ ಇರದು.

ಈ ಬಗೆಯ ವೈಜ್ಞಾನಿಕ ಮಾನದಂಡವನ್ನು ಬಳಸಿ, ಸ್ಥೂಲವಾಗಿ ಹೇಳುವುದಾದರೆ, ಕಳೆದ ಶತಮಾನದಲ್ಲಿ ಕನ್ನಡದಲ್ಲಿ ಬಂದಿರುವ ಮಕ್ಕಳ ಸಾಹಿತ್ಯದಲ್ಲಿ ಬಹುಮಟ್ಟಿನವು ಬಾಲಸಾಹಿತ್ಯಕ್ಕೆ ಸೇರುವ ಲಕ್ಷಣ ಹೊಂದಿರುವಂತಿದೆ. ಎಲ್ಲಿಯವರೆಗೆ ವಿವಿಧ ವಯೋಧರ್ಮದ ಮಕ್ಕಳಿಗೆ ಹೇಳುವ ದೃಷ್ಟಿಯಿಂದ ನಾವು ಮಕ್ಕಳಿಗಾಗಿ ಸಾಹಿತ್ಯವನ್ನು ನಿರ್ದಿಷ್ಟವಾಗಿ ರಚಿಸುವ ಮನೋಧರ್ಮ ಹೊಂದಿರುವುದಿಲ್ಲವೋ ಅಲ್ಲಿಯವರೆಗೆ ನಮ್ಮ ವರ್ಗೀಕರಣವೂ ನಿರ್ದಿಷ್ಟತೆ ಹಾಗೂ ಖಚಿತತೆಯನ್ನು ಹೊಂದಲಾರದು. ಇಂಥ ವೈಜ್ಞಾನಿಕ ವಿಶ್ಲೇಷಣೆಯಲ್ಲಿ ನಮ್ಮ ಪ್ರಾಥಮಿಕ ಶಾಲಾ ಶಿಕ್ಷಕರ ಪಾತ್ರ, ಸಲಹೆ-ಸಹಕಾರಗಳು ಅತ್ಯಗತ್ಯ. ಆದರೆ ಇಂದು ಮಕ್ಕಳ ಸಾಹಿತ್ಯವನ್ನು ರಚಿಸಹೊರಟ ಲೇಖಕರಲ್ಲಿ ಎಷ್ಟು ಮಂದಿ ಈ ಬಗೆಯ ವೈಜ್ಞಾನಿಕ ದೃಷ್ಟಿಯ ಹಿನ್ನೆಲೆಯಲ್ಲಿ ಸಾಹಿತ್ಯವನ್ನು ರಚಿಸುತ್ತಿದ್ದಾರೆ ಎನ್ನುವುದು ಊಹೆಗಷ್ಟೇ ನಿಲುಕುವ ಸ್ಥಿತಿಯೆನಿಸಿದೆ.

ಮಕ್ಕಳಿಗೆ ಕೇವಲ ಕಾಲ್ಪನಿಕ ವಸ್ತುಗಳಿಂದ ಕೂಡಿದ ವಿಷಯಗಳೇ ಅಲ್ಲದೆ ಬೋಧಪ್ರದ ಸಾಹಿತ್ಯ ರಚನೆಯ ಅವಶ್ಯಕತೆಯೂ ಇದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಭಾಷಾತಜ್ಞರು ಹಾಗೂ ಸಮಾಜ ವಿಜ್ಞಾನಿಗಳು ಮಕ್ಕಳ ವಯೋಧರ್ಮ, ಮನೋಭಾವಕ್ಕೆ ಅನುಗುಣವಾಗಿ ಹಾಗೂ ಅವರಲ್ಲಿ ಶಬ್ದ ಸಂಪತ್ತು ವಿಕಾಸಗೊಳ್ಳಲು ನೆರವಾಗುವ ಕಥಾಸಾಹಿತ್ಯವನ್ನು ರಚಿಸಲು ಮಕ್ಕಳ ಕಥೆಗಳಲ್ಲಿ ಬಳಸಬಹುದಾದ ಶಬ್ದಕೋಶಗಳನ್ನು ರಚಿಸಿದ್ದಾರೆ. ಅವು ಮಕ್ಕಳ ಸಾಹಿತ್ಯ ಬರೆಯುವ ಲೇಖಕರಿಗೆ ಒಂದು ಅಮೂಲ್ಯ ಆಧಾರ ಗ್ರಂಥಗಳೆನಿಸಿವೆ. ಆದರೆ ಕನ್ನಡದಲ್ಲಿ ಈ ಬಗೆಯ ಪ್ರಯತ್ನವೇ ಇನ್ನೂ ಆಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಅಂಥ ಕಾರ್ಯ ಆಗಬೇಕಾದುದಾದರೂ ಯಾರಿಂದ? ಸರ್ಕಾರದ ಶಿಕ್ಷಣ ಇಲಾಖೆಯಿಂದಲೆ? ನಮ್ಮ ವಿಶ್ವವಿದ್ಯಾನಿಲಯದ ವತಿಯಿಂದಲೆ? ಹಂಪೆಯ ಕನ್ನಡ ವಿಶ್ವವಿದ್ಯಾಲಯ ಇಂಥ ಯೋಜನೆಯನ್ನು ಕೈಗೆತ್ತಿಕೊಳ್ಳಬಹುದೆ? ಯಾರೇ ಮಾಡಲಿ, ಅಂಥ ಶಬ್ದಕೋಶಕ್ಕೆ ಅಧಿಕಾರದ ಮುದ್ರೆಯು ಬಿದ್ದಾಗಲೇ ಅದರ ಬಳಕೆಗೆ ಮಾನ್ಯತೆ ದೊರೆಯುತ್ತದೆಂಬುದು ಸ್ಪಷ್ಟ.

ಸ್ವಾತಂತ್ರ್ಯಪೂರ್ವದ ಮಕ್ಕಳ ಸಾಹಿತ್ಯದಲ್ಲಿ ಬಹುತೇಕ ರಾಷ್ಟ್ರಭಕ್ತಿಯ ಅಂಶವನ್ನು ಎತ್ತಿ ಕೊಂಡಾಡುತ್ತಿದ್ದವು. ಸ್ವಾತಂತ್ರ್ಯಾನಂತರ ಭಾವೈಕ್ಯದ ಮಾದರಿಗಳು ಬಲವಂತವಾಗಿ ಇಣುಕುಹಾಕುತ್ತಿವೆ. ಸರ್ಕಾರಗಳು ಸ್ಪರ್ಧಾರೂಪದಲ್ಲಿ ಒಡ್ಡುವ ಆರ್ಥಿಕ ಆಮಿಷಗಳಿಂದ ಆಕರ್ಷಿತರಾದ ಬರಹಗಾರರು ಈ ಬಗೆಯ ಸಾಹಿತ್ಯ ರಚನೆಗೆ ತಮ್ಮನ್ನು ಒಗ್ಗಿಸಿಕೊಳ್ಳುತ್ತಾರೆ. ಪ್ರಾಯಶಃ ಕುಟುಂಬ ಯೋಜನೆಯನ್ನು ಕುರಿತ ಕಥೆಗಳು ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ಇನ್ನೂ ಪ್ರವೇಶಿಸಿರಲಾರವು! ಮಕ್ಕಳ ಸಾಹಿತ್ಯದಲ್ಲಿ ಬದ್ಧ ಸಾಹಿತ್ಯ ರಚನೆಯ ಯುಕ್ತತೆ, ಔಚಿತ್ಯಗಳ ಬಗೆಗೆ ಸಂಶೋಧನೆ ನಡೆಸಿದರೆ ಅದರಿಂದ ಸಾಹಿತ್ಯ ಪ್ರೇಮಿಗಳು, ಸಮಾಜ ವಿಜ್ಞಾನಿಗಳು, ಮನೋವಿಜ್ಞಾನಿಗಳು ನೆಲೆ-ನಿಲುವುಗಳನ್ನು ತಳೆಯಲು ಅನುಕೂಲವಾಗಬಹುದು. ಮಕ್ಕಳ ಮನರಂಜನೆಗೆ ಹಾಗೂ ಮನೋವಿಕಾಸಕ್ಕೆ ನೆರವಾಗುವಂತಹ ಸ್ವತಂತ್ರ ಸಾಹಿತ್ಯವನ್ನು ಈಗ ನಾವು ಎಷ್ಟರಮಟ್ಟಿಗೆ ನೀಡುತ್ತಿದ್ದೇವೆ ಎಂಬ ಬಗೆಗೆ ಆತ್ಮಾವಲೋಕನದ ಅಗತ್ಯವಿದೆ.

ನಮ್ಮ ಮಕ್ಕಳ ಸಾಹಿತ್ಯದಲ್ಲಿ ರಾಮಾಯಣ, ಮಹಾಭಾರತ, ಉಪನಿಷತ್ತುಗಳೇ ಅಲ್ಲದೆ ಹಲವಾರು ಪುರಾಣಗಳಲ್ಲಿ ಬರುವ ಕಥೆ, ಉಪಾಖ್ಯಾನಗಳನ್ನು ಹೇರಳವಾಗಿ ಬಳಸಲಾಗುತ್ತಿದೆ. ಇತರೇ ಧರ್ಮಗ್ರಂಥ

ಗಳಿಂದಲೂ ಅಂಥ ಸಾಹಿತ್ಯವನ್ನು ಹೆಕ್ಕಿ ಮಕ್ಕಳಿಗೆ ಉಣಬಡಿಸಲಾಗುತ್ತಿದೆ. ಈಚೆಗೆ (೧೯೯೯) ನವದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟ್ 'ಮಕ್ಕಳ ಸಾಹಿತ್ಯದಲ್ಲಿ ಧರ್ಮ' ಎಂಬ ವಿಷಯವನ್ನು ಕುರಿತು ಸಾಹಿತ್ಯಿಕ ಗೋಷ್ಠಿಯೊಂದನ್ನು ಏರ್ಪಡಿಸಿದ್ದುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ನಮ್ಮ ಪುರಾಣಗಳು ಕಥೆಗಳ ಆಗರ; ಅಲ್ಲಿ ರೂಪಿತವಾದ ನವರಸಗಳ ಒಡನಾಟ ಚೇತೋಹಾರಿಯಾದುದು. ಆದರೆ ಪುರಾಣದ ಕಥೆಗಳಿಗೆ ಆಧುನಿಕ ಮೆರುಗು ಹಚ್ಚಿ ಹೇಳುವುದು, ಹಳೆಯ ವಸ್ತುಗಳಿಗೆ ಹೊಸ ನೆಲೆ, ಹೊಸ ಪೋಷಾಕು ಒದಗಿಸುವುದು ಇಂದಿನ ಮಕ್ಕಳ ಮನೋಧರ್ಮಕ್ಕೆ ಹೆಚ್ಚು ಒಪ್ಪುವಂಥದು, ಅವರ ಆಸಕ್ತಿಯನ್ನು ಸೆರೆಹಿಡಿಯಬಲ್ಲಂಥದು. ''ಒಂದಾನೊಂದು ಕಾಲದಲ್ಲಿ....'' ಕಥೆಗಳಿಗೆ ಕಾಲಮಿತಿಯೇ ಇಲ್ಲ. ಅವು ಅನಂತ, ಅನವರತ. ಅದರೊಂದಿಗೆ ಈಗ ಬೇರು ಬಿಟ್ಟು ಚಿಗುರೊಡೆಯಬೇಕಾದುದು ''ಇಂದಾನೊಂದು ಕಾಲದಲ್ಲಿ...'' ಬಗೆಯ ವಿನೂತನ ಶೈಲಿಯ ವಸ್ತುವಿನ್ಯಾಸದ ಸೃಜನಾತ್ಮಕ ಮಕ್ಕಳ ಸಾಹಿತ್ಯ. ಎಲ್ಲೆಲ್ಲಿ ಸಾಧ್ಯವೋ ಅಂಥಲ್ಲಿ ಹಾಸ್ಯದ ಬೆಸುಗೆ, ಸ್ಪರ್ಧಾತ್ಮಕ ಘಟನೆ, ಸತ್ಯದ ನಿಲುವು-ಗೆಲುವು, ಭಾಷೆಯ ಬಳಕೆಯಲ್ಲಿ ಚತುರತೆ - ಇವುಗಳನ್ನು ಬಳಸಿ ಉತ್ತಮವಾದ ಪೌರಾಣಿಕ ಕಥೆಗಳನ್ನು ಆಧುನಿಕವಾಗಿ ಪುನರ್‌ಸೃಷ್ಟಿ ಮಾಡುವಲ್ಲಿ ನಮ್ಮ ಪ್ರಯತ್ನ ಸಾಗಬೇಕಾಗಿದೆ. ಎಲ್ಲ ಧರ್ಮಗಳ ಮೂಲ ನೆಲೆಯೂ ಒಂದೇ ಆದುದರಿಂದ ಪರಸ್ಪರ ಸಮಾನ ಘಟನೆಗಳ ಪರಿಚಯವು ಪರಮತ ಸಹಿಷ್ಣುತೆಗೆ ಪರೋಕ್ಷವಾಗಿ ನೆರವಾಗುತ್ತದೆ ಎಂಬುದು ಸ್ಪಷ್ಟ.

ಈಗ ನಾವು ಮಕ್ಕಳ ಸಾಹಿತ್ಯಕ್ಕೆ ಬಳಸುತ್ತಿರುವ ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯ ಸಾಲದು. ಆಧುನಿಕ ಬದುಕಿನ ಪರಿಸರಗಳಿಗೆ ಅನುವಾಗುವಂತಹ ಮಕ್ಕಳ ಸಾಹಿತ್ಯವನ್ನು ರಚಿಸುವ ಪ್ರಯತ್ನದಲ್ಲಿ ನಾವು ಹಿಂದೆ ಬಿದ್ದಿದ್ದೇವೆ. ಗತವೈಭವದ ಸ್ಮರಣೆಯಷ್ಟೇ ಯಾವುದೇ ಸಂಸ್ಕೃತಿಯ ಭವಿಷ್ಯವನ್ನೂ ನಿರ್ಮಿಸಲಾರದು. ನಮ್ಮ ಮಕ್ಕಳ ಸಾಹಿತ್ಯದಲ್ಲಿ ಕಂಡುಬರುವ ನಿರೂಪಣೆ ಕೂಡ ಅಷ್ಟು ಆಕರ್ಷಕವಾಗಿಲ್ಲದಿರುವುದು ಈ ಸಾಹಿತ್ಯ ಪ್ರಕಾರದ ಮತ್ತೊಂದು ಕೊರತೆ. ಸರಳವಾದ, ಸಹಜವಾದ ಜನಪ್ರಿಯ ಶೈಲಿ ಈಗಿನ ಅಗತ್ಯ. ವಸ್ತು, ಶೈಲಿ, ನಿರೂಪಣೆಗಳಲ್ಲಿ ಪ್ರಯೋಗಶೀಲತೆಯ ಅಭಾವ ಎದ್ದುಕಾಣುತ್ತದೆ. ನಮ್ಮ ಮಕ್ಕಳ ಸಾಹಿತ್ಯದಲ್ಲಿ ಚಿತ್ರಗಳಿಗೆ ಇನ್ನೂ ಸೂಕ್ತವಾದ ಸ್ಥಾನಮಾನಗಳು ದೊರಕಿಲ್ಲ. ಚಿತ್ರಗಳಲ್ಲಿ ಮಕ್ಕಳ ಪಾತ್ರ, ಸಾಹಿತ್ಯದಲ್ಲಿ ಅವರ ಯಥೋಚಿತ ವರ್ಣನೆ ಬರಬೇಕಾಗಿದೆ. ಪುಸ್ತಕಗಳನ್ನು ಓದುತ್ತಿರುವ ಮಕ್ಕಳ ಮನಸ್ಸಿನ ಮೇಲೆ ಚಿತ್ರಗಳು ವಿಶೇಷ ಪ್ರಭಾವ ಬೀರಬಲ್ಲವು. ಈ ಬಗೆಯ ನಮೂನೆಗಳು ಮಕ್ಕಳ ಸಾಹಿತ್ಯವನ್ನು ಆಕರ್ಷಣೀಯಗೊಳಿಸುವುದರಲ್ಲಿ ಹಾಗೂ ಮಕ್ಕಳನ್ನು ಪುಸ್ತಕಗಳತ್ತ ಕೊಂಡೊಯ್ಯುವುದರಲ್ಲಿ ಹಿರಿದಾದ ಪಾತ್ರ ವಹಿಸುತ್ತವೆ.

ಮಕ್ಕಳ ಸಾಹಿತ್ಯವೆಂದರೆ ಕಥೆ, ಕವನಗಳಷ್ಟೇ ಎಂಬ ಭಾವನೆ ದೊಡ್ಡವರಲ್ಲಿ ಬೇರೂರಿರುವುದರಿಂದ ನಮ್ಮ ಮಕ್ಕಳ ಸಾಹಿತ್ಯದಲ್ಲಿ ಬರುತ್ತಿರುವ ವೈಜ್ಞಾನಿಕ ವಿಷಯಗಳನ್ನು ಕುರಿತ ಅತ್ಯುಪಯುಕ್ತ ಕಾಣಿಕೆಗಳನ್ನು ಉದಾಸೀನದಿಂದ ಕಾಣುವ ಮನೋಧರ್ಮ ನಮ್ಮ ವಿಮರ್ಶಕರಲ್ಲೂ, ಅಧಿಕಾರ ವರ್ಗದವರಲ್ಲೂ ಬಂದಿರುವುದನ್ನು ನಾವು ಕಾಣಬಹುದು. ಅಂತಹ ಸಾಹಿತ್ಯವು ಸೃಜನಾತ್ಮಕವಲ್ಲವೆಂಬ ಪೂರ್ವಾಗ್ರಹ ಪೀಡಿತ ಧೋರಣೆಯೂ ಈ ಬಗೆಯ ಸಾಹಿತ್ಯದ ಪ್ರಗತಿಗೆ ಮಾರಕವಾಗಿ ಬಂದಿದೆ. ಜರ್ಮನ್ ಭಾಷೆಯ ಮಕ್ಕಳ ಕವನವೊಂದರ ಶೀರ್ಷಿಕೆ 'ಖಗೋಳಯಾತ್ರಿ ಈಗ ಭೂಮಿಯ ಬಗ್ಗೆ ಏನು ಚಿಂತಿಸುತ್ತಿದ್ದಾನೆ?' ಎಂಬರ್ಥ ಬರುವಂಥದ್ದು. ಸುತ್ತಲಿನ ಪರಿಸರವನ್ನೆಲ್ಲ ಹಾಳುಮಾಡುತ್ತಿದ್ದ ಆನೆಯೊಂದು ಬ್ರಸಲ್ಸ್‌ಗೆ ದಾರಿ ಯಾವುದೆಂದು ಕೇಳಿದಾಗ ಬೇಕಂತಲೇ ಅದಕ್ಕೆ ರಾಜಮಾರ್ಗವನ್ನು ಸೂಚಿಸಿ ಪರಿಸರವನ್ನು ಸಂರಕ್ಷಿಸುವ ಮತ್ತೊಂದು ವಿನೋದಾತ್ಮಕ ಜರ್ಮನ್ ಮಕ್ಕಳ ಕವನದಲ್ಲಿ ಕಲ್ಪನೆಯೊಂದಿಗೆ ಮೇಳವಿಸಿರುವ ವೈಜ್ಞಾನಿಕ ಅಂಶದ ಸುಂದರ ಬೆಸುಗೆಯನ್ನು ನಾವು ಕಾಣಬಹುದು. ಕಲ್ಪನೆಯ ಕಣಕದಲ್ಲಿ ವೈಜ್ಞಾನಿಕ ವಿಷಯಗಳ ಹೂರಣವನ್ನಿಟ್ಟು ಮಕ್ಕಳಿಗೆ ಉಣಬಡಿಸುವುದೊಂದು ಸ್ವೋಪಜ್ಞ ಕಲೆ. ವಾಸ್ತವದಲ್ಲಿ, ವಿಜ್ಞಾನದ ನೇರ ಹಾಗೂ ಪರೋಕ್ಷ ತಿಳುವಳಿಕೆಯನ್ನು ಸರಳವಾಗಿ, ಸಹಜವಾಗಿ ನಿರೂಪಿಸುವ ವೈಜ್ಞಾನಿಕ ಮಕ್ಕಳ ಸಾಹಿತ್ಯಕ್ಕೆ ಇನ್ನೂ ಸೂಕ್ತ ಪ್ರೋತ್ಸಾಹ ಹಾಗೂ ಮನ್ನಣೆ ದೊರೆತಿಲ್ಲವೆಂದು ಹೇಳದೇ ವಿಧಿಯಿಲ್ಲ.

ಮಕ್ಕಳ ಸಾಹಿತ್ಯದಲ್ಲಿ ಪ್ರೋತ್ಸಾಹಕರ ಆಶಾದಾಯಕ ಯೋಜನೆಗಳು ಆಗಾಗ ಬಂದುದುಂಟು. ಹಾಗೆ ಬಂದಾಗ ಅದರ ಆಚರಣೆಯಲ್ಲಿ ಆದ ಅಪಚಾರಗಳನ್ನು ಇಲ್ಲಿ ಉಲ್ಲೇಖಿಸಿದರೆ ಅದು ಅಪ್ರಸ್ತುತವೆನಿಸದು. ಕರ್ನಾಟಕ ಸರ್ಕಾರವು ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಎರಡು ಬಾರಿ ಸುಮಾರು ೧೫೦ಕ್ಕೂ ಹೆಚ್ಚಿನ ಪುಸ್ತಕಗಳನ್ನು ಪುನರ್ಮುದ್ರಣ ಮಾಡಿ ಕಡಿಮೆ ಬೆಲೆಗೆ ಮಾರಾಟ ಮಾಡುವ ವ್ಯವಸ್ಥೆ ಮಾಡಿತು. ಆದರೆ ಆ ಸಂಬಂಧದಲ್ಲಿ ರಚಿಸಿದ ಸಮಿತಿಗಳಿಗೆ ಮಕ್ಕಳ ಪುಸ್ತಕವನ್ನು ಪ್ರಕಟಿಸಬೇಕೆಂಬ ಮನಸ್ಸು ಬಾರದೇ ಹೋದುದು ಶೋಚನೀಯ.

ಕರ್ನಾಟಕ ಸರ್ಕಾರದ ಗ್ರಂಥಾಲಯವು ತನ್ನ ಇಲಾಖೆಗೆ ಪುಸ್ತಕಗಳನ್ನು ಸಗಟಾಗಿ ಖರೀದಿಸುವ ಯೋಜನೆಯೊಂದನ್ನು ಹಮ್ಮಿಕೊಂಡಿದೆ. ಆದರೆ ಅದರಲ್ಲಿನ ಸಿಂಹಪಾಲು ಮಕ್ಕಳ ಸಾಹಿತ್ಯವನ್ನು ಹೊರತಾದ ಇನ್ನಿತರ ಪ್ರಕಟಣೆಗಳಿಗೇ ಗಿಟ್ಟುತ್ತದೆ. ಈ ಇಲಾಖೆ ಶೇಕಡಾ ೨೦ರಷ್ಟಾದರೂ ಮಕ್ಕಳ ಸಾಹಿತ್ಯವನ್ನು ಖರೀದಿಸುವುದಾದರೆ ಆಗ ಮಕ್ಕಳ ಸಾಹಿತ್ಯಕ್ಕೆ ಸ್ವಲ್ಪಮಟ್ಟಿನ ಪ್ರೋತ್ಸಾಹವಾದರೂ ಸಿಗಬಹುದು.

ಈಚೀಚೆಗೆ ಕನ್ನಡದ ಮಕ್ಕಳ ಸಾಹಿತ್ಯ ಪ್ರಕಟಣೆಗಳು ಸಂಖ್ಯೆಯಲ್ಲಿ ಸಮೃದ್ಧವಾಗತೊಡಗಿವೆ - ನಿಜ, ಕೇಂದ್ರ ಸರ್ಕಾರದ ಕಪ್ಪು ಹಲಗೆಯ ಯೋಜನೆಯ ಸಗಟು ಖರೀದಿಯ ಸಲುವಾಗಿ. 'ಸಂಜೆ ಹೊತ್ತಿಗೆ ಮೂರು ಮೊಳ ನೇಯ್ದು' ತಂದ ಸರಕು ಇಲ್ಲಿ ಸ್ವಾಗತಾರ್ಹವೆನಿಸಿರುವುದು ತುಂಬ ಖೇದದ ವಿಷಯ. ಈ ಸಗಟು 'ಉದ್ದಿಮೆ' ಯ ಫಲವಾಗಿ ಮಕ್ಕಳ ಪುಸ್ತಕಗಳಲ್ಲಿಯೂ ಗ್ರೆಷಾಮನ ನಿಯಮಗಳು ಇನ್ನೂ ಹೆಚ್ಚಿನ ತೀವ್ರಗತಿಯಿಂದ, ಪ್ರಬಲ ಸಾಮರ್ಥ್ಯದಿಂದ ಕಾರ್ಯಾಚರಣೆಗೆ ತೊಡಗಬಲ್ಲದೆಂಬುದಕ್ಕೆ ನಿದರ್ಶನವಾಗಿದೆ. ಕೆಲವೊಂದು ಪುಸ್ತಕಗಳಂತೂ ಮಕ್ಕಳ ಪುಸ್ತಕಗಳು ಹೇಗಿರಬಾರದೆಂಬುದಕ್ಕೆ ಸ್ಪಷ್ಟ ಮಾದರಿಗಳಾಗಿದ್ದು ಅವು ಆಯ್ಕೆ ಸಮಿತಿಯ ಅಜ್ಞಾನಕ್ಕೂ, ಅವಜ್ಞೆಗೂ ಸಾಕ್ಷಿಗಳಾಗಿ ನಿಲ್ಲುತ್ತವೆ. ಇಲ್ಲಿ ಮಕ್ಕಳಿಗಾದ ಅನ್ಯಾಯವನ್ನು ಯಾವ ಬಗೆಯಲ್ಲಿ ಸರಿಪಡಿಸಲು ಸಾಧ್ಯ? ಮಕ್ಕಳ ಭವಿಷ್ಯ, ಅವರ ಮನೋವಿಕಾಸ ಮೊದಲಾದ ನವಿರು ಭಾವನೆಗಳೆಲ್ಲವೂ ಇಂಥಲ್ಲಿ ಗಾಳಿಪಾಲಾಗಿ ವ್ಯಾಪಾರೀಧರ್ಮ ಗಹಗಹಿಸುತ್ತಾ ತನ್ನ ರಾಕ್ಷಸೀ ವರ್ತನೆಯನ್ನು ಪುನರುಚ್ಚರಿಸುತ್ತದೆ.

ಮಕ್ಕಳ ಸಾಹಿತ್ಯವನ್ನು ಜನಪ್ರಿಯಗೊಳಿಸುವಲ್ಲಿ ಸಾರ್ವಜನಿಕ ಗ್ರಂಥಾಲಯಗಳು ಮತ್ತು ಶಾಲಾ ಪುಸ್ತಕ ಭಂಡಾರಗಳು ಮಹತ್ತರ ಪಾತ್ರವನ್ನು ವಹಿಸಬಹುದಾಗಿದೆ. ತಮ್ಮ ಗ್ರಂಥಾಲಯಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳ ಪುಸ್ತಕವನ್ನು ಸೇರ್ಪಡಿಸುವುದು ಒಂದು ಕಾರ್ಯವಾದರೆ, ಮಕ್ಕಳನ್ನು ಪುಸ್ತಕಗಳತ್ತ ಸೆಳೆಯುವ ಸಲುವಾಗಿ ಹಲವಾರು ವಿಸ್ತರಣ ಕಾರ್ಯಕ್ರಮಗಳನ್ನು ನಿಯೋಜಿಸಬಹುದಾಗಿದೆ. ಅವುಗಳಲ್ಲಿ ಕೆಲವೆಂದರೆ: ಕಥೆ ಹೇಳುವುದು/ಹೇಳಿಸುವುದು; ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟದ ವ್ಯವಸ್ಥೆ; ಪುಸ್ತಕಗಳನ್ನು ಕುರಿತು ಸಮಾಲೋಚನೆ; ಲೇಖಕರಿಂದ ಪುಸ್ತಕಗಳ ವಾಚನ; ಮಕ್ಕಳ ಸಾಹಿತ್ಯ ವಾಚನ ಕುರಿತು ಗೋಷ್ಠಿಗಳು; ಪುಸ್ತಕ ವಾಚನಗಳು ಮತ್ತು ಉತ್ತಮ ವಾಚಕ ಸ್ಪರ್ಧೆಗಳು: ಅಕ್ಷರಜ್ಞಾನವಿಲ್ಲದವರಿಗೆ ಮಕ್ಕಳ ಸಾಹಿತ್ಯ ಪರಿಚಯ/ಪ್ರೋತ್ಸಾಹ; ಪುಸ್ತಕಗಳ ಬಗೆಗೆ ವರದಿ; ಸಾಹಿತ್ಯಿಕ ಸಭೆ, ಸಮಾರಂಭಗಳು. ಈಗಾಗಲೇ ಸಂಚಾರೀ ಪುಸ್ತಕಾಲಯಗಳು ಮತ್ತು ಪುಸ್ತಕಗಳನ್ನು ಕುರಿತ ಜಾಹೀರಾತುಗಳು ಸ್ವಲ್ಪಮಟ್ಟಿಗೆ ಕೆಲಸವನ್ನು ಮಾಡುತ್ತಿವೆ ಯಾದರೂ ಅವುಗಳ ಬಾಹುಳ್ಯ ಹಾಗೂ ಕಾರ್ಯಕ್ಷಮತೆಗೆ ಇನ್ನೂ ಬೇಕಾದಷ್ಟು ಅವಕಾಶಗಳಿವೆ. ಒಟ್ಟಿನಲ್ಲಿ ಮಕ್ಕಳ ನಡುವೆ, ಮಕ್ಕಳ ಸುತ್ತ ಒಂದು ಉತ್ತಮ ''ಪುಸ್ತಕ ಪರಿಸರ''ವನ್ನು ನಿರ್ಮಾಣ ಮಾಡುವಲ್ಲಿ ನಾವು ಸಾಕಷ್ಟು ದೂರ ಸಾಗಬೇಕಾಗಿದೆ. ನಮ್ಮಲ್ಲಿ ಗ್ರಂಥಾಲಯಗಳು ಕಡಿಮೆ. ಗ್ರಂಥಾಲಯಗಳತ್ತ ಮಕ್ಕಳು ಹೋಗುವುದು ಇನ್ನೂ ಕಡಿಮೆ. ಆದ್ದರಿಂದ ಮಕ್ಕಳನ್ನು ತಮ್ಮತ್ತ ಸೆಳೆಯುವಲ್ಲಿ ಈಗಿರುವ ಗ್ರಂಥಾಲಯಗಳೇ ಮಹತ್ತರವಾದ ಪಾತ್ರವನ್ನು ವಹಿಸಬೇಕಾದುದು ಅನಿವಾರ್ಯ ಹಾಗೂ ತೀರ ಅಗತ್ಯವೆನಿಸಿದೆ. ಅಮೆರಿಕದ ಗ್ರಂಥಾಲಯ ಸಂಘವು ಪ್ರತಿವರ್ಷ ಉತ್ತಮವಾದ ಮಕ್ಕಳ ಸಾಹಿತ್ಯಕ್ಕೆ ''ಜಾನ್ ನ್ಯೂಬೆರಿ'' ಪ್ರಶಸ್ತಿಯನ್ನು ನೀಡಿ ಅಂಥ ಪುಸ್ತಕಗಳ ಮೇಲೆ ತನ್ನ ಲಾಂಛನವನ್ನು ಟಂಕಿಸುವ ಪರಿಪಾಠವಿದ್ದು ನಾವೂ ಅಂತಹ ಯೋಜನೆಯನ್ನು ರೂಪಿಸಬಹುದಾಗಿದೆ.

ಅಂತರರಾಷ್ಟ್ರೀಯ ಮಕ್ಕಳ ಸಾಹಿತ್ಯ ಸಂಶೋಧನಾ ಸಂಸ್ಥೆಯ ಎರಡು ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ (ಫ್ರಾನ್ಸಿನ ಬೋರ್ಡೋ-೧೯೮೩ ಮತ್ತು ಜರ್ಮನಿಯ ಕಲೋನ್-೧೯೮೭) ಭಾಗವಹಿಸಿ, ಪ್ರಬಂಧ ಮಂಡಿಸಿ ಆ ಸಮ್ಮೇಳನಗಳಿಂದ ಅನುಭವಜನ್ಯವಾಗಿ ಬಂದ ಒಂದು ಪ್ರಮುಖ ಅಂಶವನ್ನು ಈ ಸಂದರ್ಭದಲ್ಲಿ ಸೂಚಿಸಬಹುದಾಗಿದೆ: ಅದೆಂದರೆ, ಯೂರೋಪಿನ ಬಹುಮಟ್ಟಿನ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ಮಕ್ಕಳ ಸಾಹಿತ್ಯ ಬೋಧನೆ ಬಗೆಗೆ ಪ್ರಾಧ್ಯಾಪಕರುಗಳಿದ್ದುದು

ಹಾಗೂ ಈ ವಿಶ್ವವಿದ್ಯಾನಿಲಯಗಳಲ್ಲಿ ಮಕ್ಕಳ ಸಾಹಿತ್ಯ ಬೋಧನೆ ಒಂದು ಪಠ್ಯ ವಿಷಯವಾಗಿದ್ದುದು. ಆಸ್ಟ್ರೇಲಿಯದಂತಹ ಸಣ್ಣ ದೇಶದಲ್ಲಿ ಕೂಡ ಮಕ್ಕಳ ಸಾಹಿತ್ಯ ಬೋಧನೆ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಪಠ್ಯ ವಿಷಯವಾಗಿದೆ. ಈ ಎಲ್ಲ ದೇಶಗಳಲ್ಲಿ ಮಕ್ಕಳ ಸಾಹಿತ್ಯ ಕುರಿತ ಸಂಶೋಧನೆಗಳು, ಪ್ರೌಢಗ್ರಂಥಗಳು ಪ್ರಕಟವಾಗುತ್ತಲಿವೆ. ಕರ್ನಾಟಕದ ಹಾಗೂ ಕನ್ನಡ ಭಾಷೆ ಬೋಧಿಸುವ ವಿಶ್ವವಿದ್ಯಾನಿಲಯಗಳಲ್ಲಿ ಮಕ್ಕಳ ಸಾಹಿತ್ಯವನ್ನು ಒಂದು ಪಠ್ಯ ವಿಷಯವನ್ನಾಗಿ ಗೊತ್ತುಪಡಿಸಿದಾಗ ಕನ್ನಡ ಮಕ್ಕಳ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ನೀಡಿದಂತಾಗುತ್ತದೆ.

ಈಗ ನಮ್ಮ ಮುಂದಿರುವ ಸಮಸ್ಯೆ- ಈವರೆಗಿನ ಮಕ್ಕಳ ಸಾಹಿತ್ಯದ ಸಂಗ್ರಹಣೆ, ವಿಶ್ಲೇಷಣೆ ಹಾಗೂ ವರ್ಗೀಕರಣ. ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯು ೧೯೬೪ರಷ್ಟು ಹಿಂದೆಯೇ ನಡೆಸಿದ ಮಕ್ಕಳ ಸಾಹಿತ್ಯ ಕುರಿತ ರಾಷ್ಟ್ರೀಯ ಸಮಾವೇಶದಲ್ಲಿ ಮಕ್ಕಳ ಸಾಹಿತ್ಯದಲ್ಲಿ ಒಂದು ವಿಧಾನ ಹಾಗೂ ವ್ಯವಸ್ಥೆಯ ಅಭಾವವಿರುವುದನ್ನು ಗಮನಿಸಿ, ಈ ಪ್ರಕಾರದಲ್ಲಿ ಸಾಕಷ್ಟು ಸಂಶೋಧನೆ ನಡೆದಿಲ್ಲವೆಂಬ ತೀರ್ಮಾನಕ್ಕೆ ಬಂದಿದ್ದಲ್ಲದೆ ಈ ಸಂಶೋಧನೆ ಯಾವ ಮಾದರಿಯಲ್ಲಿ ನಡೆಯಬಹುದೆಂದೂ ಸೂಚಿಸಿತು. ಆದರೆ ಇದೆಲ್ಲ ಬೆಕ್ಕಿನ ಕತ್ತಿಗೆ ಗಂಟೆ ಕಟ್ಟುವ ಮಾತಾಯಿತು. ಏಕೆಂದರೆ, ಆ ಸಂಸ್ಥೆಯೇ ಬಾಲಗ್ರಹಪೀಡಿತವಾಗಿ ಬಯಲಾಯಿತು. ಆ ಸಮಾವೇಶದಲ್ಲಿ ಸಾಕಷ್ಟು ಉತ್ತಮ ಸಲಹೆಗಳು ಬಂದಿದ್ದು ಅವುಗಳಲ್ಲಿ ಬಹುಮಟ್ಟಿನವು ಮೂರು ದಶಕಗಳ ಅನಂತರವೂ ಸಲಹೆಯ ರೂಪದಲ್ಲಿಯೇ ಇರುವುದು ನಾವು ನಮ್ಮ ಮಕ್ಕಳ ಪುಸ್ತಕಗಳ ರಚನೆ ಹಾಗೂ ಪ್ರಕಟಣೆಯ ಬಗ್ಗೆ ತೋರಿಸುತ್ತಿರುವ ಕಾಳಜಿಗೆ ದ್ಯೋತಕವೆನ್ನಬಹುದು.

ನಮ್ಮ ಶಿಕ್ಷಣ ಇಲಾಖೆ ಮತ್ತು ವಿಶ್ವವಿದ್ಯಾಲಯಗಳು ಮಕ್ಕಳ ಸಾಹಿತ್ಯವನ್ನು ಕುರಿತಂತೆ ಕೆಲವು ಸಂಶೋಧಕರನ್ನು ತೊಡಗಿಸಬಹುದು. ಕೆಲವರಿಂದ ವಿಶಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟವಾದ ಪ್ರಬಂಧಗಳನ್ನು ರಚಿಸುವಂತೆ ವ್ಯವಸ್ಥೆ ಮಾಡಬಹುದು. ತಮ್ಮ ವಾರ್ಷಿಕ ಸಂಚಿಕೆಗಳಲ್ಲಿ ಮಕ್ಕಳ ಸಾಹಿತ್ಯವನ್ನು ಕುರಿತ ವೈಜ್ಞಾನಿಕ ಹಾಗೂ ವಿದ್ವತ್ಪೂರ್ಣ ಲೇಖನಗಳನ್ನು ಅಥವಾ ಚಿಂತನೆಗಳನ್ನು ಪ್ರಕಟಿಸಬಹುದು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಕಟಣೆಯಾದ 'ಅನಿಕೇತನ'ದಲ್ಲಿ ಮಕ್ಕಳ ಸಾಹಿತ್ಯ ಕುರಿತ ವಿಶೇಷ ಸಂಚಿಕೆಯನ್ನು ತಂದು ಅದರಲ್ಲಿ ಮಾದರಿಯಾಗಬಲ್ಲಂತಹ ಸಾಹಿತ್ಯವನ್ನು ಪ್ರಕಟಿಸಬಹುದು. ಇಂಥ ಕಾರ್ಯಕ್ರಮಗಳಿಗೆ ಸರ್ಕಾರವೂ, ಸಾಹಿತ್ಯ ಹಾಗೂ ನಾಟಕ ಅಕಾಡೆಮಿಗಳೂ ಧನಸಹಾಯ ಮಾಡುವುದು ಅವಶ್ಯ.

ನಮ್ಮ ಭಾವೀ ಪ್ರಜೆಗಳ ಅಭ್ಯುದಯದ ದೃಷ್ಟಿಯಿಂದ ಹೇಳುವುದಾದರೆ, ಈ ಸಂಸ್ಥೆಗಳು ಮಾಡಲೆಂದು ಅವರ ಮುಂದೆ ಕೈಯೊಡ್ಡಿ ಕುಳಿತುಕೊಳ್ಳುವುದಕ್ಕಿಂತ, ಈ ಎಲ್ಲಾ ಯೋಜನೆಗಳನ್ನು ತನ್ನ ಪರಿಧಿಗೆ ತೆಗೆದುಕೊಂಡು ಸೋದರ ಸಂಸ್ಥೆಗಳ ನೆರವಿನಿಂದ ತಾನೇ ಆಗಮಾಡಬಹುದಾದಂತಹ ಕರ್ನಾಟಕ ರಾಜ್ಯ ಸರ್ಕಾರದ ಆಶ್ರಯದಲ್ಲಿ ರೂಪುಗೊಳ್ಳುವ 'ಮಕ್ಕಳ ಸಾಹಿತ್ಯ ಅಕಾಡೆಮಿ' ಈ ಶತಮಾನದ ಮೊದಲ ಕೆಲಸವಾಗಬೇಕಾಗಿದೆ. ಅಂತಹ ಶುಭಾರಂಭವು ಮಕ್ಕಳ ಸಾಹಿತ್ಯದಲ್ಲಿನ ಗತಿ-ಗುರಿಗಳಲ್ಲಿ ಸ್ವಲ್ಪಮಟ್ಟಿನ ಸುಧಾರಣೆಗಳನ್ನು ತರಲು ಸಾಧ್ಯವಾಗಬಲ್ಲದು ಎಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

**ಸೂ. ಸುಬ್ರಹ್ಮಣ್ಯಂ**
ಕನ್ನಡ ವಿಜ್ಞಾನ ಪರಿಷತ್ತು, 'ವನಸುಮ' ೭೧೧, ೧೦ಎ ಮುಖ್ಯರಸ್ತೆ
೪ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧.

## ವಿನೋದ ಗಣಿತ

**ಮಾರ್ಚ್ ತಿಂಗಳ ಪ್ರಶ್ನೆಗೆ ಉತ್ತರ**

ಗಣಿತಶಾಸ್ತ್ರದ ಅನೇಕ ಸಮಸ್ಯೆಗಳನ್ನು ಬಿಡಿಸುವಲ್ಲಿ 'ಎಣಿಕೆ'ಯ ತಂತ್ರ ಪ್ರಮುಖ ಪಾತ್ರ ವಹಿಸುತ್ತದೆ. ಗಣಿತಶಾಸ್ತ್ರದ ಭಂಡಾರವು ಅತಿ ಸರಳ ಹಾಗೂ ಅತಿ ಸಂಕೀರ್ಣವಾದ ಅನೇಕ ಎಣಿಕೆಯ ತಂತ್ರಗಳಿಂದ ಸಮೃದ್ಧವಾಗಿದೆ. ಇಂತಹ ಒಂದು ತಂತ್ರದಲ್ಲಿ 'ಸಮ' ಮತ್ತು 'ಬೆಸ' ಸಂಖ್ಯೆಗಳ, ಎಲ್ಲರಿಗೂ ಪರಿಚಿತವಾದ ಲಕ್ಷಣಗಳು ಉಪಯೋಗಕ್ಕೆ ಬರುತ್ತವೆ. ಉದಾ : ಎರಡು ಸಮ ಸಂಖ್ಯೆಗಳ ಮೊತ್ತ ಒಂದು ಸಮ ಸಂಖ್ಯೆ. ಎರಡು ಬೆಸ ಸಂಖ್ಯೆಗಳ ಮೊತ್ತ ಒಂದು ಸಮ ಸಂಖ್ಯೆ. ಒಂದು ಸಂಖ್ಯೆ ಬೆಸ ಇನ್ನೊಂದು ಸಂಖ್ಯೆ ಸಮವಾಗಿದ್ದರೆ ಅವುಗಳ ಮೊತ್ತ ಒಂದು ಬೆಸ ಸಂಖ್ಯೆ.

ಎಣಿಕೆಯ ಇನ್ನೊಂದು 'ತತ್ವ'ವನ್ನು ಹೀಗೆ ಹೇಳಬಹುದು : ಒಂದು ಪ್ರಕರಣದಲ್ಲಿ ಯಾವುದಾದರೂ ಎರಡು ವಿಭಿನ್ನ ಪ್ರಕಾರಗಳು ಸಂಭವಿಸಿದಾಗಲೆಲ್ಲ ಒಂದಕ್ಕೊಂದು 'ಎಣಿ'ಕೆಯಾಗಿಯೇ ಸಂಭವಿಸುತ್ತಿದ್ದರೆ ಆ ಎರಡು ಪ್ರಕರಣಗಳು ಸಂಭವಿಸುವ ಸಂಖ್ಯೆ ಪರಸ್ಪರ ಒಂದೇ ಆಗಿರುತ್ತದೆ.

ಇವೆಲ್ಲ ಒಂದು ಹಸುಳೆಗೂ ಅರ್ಥವಾಗಬಲ್ಲಷ್ಟು ಸರಳ ಎನಿಸಬಹುದು. ಆದರೂ ಈ ಅಂಶಗಳು ಎಣಿಕೆಯ ಅನೇಕ ಸಂದರ್ಭದಲ್ಲಿ ಅತ್ಯಂತ ಪ್ರಭಾವಶಾಲಿ ತಂತ್ರಗಳಾಗುವುದುಂಟು. ಮೇಲೆ ಹೇಳಿದ ಅಂಶಗಳನ್ನು ಉಪಯೋಗಿಸಿಕೊಂಡು ಮಾರ್ಚ್ ತಿಂಗಳ ಪ್ರಶ್ನೆಗೆ ಉತ್ತರ ಕೊಡಬಹುದು.

**ಮೊದಲನೆ ಪ್ರಶ್ನೆಗೆ ಉತ್ತರ** : ಪ್ರತಿಯೊಂದು ಹಸ್ತಲಾಘವ ಕ್ರಿಯೆ ನಡೆಯುವಾಗಲೂ ಇಬ್ಬರು ವ್ಯಕ್ತಿಗಳ ನಡುವೆ ನಡೆಯಬೇಕಷ್ಟೆ. ಹೀಗಾಗಿ, ಕೂಟದಲ್ಲಿ ನಡೆದ ಹಸ್ತಲಾಘವಗಳ 'ಮೊತ್ತ' ಎರಡೆರಡರಂತೆ ಸಂಗ್ರಹವಾಗಿದ್ದರಿಂದ ಅದೊಂದು ಸಮ ಸಂಖ್ಯೆ. ಈ ಮೊತ್ತವನ್ನು 'ಕ' ಎನ್ನೋಣ.

ಈ ಹಸ್ತಲಾಘವ ಕೊಟ್ಟ ವ್ಯಕ್ತಿಗಳನ್ನು ಎರಡು ವಿಭಿನ್ನ ಗುಂಪುಗಳನ್ನಾಗಿ ವಿಂಗಡಿಸಬಹುದು.

**ಮೊದಲನೆಯ ಗುಂಪು** : ಈ ಗುಂಪಿನಲ್ಲಿರುವ ಪ್ರತಿಯೊಬ್ಬರೂ ಯಾವುದಾದರೊಂದು ಸಮ ಸಂಖ್ಯೆಯ ಬಾರಿ ಹಸ್ತಲಾಘವ ಮಾಡಿರುತ್ತಾರೆ. ಈ ಗುಂಪಿನಲ್ಲಿರುವ ಜನರು ಎಷ್ಟಾದರಾಗಲಿ, ಅವರಿಂದ ನಡೆದ ಒಟ್ಟು ಹಸ್ತಲಾಘವಗಳ ಸಂಖ್ಯೆ ಅನೇಕ ಸಮ ಸಂಖ್ಯೆಗಳ ಮೊತ್ತವಾಗಿದ್ದು ಅದೂ ಒಂದು ಸಮಸಂಖ್ಯೆಯಷ್ಟೆ. ಇದನ್ನು 'ಚ' ಎನ್ನೋಣ.

**ಎರಡನೆಯ ಗುಂಪು** : ಒಂದು ಬೆಸ ಸಂಖ್ಯೆಯ ಬಾರಿ ಹಸ್ತ ಲಾಘವ ಮಾಡಿದವರು. ಈ ಗುಂಪಿನಿಂದ ನಡೆದ ಒಟ್ಟು ಹಸ್ತಲಾಘವಗಳ ಸಂಖ್ಯೆಯನ್ನು 'ತ' ಎನ್ನೋಣ.

ಈಗ 'ಚ' ಮತ್ತು 'ತ'ಗಳ ಮೊತ್ತ 'ರ'ಗೆ ಸಮ. ಈಗಾಗಲೇ 'ಚ' ಮತ್ತು 'ತ' ಸಮ ಸಂಖ್ಯೆಗಳಾದ್ದರಿಂದ 'ತ' ಕೂಡ ಒಂದು ಸಮ ಸಂಖ್ಯೆ. ಆದರೆ 'ತ' ಹಲವಾರು (ಎರಡನೇ ಗುಂಪಿನಲ್ಲಿರುವ ಮಂದಿಯಷ್ಟು) ಬೆಸ ಸಂಖ್ಯೆಗಳ ಮೊತ್ತ. ಇದು ಸಮ ಸಂಖ್ಯೆಯಾಗಬೇಕಾದರೆ ಎರಡನೇ ಗುಂಪಿನಲ್ಲಿರುವವರ ಸಂಖ್ಯೆ ಒಂದು ಸಮ ಸಂಖ್ಯೆ.

**ಎರಡನೆಯ ಪ್ರಶ್ನೆಗೆ ಉತ್ತರ** : ೮x೮ ಚದರದ ಕೊಠಡಿಯನ್ನು ಚದುರಂಗದ 'ಮಣೆ'ಯಂತೆ ೧x೧ ಚೌಕದ ೬೪ ಮನೆಗಳನ್ನಾಗಿ ವಿಭಾಗಿಸಿ 'ಮಣೆ'ಯಲ್ಲಿರುವಂತೆಯೇ ಕಪ್ಪು ಮತ್ತು ಬಿಳಿ ಬಣ್ಣಗಳಿಂದ ತುಂಬಲಾಗಿದೆಯೆಂದುಕೊಳ್ಳೋಣ. 'ಸಿಂಕ್' ಮತ್ತು ಕಪಾಟಿಗಾಗಿ ವಿರುದ್ಧ ಮೂಲೆಗಳೆರಡರಲ್ಲಿ ೧x೧ ಚೌಕದ ಎರಡು ಮನೆಗಳನ್ನು ಕಾದಿರಿಸಲಾಗಿದೆ. ಹೀಗೆ ಕಾದಿರಿಸಿದ ಚೌಕಗಳೆರಡೂ ಒಂದೇ ಬಣ್ಣದವುಗಳಾಗಿರುತ್ತವೆಂಬುದನ್ನು (ಯಾವ ಬಣ್ಣ ಎಂಬುದು ಯಾವ ಎರಡು ವಿರುದ್ಧ ಮೂಲೆಗಳನ್ನು ಕಾದಿರಿಸಲಾಗಿದೆ ಎಂಬುದರ ಮೇಲೆ ನಿರ್ಧಾರವಾಗುತ್ತದೆ. ಆದರೆ ಇದು ಅಪ್ರಸ್ತುತ) ಗಮನಿಸಿ.

ಈಗ ಕೊಠಡಿಯ ಉಳಿದ ನೆಲವನ್ನು ೧x೨ ಚದರದ ಬಿಲ್ಲೆಗಳಿಂದ ಹಾಸಬೇಕು. ಬಿಲ್ಲೆಗಳನ್ನು 'ಅಡ್ಡ'ವಾಗಿ ಅಥವಾ 'ಲಂಬ'ವಾಗಿ ಹಾಸಬಹುದು. ಇದು ಹೇಗಿದ್ದರೂ ಹಾಸಿದ ಪ್ರತಿಬಿಲ್ಲೆಯೂ ಒಂದು 'ಕಪ್ಪು' ಮನೆಯನ್ನೂ ಒಂದು 'ಬಿಳಿ' ಮನೆಯನ್ನೂ ಎಣೆ ಎಣೆಯಾಗಿ ಮುಚ್ಚುತ್ತದೆ ಎಂಬುದನ್ನು ಗಮನಿಸಿ. ಹೀಗಾಗಿ ನೆಲವನ್ನು ೧x೨ ಬಿಲ್ಲೆಗಳಿಂದ ಸರಿಯಾಗಿ ಹಾಸಬಹುದಾದರೆ ಹಾಸಿದ ನೆಲದಲ್ಲಿರುವ 'ಕಪ್ಪು' ಮನೆಗಳ ಸಂಖ್ಯೆ ಮತ್ತು 'ಬಿಳಿ' ಮನೆಗಳ ಸಂಖ್ಯೆ ಪರಸ್ಪರ ಸಮನಾಗಿರಬೇಕು. ಆದರೆ ಮೇಲೆ ಹೇಳಿದಂತೆ 'ಉಳಿದಿರುವ' ಜಾಗದಲ್ಲಿ, ಯಾವುದಾದರೊಂದು ಬಣ್ಣದ ಮನೆಗಳ ಸಂಖ್ಯೆ ಇನ್ನೊಂದು ಬಣ್ಣದ ಮನೆಗಳ ಸಂಖ್ಯೆಗಿಂತ ೨ ಮನೆಗಳು ಹೆಚ್ಚಾಗಿರುತ್ತವೆ ! ಪ್ರಶ್ನೆಗೆ ಉತ್ತರ ಸಿಕ್ಕಿದಂತಾಯಿತು.

**ಈ ತಿಂಗಳ ಪ್ರಶ್ನೆ**

ಚದುರಂಗದ ಮಣೆಯ ಒಂದು ನಿರ್ದಿಷ್ಟ ಮೂಲೆಯ ಮನೆಯಲ್ಲಿ ಒಂದು 'ಕುದುರೆ' ಇಡಲಾಗಿದೆ. ಮಣೆಯಲ್ಲಿ ಬೇರಾವುದೇ ಚದುರಂಗದ 'ಕಾಯಿ'ಗಳಿಲ್ಲ. ಈಗ ಚದುರಂಗದಾಟದ ನಿಯಮಕ್ಕನುಸಾರವಾಗಿ 'ಕುದುರೆ'ಯನ್ನು ನಡೆಸಿ, ಮಣೆಯ ಉಳಿದ ಎಲ್ಲಾ ಮನೆಗಳನ್ನೂ ಒಮ್ಮೆ ಮಾತ್ರ ಹೊಕ್ಕು ಕೊನೆಗೊಮ್ಮೆ ಆರಂಭದ ಮೂಲೆಯಿಂದ ವಿರುದ್ಧ ದಿಕ್ಕಿನಲ್ಲಿರುವ ಇನ್ನೊಂದು – ಮೂಲೆ ಮನೆಗೆ ಸೇರಿಕೊಳ್ಳುವಂತೆ ಆಟವಾಡಲು ಸಾಧ್ಯವೆ ?

❑❑❑



# ಹಸಿರು ಕ್ರಾಂತಿ-ಎರಡು ಮುಖಗಳು

**ಎ. ಶಿವಶಂಕರ ರಾವ್**

ಇತ್ತೀಚೆಗೆ ನಿಧನರಾದ ಶ್ರೀ ಸಿ. ಸುಬ್ರಹ್ಮಣ್ಯಂ ಅವರನ್ನು ಭಾರತದಲ್ಲಿ ಹಸಿರು ಕ್ರಾಂತಿಯ ಹರಿಕಾರರೆಂದು ಕರೆಯಲಾಗುತ್ತದೆ. ಅವರನ್ನು "ಭಾರತ ರತ್ನ" ಪ್ರಶಸ್ತಿ ನೀಡಿ ಗೌರವಿಸಲಾಗಿತ್ತು. ಇದು ಹಸಿರು ಕ್ರಾಂತಿಗೆ ಸಂದ ಗೌರವ.

ಹಸಿರು ಕ್ರಾಂತಿಯನ್ನು ಪ್ರಶಂಸಿಸಲಾಗುತ್ತಿರುವಂತೆಯೇ ಅದರ ಬಗ್ಗೆ ಭಿನ್ನಾಭಿಪ್ರಾಯಗಳು ಕೇಳಿಬರುತ್ತಿವೆ. ಮುಂಚೆ ಹಸಿರು ಕ್ರಾಂತಿಯನ್ನು ಮೆಚ್ಚಿಕೊಂಡಿದ್ದ ಅನೇಕ ವಿಜ್ಞಾನಿಗಳು ಈಗ ಅದನ್ನು ಟೀಕಿಸುತ್ತಿದ್ದಾರೆ!

ಈಗ ಕೆಲವರು ಹೇಳುವಂತೆ ಹಸಿರು ಕ್ರಾಂತಿಯು ಒಂದು ಪ್ರಮಾದವಾಗಿತ್ತೇ? ಕೃಷಿರಂಗದ ಕೆಲವು ತೊಂದರೆಗಳಿಗೆ ಹಸಿರು ಕ್ರಾಂತಿಯು ಕಾರಣವಾಯಿತೇ?

ಭಾರತವು ತನ್ನ ಜನತೆಗೆ ಆಹಾರ ಒದಗಿಸಲಿಕ್ಕಾಗಿ ಅಮೆರಿಕಾ ದೇಶದ ಪಿ. ಎಲ್. ೪೮೦ನ್ನು ಅವಲಂಬಿಸಿದ್ದ ದಿನಗಳನ್ನು ನಾವು ಜ್ಞಾಪಿಸಿಕೊಳ್ಳಬೇಕಾಗಿದೆ. ಹಸಿರು ಕ್ರಾಂತಿಯಿಂದಾಗಿ ಆ ಕಷ್ಟದ ದಿನಗಳಿಂದ ಹೊರಬರಲು ನಮಗೆ ಸಾಧ್ಯವಾಯಿತು ಎಂಬುದನ್ನು ನಾವಿಂದು ನೆನಪಿಟ್ಟುಕೊಳ್ಳಬೇಕಾಗಿದೆ.

**ಕೃಷಿಕರು ಸಾವಯವ ಗೊಬ್ಬರ ಬಳಸಲಿಲ್ಲ**

ಇಂದು ನಮ್ಮ ಎಲ್ಲ ಸಮಸ್ಯೆಗಳಿಗೂ ಸಾವಯವ ಕೃಷಿ ಪರಿಹಾರ ಎಂದು ಹೇಳಲಾಗುತ್ತಿದೆ. ಮತ್ತು ಕೃಷಿ ಉತ್ಪಾದನೆಯಲ್ಲಿ ಉತ್ತುಂಗ ತಲುಪಿದ ಬಳಿಕ ಇಳಿಮುಖವಾಗುತ್ತಿರುವ ಫಸಲಿನ ಪ್ರಮಾಣಕ್ಕೆ ಹಸಿರು ಕ್ರಾಂತಿಯೇ ಕಾರಣ ಎಂದು ಬೆರಳೆತ್ತಿ ದೂಷಿಸಲಾಗುತ್ತಿದೆ. ಉತ್ತಮ ಫಸಲು ಪಡೆಯಲು ಸಾವಯವ ಗೊಬ್ಬರಗಳು ಅಗತ್ಯವೆಂದು ಹಸಿರು ಕ್ರಾಂತಿ ಪ್ರಚಾರಕರು ಒತ್ತಿ ಹೇಳಿದ್ದರು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಹೊಲದ ಬೆಳೆಯ ಕೃಷಿಯಲ್ಲಿ ಪ್ರತಿ ಎಕರೆಗೆ ೫ ರಿಂದ ೧೦ ಸಾವಿರ ಪೌಂಡ್ ಹಟ್ಟಿಗೊಬ್ಬರ ಅಥವಾ ಕಂಪೋಸ್ಟನ್ನು ಹಾಕಬೇಕೆಂದು ಅವರು ಮಾಡಿದ್ದ ಶಿಫಾರಸನ್ನು ಕೃಷಿಕರು ಅನುಸರಿಸಲಿಲ್ಲ. ಯಾಕೆಂದರೆ ಈ ಹೊತ್ತಿಗಾಗಲೇ ತೋಟಗಾರಿಕಾ ಬೆಳೆಗಳ ಕೃಷಿಯಲ್ಲಿ ಆಸಕ್ತಿ ತೋರಿದ ರೈತರು ಹಟ್ಟಿಗೊಬ್ಬರವನ್ನು ಈ ಬೆಳೆಗಳಿಗೇ ಬಳಸಿದ್ದರು. ನನ್ನ ಪರಿಚಯದ ಅನೇಕ ರೈತರು ತಮ್ಮ ಹೊಲದ ಬೆಳೆಗಳಿಗೆ ವರ್ಷಾನುಗಟ್ಟಲೆ ಹಟ್ಟಿಗೊಬ್ಬರ ಅಥವಾ ಕಂಪೋಸ್ಟನ್ನು ಉಪಯೋಗಿಸದೆ ರಾಸಾಯನಿಕ ಗೊಬ್ಬರಗಳನ್ನೇ ಬಳಸಿದ್ದು ನನಗೆ ತಿಳಿದಿದೆ. ಹೊಲದ ಬೆಳೆಗಳ ಎಕ್ರೆವಾರು ಫಸಲು ಇಳಿಮುಖವಾಗಲು ಇದೂ ಒಂದು ಕಾರಣ. ಆ ರೈತರು (ರಾಸಾಯನಿಕ ಗೊಬ್ಬರಗಳ ಮೂಲಕ) ಸರಿಯಾದ ಪ್ರಮಾಣದಲ್ಲೇ ಎನ್. ಪಿ. ಕೆ. ಒದಗಿಸಿದ್ದರೂ, ಹಟ್ಟಿಗೊಬ್ಬರದಂತಹ ಸಾವಯವ ಗೊಬ್ಬರ ಬಳಕೆ ಮಾಡದ ಕಾರಣ ಸೂಕ್ಷ್ಮ ಪೋಷಕಾಂಶಗಳು ನಷ್ಟವಾದವು. ಹಸಿರು ಗೊಬ್ಬರದ ಬೆಳೆಗಳನ್ನು ಹೊಲದಲ್ಲೇ ಬೆಳೆದು ಉತ್ತು ಮಣ್ಣಿಗೆ ಸೇರಿಸುವ ಸಲಹೆಯನ್ನೂ ರೈತರು ಅನುಸರಿಸಲಿಲ್ಲ. ಇದರಿಂದಾಗಿ ಮಣ್ಣಿನ ಸಸ್ಯ ಪೋಷಕಾಂಶಗಳಲ್ಲಾದ ಏರುಪೇರು ಕೂಡ ಸಸ್ಯರೋಗ ಮತ್ತು ಪೀಡೆಗಳ ಹೆಚ್ಚಳಕ್ಕೆ ಕಾರಣವಾಯಿತು.

ಇದೇ ರೀತಿಯಲ್ಲಿ, ಹಸಿರು ಕ್ರಾಂತಿಯ ಪ್ರಚಾರಕರು ಸುಣ್ಣವನ್ನು ಮಣ್ಣಿಗೆ ಸೇರಿಸಿ, ಮಣ್ಣಿನ ಪಿ. ಎಚ್. (ರಸಸಾರ) ಸರಿಪಡಿಸಬೇಕೆಂಬ ಸಲಹೆಯನ್ನೂ ನೀಡಿದ್ದರು. ಇದನ್ನು ಎಷ್ಟು ರೈತರು ಪಾಲಿಸಿದರು? ಅವರ ಸಲಹೆಯನ್ನು ಅನುಸರಿಸದೆ, ಅವರನ್ನು ದೂಷಿಸುವುದು ಯಾಕೆ?

**ಮಾರಕ ಪೀಡೆ ನಾಶಕಗಳು ಮತ್ತು ಕಳೆ ನಾಶಕಗಳು**

ಹಸಿರು ಕ್ರಾಂತಿವಾದಿಗಳ ಇನ್ನೊಂದು ಶಿಫಾರಸು, ಪೀಡೆಗಳ ನಾಶಕ್ಕೆ ಪೀಡೆ ನಾಶಕಗಳನ್ನು ಮತ್ತು ಕಳೆಗಳ ಹತೋಟಿಗೆ ಕಳೆ ನಾಶಕಗಳನ್ನು ಬಳಸಬೇಕು ಎಂಬುದು. ಇದು ಹಸಿರು ಕ್ರಾಂತಿಯ ಕೆಲವು ತೊಂದರೆಗಳಿಗೆ ಕಾರಣವಾಯಿತು.

ವಿಶಾಲ ವ್ಯಾಪ್ತಿಯ ಪೀಡೆ ನಾಶಕಗಳು ಪೀಡೆಗಳ ಜೊತೆಗೆ ಉಪಕಾರಿ ಕೀಟಗಳನ್ನೂ ನಾಶ ಮಾಡಿದವು. ಇದರಿಂದಾಗಿ ಪೀಡೆ ಕೀಟಗಳ ಸಂಖ್ಯಾ ಸ್ಫೋಟವಾಯಿತು. ಮತ್ತು ಉಪಕಾರಿ ಕೀಟಗಳ ನಿರ್ನಾಮವಾಯಿತು. ಕ್ಲೋರಿನೇಟೆಡ್ ಹೈಡ್ರೋಕಾರ್ಬನ್‌ಗಳ ಬಳಕೆಯಿಂದಾಗಿ ದೀರ್ಘಕಾಲಿಕ ಶೇಷಾಂಶಗಳು ಮಣ್ಣಿನಲ್ಲಿ ಉಳಿದು, ಇವು ಮಣ್ಣಿನ ಆರೋಗ್ಯಕ್ಕೆ ಅವಶ್ಯವಾದ ಸೂಕ್ಷ್ಮಜೀವಿಗಳನ್ನು ನಾಶಮಾಡಿದವು. ಕೃಷಿಯಲ್ಲಿ ಬಳಕೆಯಾಗುವ ಸಸ್ಯಾಂತರ್ಗತ ಪೀಡೆ ನಾಶಕಗಳು ಉಪಕಾರಿ ಕೀಟಗಳಿಗೆ ಬಹಳ ತೊಂದರೆ ಮಾಡದಿದ್ದರೂ, ಅವನ್ನು ಪ್ರಯೋಗಿಸಿ ಬೆಳೆಸಿದ ಬೆಳೆಗಳ ಫಸಲು ಮಾನವ ಬಳಕೆಗೆ ಸುರಕ್ಷಿತ ಎನ್ನುವಂತಿಲ್ಲ.

**ಹಸಿರು ಕ್ರಾಂತಿಯನ್ನು ದೂಷಿಸಬೇಡಿ**

ಆರೋಗ್ಯಪೂರಕವಾದ ಫಸಲು ನೀಡುವ ಸಾವಯವ ಕೃಷಿ ಮಾನವ ಜನಾಂಗಕ್ಕೆ ಹಿತ ಎಂಬುದು ನಿಜ. ಆದರೆ, ಕೃಷಿಯನ್ನೇ ಅವಲಂಬಿಸಿ ಬದುಕುವ ನಿಟ್ಟಿನಲ್ಲಿ ತೋಟಗಾರಿಕಾ ಬೆಳೆಗಳ ವ್ಯವಸಾಯ ಮಾಡಬೇಕಾದರೆ ಸಾಕಷ್ಟು ಸಾವಯವ ಗೊಬ್ಬರ ಸಿಗುವುದಿಲ್ಲ; ಹಾಗಾಗಿ ರಾಸಾಯನಿಕ ಗೊಬ್ಬರಗಳನ್ನು ಬಳಸಬೇಕಾದೀತು. ಅದಲ್ಲದೆ, ಕೀಟಗಳ ನಿಯಂತ್ರಣಕ್ಕಾಗಿ ಸಮಗ್ರ ಕೀಟ ನಿಯಂತ್ರಣ ವಿಧಾನಗಳನ್ನೂ ಅನುಸರಿಸಬೇಕಾದೀತು. ಆದ್ದರಿಂದ ಕೃಷಿಕರು ಬದಲಿ ವಿಧಾನಗಳನ್ನು ತೂಗಿ ನೋಡಿ, ತಮ್ಮ ತಮ್ಮ ಹೊಲಗಳ ಕೃಷಿಗೆ ಸೂಕ್ತವಾದ ಕೃಷಿ ವಿಧಾನಗಳನ್ನು ಅನುಸರಿಸಬೇಕಾಗಿದೆ.

ಸಾವಯವ ಕೃಷಿ ಉತ್ತಮ ಹಾಗೂ ಅನುಸರಿಸಲು ಯೋಗ್ಯ ಎಂಬುದರ ಬಗ್ಗೆ ಎರಡು ಮಾತಿಲ್ಲ. ಆದರೆ, ಏರುತ್ತಿರುವ ಜನಸಮುದಾಯಕ್ಕೆ ಆಹಾರ ಒದಗಿಸಿ, ಆಹಾರದ ಒದಗಣೆಯಲ್ಲಿ ಸ್ವಾವಲಂಬನೆ ಸಾಧಿಸಲು ಕಾರಣವಾದ ಹಸಿರು ಕ್ರಾಂತಿಯನ್ನು ದೂಷಿಸುವುದೂ ಸರಿಯಲ್ಲ.

ಎ. ಶಿವಶಂಕರ ರಾವ್
'ಕೃಷ್ಣಾ ಫಾರ್ಮ್', ಅಡ್ಡೂರು ಪೋಸ್ಟ್,
ವಯಾ ಗುರುಪುರ, ಮಂಗಳೂರು ತಾಲ್ಲೂಕು - ೫೭೪ ೧೪೫.

# ಅಮೆರಿಕದಿಂದ ಹೊಸ ಶಸ್ತ್ರಾಸ್ತ್ರ ಪೈಪೋಟಿಗೆ ನಾಂದಿ

**ಸೀಯಾರ್ಕೆ**

**ಚು**ನಾವಣೆಯ ಹಗರಣವೆಲ್ಲ ಮುಗಿದು ಅಮೆರಿಕಾದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಮೇಲೆ ಜಾರ್ಜ್ ಬುಷ್ ಪ್ರಕಟಿಸಿದ ಮೊದಲ ಕ್ರಮಗಳಲ್ಲಿ ಒಂದು ಕ್ಷಿಪಣಿ ರಕ್ಷಣಾ ಕಾರ್ಯಕ್ರಮದ ಮುಂದುವರಿಕೆ. ಸಾವಿರಾರು ಕೋಟಿ ಡಾಲರುಗಳ ವೆಚ್ಚದಲ್ಲಿ ನಿರ್ಮಾಣಗೊಳ್ಳುವ ಈ ವ್ಯವಸ್ಥೆ ಅಮೆರಿಕಾವನ್ನು ಕ್ಷಿಪಣಿ ದಾಳಿಯಿಂದ ರಕ್ಷಿಸುವುದು ಎಂದು ಅಂಬೋಣ. ಆದರೆ ಇದು ನಿಜವಾಗಿಯೂ ತಾರಾ ಸಮರದ ಇನ್ನೊಂದು ರೂಪ. ಅಮೆರಿಕಾದ ಈ ರಕ್ಷಣಾ ವ್ಯೂಹದ ಯೋಜನೆ ಇನ್ನೊಂದು ಶಸ್ತ್ರಾಸ್ತ್ರ ಪೈಪೋಟಿಗೆ ನಾಂದಿ ಎನ್ನುವುದರಲ್ಲಿ ಸಂದೇಹವಿಲ್ಲ. ಅಧ್ಯಕ್ಷ ಕ್ಲಿಂಟನ್ ಅಧಿಕಾರಾವಧಿಯಲ್ಲಿ ಈ ಕ್ಷೇತ್ರದಲ್ಲಿ ನಡೆಸಿದ ಪ್ರಯೋಗ ವಿಫಲವಾದ್ದನ್ನು ಇಲ್ಲಿ ಸ್ಮರಿಸಬಹುದು. ಕ್ಷಿಪಣಿ ದಾಳಿ ವಿರುದ್ಧ 'ರಕ್ಷಾ ಕವಚದ' ಹೆಸರಿನಲ್ಲಿ ನಡೆಸುತ್ತಿರುವ ಈ ಪ್ರಯತ್ನಕ್ಕೆ ಅಮೆರಿಕ ಒಡ್ಡಿರುವ ಸಬೂಬು ನಿಜವಾದ ಉದ್ದೇಶವನ್ನು ಮರೆಮಾಚುವುದಾಗಿದೆ. ಕ್ಷಿಪಣಿಗಳನ್ನು ಅಭಿವೃದ್ಧಿಗೊಳಿಸುವುದರಲ್ಲಿ ಶ್ರೇಷ್ಠತೆ ಸಾಧಿಸಿ ಇತರ ದೇಶಗಳನ್ನು ಹಿಂದೆ ಬೀಳಿಸಿ ಬೆದರಿಕೆ ಹಾಕುವುದೇ ಮೂಲ ಗುರಿ. ಮುಖ್ಯವಾಗಿ ಇದು ಚೀಣಾ ಮತ್ತು ರಷ್ಯಾ ದೇಶಗಳನ್ನೇ ಗುರಿಯಾಗಿರಿಸಿಕೊಂಡಿರುವ ಯೋಜನೆ. ಈ ಎರಡು ದೇಶಗಳು ಅಮೆರಿಕದ ಈ ಹೆಜ್ಜೆ ಅಪಾಯಕಾರಿ ಎಂದು ಎಚ್ಚರಿಸಿವೆ. ಉತ್ತರ ಕೊರಿಯ, ಇರಾನ್, ಇರಾಕ್ ಮತ್ತು ಲಿಬಿಯಾದಂಥ ದೇಶಗಳು ಅಮೆರಿಕ ದೇಶವನ್ನು ತಲುಪಬಲ್ಲ ಕ್ಷಿಪಣಿಗಳನ್ನು ಹೊಂದಿರುವುದರಿಂದ ತಾನು ರಕ್ಷಣಾ ವ್ಯವಸ್ಥೆಯನ್ನು ನಿರ್ಮಿಸಿಕೊಳ್ಳಬೇಕಾಗಿ ಬಂದಿದೆ ಎಂದು ಅಮೆರಿಕ ಹೇಳುತ್ತಿದೆ. ಪದೇ ಪದೇ ಇದನ್ನೇ ಪ್ರಚಾರ ಮಾಡಿ ತನ್ನ ಕ್ರಮವನ್ನು ಸಮರ್ಥಿಸಿಕೊಳ್ಳಲು ಅಮೆರಿಕ ಪ್ರಯತ್ನಿಸಿದೆ.

ಹೊಸ ಬಗೆಯ ಶಸ್ತ್ರಾಸ್ತ್ರಗಳನ್ನು ಅಭಿವೃದ್ಧಿಗೊಳಿಸುವಾಗಲೆಲ್ಲ ಅಮೆರಿಕ ಒಡ್ಡುತ್ತಿರುವ ವಾದ ಇಂಥದೇ ಎಂಬುದನ್ನು ಕಳೆದ ಐವತ್ತು ವರ್ಷಗಳ ಇತಿಹಾಸವನ್ನು ಗಮನಿಸಿದರೆ ವೇದ್ಯವಾಗುತ್ತದೆ. ಎರಡನೇ ಮಹಾಯುದ್ಧದ ನಂತರ ಅತ್ಯಂತ ಪ್ರಬಲ ರಾಷ್ಟ್ರವಾಗಿ ಬೆಳೆದ ಅಮೆರಿಕ ಹೊಸ ಹೊಸ ಮಾರಕಾಸ್ತ್ರಗಳನ್ನು ನಿರ್ಮಿಸಿ ಶಸ್ತ್ರಾಸ್ತ್ರ ಪೈಪೋಟಿಯನ್ನು ಪ್ರಾರಂಭಿಸಿದೆ ಎಂಬುದನ್ನು ಮರೆಯುವ ಹಾಗಿಲ್ಲ. ಪರಮಾಣು ಬಾಂಬನ್ನು ಎರಡನೇ ಮಹಾಯುದ್ಧ ಕಾಲದಲ್ಲಿ ಅಭಿವೃದ್ಧಿಗೊಳಿಸಿದ ಅಮೆರಿಕ ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಪ್ರಯೋಗಿಸಿ ಅಮಾಯಕ ನಾಗರಿಕರನ್ನು ಆಹುತಿ ತೆಗೆದುಕೊಂಡದ್ದು ಇತಿಹಾಸ. ಯುದ್ಧದ ಕೊನೆಯ ದಿನಗಳಲ್ಲಿ ಜಪಾನ್ ಶರಣಾಗತವಾಗುವ ಸ್ಥಿತಿಯಲ್ಲಿದ್ದಾಗ ಪರಮಾಣು ಬಾಂಬಿನ ದಾಳಿ ಅನಿವಾರ್ಯವೇನಾಗಿರಲಿಲ್ಲ. ಆದರೂ ಅಮೆರಿಕ ತನ್ನ ಶಕ್ತಿ ಪ್ರದರ್ಶನಕ್ಕಾಗಿ ಅದನ್ನು ಬಳಸಿತು. ಆಗ ಈ ಸಾಮೂಹಿಕ ವಿನಾಶಕಾರಿ ಅಸ್ತ್ರವನ್ನು ಪಡೆದುಕೊಂಡಿದ್ದ ದೇಶ ಅಮೆರಿಕ ಒಂದೇ. ಅಂದು ಪ್ರಪಂಚದ ಜನಾಭಿಪ್ರಾಯಕ್ಕೆ ಮನ್ನಣೆ ನೀಡಿ ಅಮೆರಿಕ ಪರಮಾಣು ಬಾಂಬಿನ ನಿಷೇಧವನ್ನು ಅಂಗೀಕರಿಸಿದ್ದಲ್ಲಿ ಪ್ರಪಂಚದಲ್ಲಿ ಮಾರಕಾಸ್ತ್ರಗಳ ಭೀತಿ ಇರುತ್ತಿರಲಿಲ್ಲ. ಅನಿರ್ಬಂಧವಾದ ಶಸ್ತ್ರಾಸ್ತ್ರ ಪೈಪೋಟಿ ನಡೆಯುತ್ತಿರಲಿಲ್ಲ.

ಆದರೆ ಅಮೆರಿಕ ಹಾಗೆ ಮಾಡಲಿಲ್ಲ. ಬದಲಾಗಿ ಪರಮಾಣು ಬಾಂಬನ್ನು ಬ್ಲ್ಯಾಕ್ ಮೇಲ್ ಮಾಡಲು ಬಳಸಿಕೊಂಡು ಶೀತಯುದ್ಧ ಪ್ರಾರಂಭಿಸಿತು. ಅಂದು ಅಮೆರಿಕ ನ್ಯೂಕ್ಲಿಯರ್ ಅಸ್ತ್ರಗಳ ತಯಾರಿಕೆಗೆ ಒಡ್ಡಿದ ಕಾರಣ ಅಂದಿನ ಸೋವಿಯತ್ ಒಕ್ಕೂಟದ ಬೆದರಿಕೆ. ಪ್ರಪಂಚದಾದ್ಯಂತ ಶಾಂತಿಪ್ರಿಯರಾದ ಜನರು ಈ ಮಾರಕಾಸ್ತ್ರಗಳ ಸಂಪೂರ್ಣ ನಿಷೇಧಕ್ಕೆ ಚಳವಳಿ ನಡೆಸಿ, ವಿಶ್ವಸಂಸ್ಥೆಗೂ ಮನವಿ ಸಲ್ಲಿಸಿದ್ದರು. ಅಮೆರಿಕ ಮಾತ್ರ ಇದಾವುದಕ್ಕೂ ಕಿವಿಗೊಡದೆ ಹೆಚ್ಚು ಹೆಚ್ಚು ಮಾರಕ ಶಕ್ತಿಯುಳ್ಳ ಹೈಡ್ರೊಜನ್ ಬಾಂಬು, ನ್ಯೂಟ್ರಾನ್ ಬಾಂಬು ಮೊದಲಾದುವನ್ನು ತಯಾರಿಸಿ ನ್ಯೂಕ್ಲಿಯರ್ ಅಸ್ತ್ರಗಳ ಪೈಪೋಟಿಯನ್ನೇ ಪ್ರಾರಂಭಿಸಿತು. ಅನಿವಾರ್ಯವಾಗಿ ಸೋವಿಯತ್ ಒಕ್ಕೂಟವೂ ಈ ಪೈಪೋಟಿಯಲ್ಲಿ ತೊಡಗಿತು. ಈ ಮಾರಕಾಸ್ತ್ರಗಳನ್ನು ಸಾವಿರಾರು ಮೈಲಿಗಳ ದೂರ ಒಯ್ದು ಗುರಿ ತಲುಪಬಲ್ಲ ಕ್ಷಿಪಣಿಗಳೂ ಅಸ್ತಿತ್ವಕ್ಕೆ ಬಂದುವು. ನಮ್ಮ ಈ ಭೂಮಂಡಲವನ್ನು ಒಂದಲ್ಲ ಹಲವು ಪಟ್ಟು ಧೂಳೀಪಟ ಮಾಡಲು ಸಮರ್ಥವಾಗಿರುವಷ್ಟು ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನು ಸಂಗ್ರಹವಾಯಿತು, ಇಂದೂ ಕೂಡ ಇದೆ. ಕೊನೆಯೇ ಇಲ್ಲದ ಶಸ್ತ್ರಾಸ್ತ್ರ ಪೈಪೋಟಿಗೆ ಅಂಕೆ ವಿಧಿಸಲು ಒತ್ತಾಯ ಬಂದಮೇಲೆ ಅಮೆರಿಕ ಮತ್ತು ಸೋವಿಯತ್ ಒಕ್ಕೂಟಗಳ ನಡುವೆ ಹಲವು ಒಪ್ಪಂದಗಳಾಗಿದ್ದರೂ ಅವು ಕಾರ್ಯಗತವಾಗಿರುವುದು ತೀರಾ ಕಡಿಮೆ. ಇಂದೂ ಕೂಡ ಅಮೆರಿಕ ಮತ್ತು ರಷ್ಯಾಗಳಲ್ಲಿ ನ್ಯೂಕ್ಲಿಯರ್ ಅಸ್ತ್ರಗಳ ಹೇರಳ ದಾಸ್ತಾನು ಇದೆ.

ನ್ಯೂಕ್ಲಿಯರ್ ಅಸ್ತ್ರಗಳನ್ನು ಅಭಿವೃದ್ಧಿಗೊಳಿಸಲು ನಡೆಯುತ್ತಿದ್ದ ಪ್ರಯೋಗ ಪರೀಕ್ಷೆಗಳ ವಿರುದ್ಧವಾಗಿ, ಅವುಗಳ ಸಂಪೂರ್ಣ ನಿಲುಗಡೆಗಾಗಿ ಪ್ರಪಂಚದ ಜನತೆ ನಡೆಸಿದ ಆಂದೋಳನ ಅವಿಸ್ಮರಣೀಯ. ಅದರ ಫಲವಾಗಿ ಕೆಲವೊಂದು ಮಾಧ್ಯಮಗಳಲ್ಲಿ ಅವುಗಳ ಪ್ರಯೋಗ ನಿಷೇಧಿತವಾಗಿದ್ದರೂ, ಭೂತಳದಲ್ಲಿ ನಡೆಸುವ ಪ್ರಯೋಗ ಒಂದು ಮಟ್ಟದಲ್ಲಿ ಮುಂದುವರಿದಿದೆ. ನ್ಯೂಕ್ಲಿಯರ್ ಅಸ್ತ್ರಗಳನ್ನು ಹೊಂದಿರುವ ಕೆಲವೇ ರಾಷ್ಟ್ರಗಳು ತಮ್ಮ ಬಳಿ ಇರುವ ದಾಸ್ತಾನನ್ನು ವಿಸರ್ಜಿಸಲು ತಯಾರಿಲ್ಲದೆ ಇರುವುದರಿಂದಲೇ ಇಂದು ಇತರ ಕೆಲವು ದೇಶಗಳೂ ಅವುಗಳ ತಯಾರಿಕೆಯಲ್ಲಿ ತೊಡಗಿರುವುದಕ್ಕೆ ಕಾರಣವಾಗಿದೆ. 'ನ್ಯೂಕ್ಲಿಯರ್ ಕ್ಲಬ್' ಎನಿಸಿಕೊಂಡು ಇತರ ದೇಶಗಳಿಗೆ ಈ ಅಸ್ತ್ರ ಪ್ರಸರಣವಾಗದಂತೆ ತಡೆಯಲು ಅಮೆರಿಕದ ಅಪೇಕ್ಷೆಯ ಮೇರೆಗೆ ರೂಪಿತವಾದ ಅಣ್ವಸ್ತ್ರ ಪ್ರಸರಣಾ ವಿರೋಧಿ ಕೌಲು ನಿಷ್ಕ್ರಿಯವಾಗಿದೆ. ಇಂದು ಭಾರತ, ಪಾಕಿಸ್ತಾನ, ಇಸ್ರೇಲ್ ಮತ್ತಿತರ ದೇಶಗಳೂ ನ್ಯೂಕ್ಲಿಯರ್ ಅಸ್ತ್ರ ತಯಾರಿಕಾ ಸಾಮರ್ಥ್ಯ ಪಡೆದುಕೊಂಡಿದ್ದು 'ನ್ಯೂಕ್ಲಿಯರ್ ಕ್ಲಬ್'ನ ಕದ ತಟ್ಟುತ್ತಿವೆ. ಇನ್ನೂ ಬೇರೇ ದೇಶಗಳೂ ಇವುಗಳ ಜೊತೆ ಸೇರಿದರೆ ಆಶ್ಚರ್ಯವೇನಿಲ್ಲ. ಇದಕ್ಕೆ ಕಾರಣರಾರು? ಮೊದಲೇ ಹೇಳಿರುವಂತೆ ಅಮೆರಿಕ ಅಂದು ಪರಮಾಣು ಬಾಂಬಿನ ನಿಷೇಧವನ್ನು ಅಂಗೀಕರಿಸಿದ್ದಲ್ಲಿ ಇಂಥ ಪರಿಸ್ಥಿತಿ ಉದ್ಭವಿಸುತ್ತಿರಲಿಲ್ಲ. ವಿಜ್ಞಾನ ಕ್ಷೇತ್ರದಲ್ಲಿನ ಈ ದುರದೃಷ್ಟಕರ ಬೆಳವಣಿಗೆಯನ್ನು ಮೊದಲೇ ತಡೆಗಟ್ಟಿದ್ದರೆ ಇಂಥ ಪ್ರಸಂಗ ಬರುತ್ತಿರಲಿಲ್ಲ.

ಅಣ್ವಸ್ತ್ರ ಪ್ರಸರಣ ನಿಷೇಧವನ್ನು ಕುರಿತು ಯಾವುದೇ ಒಪ್ಪಂದ ಅಥವಾ ಕರಾರು ಕಾರ್ಯಗತವಾಗಬೇಕಾಗಿದ್ದಲ್ಲಿ ಮೊಟ್ಟಮೊದಲು ಅವುಗಳ ದಾಸ್ತಾನನ್ನು ಹೊಂದಿರುವ ದೇಶಗಳು ನಿಗದಿತ ಕಾಲಮಿತಿಯಲ್ಲಿ ಅವುಗಳನ್ನು ವಿಸರ್ಜಿಸಲು ಸಮ್ಮತಿಸಬೇಕು. ಅದಿಲ್ಲದೆ ನಮ್ಮ ಬಳಿ ಇರುವುದು ಹಾಗೇ ಇರಲಿ, ಇತರರು ಮಾತ್ರ ಅದರ ಗೊಡವೆಗೆ ಹೋಗಬಾರದು ಎನ್ನುವುದು ಮೂರ್ಖತನ. ತಕ್ಕಮಟ್ಟಿನ ಕೈಗಾರಿಕಾಭಿವೃದ್ಧಿಯನ್ನು ಹೊಂದಿದ್ದು ಸಾಕಷ್ಟು ಹಣ ವಿನಿಯೋಗಿಸಲು ಸಿದ್ಧವಾಗಿರುವ ಯಾವ ದೇಶವೂ ನ್ಯೂಕ್ಲಿಯರ್ ಅಸ್ತ್ರವನ್ನು ತಯಾರಿಸಬಲ್ಲವಾಗಿರುತ್ತವೆ. ಏಕೆಂದರೆ ಈ ಅಸ್ತ್ರಗಳ ತಯಾರಿಕೆಯ ತಂತ್ರಜ್ಞಾನವನ್ನು ಪಡೆದುಕೊಳ್ಳುವುದು ಕಷ್ಟವೇನಲ್ಲ. ಈ ಅಸ್ತ್ರಗಳ ತಯಾರಿಕೆಗೆ ಅಗತ್ಯವಾದ ಸಾಮಗ್ರಿಗಳನ್ನು ಕಳ್ಳತನದಲ್ಲಿ ದೊರಕಿಸಿಕೊಳ್ಳುವುದಕ್ಕೆ ಅವಕಾಶಗಳೇನೂ ಕಡಿಮೆಯಿಲ್ಲ. ಪಾಕಿಸ್ತಾನ, ಇಸ್ರೇಲ್ ಮೊದಲಾದ ದೇಶಗಳು ಇಂದು ನ್ಯೂಕ್ಲಿಯರ್ ಅಸ್ತ್ರ ಸಾಮರ್ಥ್ಯ ಗಳಿಸಿರುವುದು ಅಮೆರಿಕದ ಮೂಲಗಳಿಂದಲೇ. ಅಮೆರಿಕದಿಂದ ನ್ಯೂಕ್ಲಿಯರ್ ಅಸ್ತ್ರಗಳ ತಯಾರಿಕೆಗೆ ಅನುವಾಗುವ ಸಾಮಗ್ರಿಗಳು ಕಳ್ಳ ಸಾಗಾಣಿಕೆ ಆಗಿರುವ ಪ್ರಸಂಗಗಳು ಬಯಲಾಗಿವೆ. ಅಮೆರಿಕ ಅಧಿಕೃತವಾಗಿ ಅದನ್ನು ಒಪ್ಪುವುದಿಲ್ಲ ಅಷ್ಟೇ. ಅದು ಇತರ ನ್ಯೂಕ್ಲಿಯರ್ ರಾಷ್ಟ್ರಗಳ ಕಡೆಗೆ ಬೊಟ್ಟು ಮಾಡುತ್ತದೆ.

ಅಮೆರಿಕ ಈಗ ಪ್ರಾರಂಭಿಸಿರುವ ಕ್ಷಿಪಣಿ ರಕ್ಷಣಾ ವ್ಯವಸ್ಥೆ ಕೂಡ ಇತರ ದೇಶಗಳೂ ತಮ್ಮ ರಕ್ಷಣೆಗಾಗಿ ಕ್ರಮ ಕೈಗೊಳ್ಳಬೇಕಾಗುವ ಸ್ಥಿತಿ ಬರುತ್ತದೆ. ಅಮೆರಿಕದ ಇನ್ನೂರಕ್ಕೂ ಹೆಚ್ಚು ವರ್ಷಗಳ ಇತಿಹಾಸದಲ್ಲಿ ಎಂದೂ ಅದು ದಾಳಿಗೀಡಾಗಿಲ್ಲ. ಯಾವುದೇ ದಾಳಿಯನ್ನು ಎದುರಿಸಲು ಅದು ಸಾಕಷ್ಟು ಶಕ್ತವಾಗಿದೆ. ಹಾಗಿರುವಾಗ ಹೊಸ ವ್ಯವಸ್ಥೆಗೆ ಅಗತ್ಯವೇನು? ಈ ಪ್ರಶ್ನೆಗೆ ಉತ್ತರ ಒಂದೇ, ಅಮೆರಿಕ ತನ್ನ ಆರ್ಥಿಕ ಪ್ರಾಬಲ್ಯದ ಜೊತೆಗೆ, ಶಸ್ತ್ರಾಸ್ತ್ರಗಳ ಬಲವರ್ಧನೆಯಿಂದ ಇತರ ದೇಶಗಳನ್ನು ಬೆದರಿಕೆಯಲ್ಲಿಡುವುದು ಅಷ್ಟೆ. ಈ ಹುಚ್ಚಿನ ಪರಿಣಾಮವೇನಿಲ್ಲದ ಶಸ್ತ್ರಾಸ್ತ್ರ ಪೈಪೋಟಿ. ಅಮೆರಿಕಾದ ಈ ಹುಚ್ಚು ಸಾಹಸವನ್ನು ಬಲವಾಗಿ ವಿರೋಧಿಸಿ ಹಿಮ್ಮೆಟ್ಟುವಂತೆ ಮಾಡುವುದು ಎಲ್ಲ ಶಾಂತಿ ಪ್ರಿಯರ ಕರ್ತವ್ಯವಾಗಿದೆ.

❑❑❑

# ಮಾರ್ಕ್ಸ್‌ವಾದ, ಸಮತಾವಾದ, ಸಮಾಜವಾದ....

- ಜವಹರಲಾಲ್ ನೆಹರು

ಸಮಾಜವಾದ ಮತ್ತು ಸಮತಾವಾದ ಕುರಿತ ಗೀಳು ಹಾಗೂ ರಷ್ಯಾದ ಬಗೆಗೆ ನನ್ನ ಅಕ್ಕರೆ ಬಹಳ ದಿನದ್ದು. ನಿಜ, ರಷ್ಯಾದಲ್ಲಿ ಇತ್ತೀಚಿನ ಅನೇಕ ಬೆಳವಣಿಗೆಗಳು ನನಗೆ ಒಪ್ಪಿಗೆಯಾಗದಂಥವು. ತಮಗೆ ಒಪ್ಪಿಗೆಯಿಲ್ಲದ ಅಭಿಪ್ರಾಯಗಳ ವಿರುದ್ಧ ಅಲ್ಲಿಯ ದಬ್ಬಾಳಿಕೆ, ವ್ಯಾಪಕವಾದ, ದಂಡಿನಂಥ ಶಿಸ್ತು, ಕೈಗೊಂಡ ನೀತಿಗಳನ್ನು ಕಾರ್ಯಗತಗೊಳಿಸುವುದರಲ್ಲಿ ಅವರು ತೋರುವ ಅನಗತ್ಯ ಒತ್ತಾಯ ಇವ್ಯಾವುವೂ ನನಗೆ ಹಿಡಿಸದು. ಆದರೆ ಬಂಡವಳಿಗ ಸಮಾಜದಲ್ಲಿ ಹಿಂಸೆ ಮತ್ತು ದಬ್ಬಾಳಿಕೆಗಳಿಗೇನೂ ಕೊರತೆ ಇಲ್ಲ. ಮಿತಿಯಿಲ್ಲದ ಸಂಗ್ರಹಣೆಯ ಮತ್ತು ಖಾಸಗಿ ಆಸ್ತಿಯ ಧಾವಂತವೇ ಲಕ್ಷಣವಾದ ಬಂಡವಳಿಗ ಸಮಾಜದ ಆಧಾರವೇ, ಹಿಂಸೆ ಎಂಬ ಅರಿವು ನನಗೆ ಈಗಾಗಲೇ ಆಗಿದೆ. ಈ ಸಮಾಜದಲ್ಲಿ ಒಂದಿಷ್ಟು ರಾಜಕೀಯ ಸ್ವಾತಂತ್ರ್ಯ ಇರುವುದು ತೋರಿಬರುತ್ತದೆ. ಆದರೆ ಎಡೆಬಿಡದೆ ಹಸಿವಿನ ಭೀತಿ ಸಮಾಜದ ಅಸಂಖ್ಯಾತ ಜನರನ್ನು ಕಾಡುತ್ತಿರುವಾಗ, ಆದ್ದರಿಂದಲೇ ಕಂಗಾಲಾಗಿ ಕೆಲವೇ ಜನರ ಸ್ವೇಚ್ಛಾಚಾರಕ್ಕೆ ಅವರು ಮಣಿದು, ಅವರ ಪ್ರಾಬಲ್ಯವೃದ್ಧಿಗೆ, ಮಹತ್ವಾಕಾಂಕ್ಷೆಗೆ ಬಲಿಯಾಗುವ ಸಾಮಾಜಿಕ ಪರಿಸ್ಥಿತಿಯಲ್ಲಿ, ಈ ಅಲ್ಪ ಸ್ವಾತಂತ್ರ್ಯವೂ ಅರ್ಥ ಕಳೆದುಕೊಳ್ಳುತ್ತದೆ.

ಸಮಾಜವಾದ ಮತ್ತು ಬಂಡವಾಳ ವ್ಯವಸ್ಥೆ, ಎರಡರಲ್ಲೂ ಹಿಂಸೆಯದು ಸಾಮಾನ್ಯ ಪಾತ್ರ. ಬಂಡವಾಳ ವ್ಯವಸ್ಥೆಯಲ್ಲಾದರೋ ಹಿಂಸೆ ಅಂತರ್ಗತವಾಗಿ, ಅದರಲ್ಲೇ ಹುದುಗಿದೆ. ರಷ್ಯಾದ ವಿಷಯದಲ್ಲಿ, ಹಿಂಸೆ ಕೆಟ್ಟದ್ದೆ ಆದರೂ, ಅದು ಅಲ್ಲಿ ಒಂದು ಹೊಸ ವ್ಯವಸ್ಥೆಯನ್ನು ಸೃಷ್ಟಿಸುವ ಉದ್ದೇಶ ಉಳ್ಳದ್ದಾಗಿದೆ. ಅದು ಶಾಂತಿ ಮತ್ತು ಸಹಬಾಳ್ವೆ ಹಾಗೂ ಎಲ್ಲಾ ಜನರಿಗೆ ಸ್ವಾತಂತ್ರ್ಯ ದೊರಕಿಸಿಕೊಡುವ ಆಕಾಂಕ್ಷೆಯುಳ್ಳದ್ದು. ಬೋಲ್ಷೆವಿಕರು ಎಷ್ಟೋ ಸ್ತರಗಳಲ್ಲಿ ದುಡುಕಿದ್ದಾರೆ. ಮಹತ್ತರ ತಪ್ಪು ಮಾಡಿದ್ದಾರೆ. ಆದರೆ ಇದರ ಮಧ್ಯೆಯೂ, ಅವರು ತಾವು ಬಯಸಿದ ಹೊಸ ವ್ಯವಸ್ಥೆಯತ್ತ ದಾಪುಗಾಲು ಹಾಕಿದ್ದಾರೆ. ವಿಶ್ವದ ಮಿಕ್ಕೆಲ್ಲೆಡೆ ವ್ಯಾಪಕವಾದ ಆರ್ಥಿಕ ಮುಗ್ಗಟ್ಟು ತಲೆದೋರಿ, ಪ್ರಗತಿ ಕುಂಠಿತವಾಗುತ್ತಿರುವಾಗಲೂ, ರಷ್ಯಾದಲ್ಲಿ ಈ ಸಾಧನೆಯನ್ನು ಸಾಧ್ಯವಾಗಿಸಿದ್ದಾರೆ. ನಾವು ನೋಡುತ್ತಿದ್ದಂತೆಯೇ, ರಷ್ಯಾದಲ್ಲಿ ಒಂದು ನೂತನ ಮಹಾನ್ ವ್ಯವಸ್ಥೆಯ ರಚನೆಯಾಗುತ್ತಿದೆ. ಲೆನಿನ್ನರನ್ನು ಅನುಸರಿಸಿದ ರಷ್ಯಾ ದೇಶ, ಭವಿಷ್ಯತ್ತಿನ ಕಡೆ ಮುಂದೇನಾಗಬೇಕು ಎಂಬುದರ ಬಗೆಗೆ ತನ್ನ ಸಂಪೂರ್ಣ ಗಮನಹರಿಸಿತು. ಮಿಕ್ಕ ರಾಷ್ಟ್ರಗಳಲ್ಲಾದರೋ, ಗತಕಾಲದ ಶೀತಲ ಕರಸ್ಪರ್ಶ ಅವರನ್ನು ಜೀವಚ್ಛವವಾಗಿಸಿದೆ. ಅವರ ಪ್ರಯತ್ನವೆಲ್ಲಾ ಎಂದೋ ಆಗಿಹೋದ, ಇಂದು ನಿರುಪಯುಕ್ತವಾದ, ಅವಶೇಷಗಳನ್ನಷ್ಟೇ ರಕ್ಷಿಸುವುದರಲ್ಲಿ ಕೇಂದ್ರೀಕೃತವಾಗಿದೆ. ರಷ್ಯಾದಲ್ಲಿನ ಬೆಳವಣಿಗೆಯಲ್ಲಿ ನನ್ನನ್ನು ತುಂಬಾ ಆಕರ್ಷಿಸಿದ ಸಂಗತಿಯೆಂದರೆ, ತೀರ ಹಿಂದುಳಿದಿದ್ದ ಅಲ್ಲಿಯ ಮಧ್ಯ ಏಷ್ಯಾ ಪ್ರಾಂತಗಳು ಅಲ್ಲಿಯ ಸೋವಿಯತ್‌ಗಳ ಆಡಳಿತದಲ್ಲಿ ಸಾಧಿಸಿರುವ ಅತಿ ವೇಗದ ಮಹತ್ವದ ಪ್ರಗತಿ. ಇವೆಲ್ಲವನ್ನೂ ಒಟ್ಟಾಗಿ ತೂಗಿ ನೋಡಿದರೆ, ನಾನು ರಷ್ಯಾದ ಪರವಾದುದು ಏಕೆ ಎಂಬುದು ಸ್ಪಷ್ಟವಾಗುತ್ತದೆ. ಇಂದಿನ ಕಗ್ಗತ್ತಲಿನ ಅಸಹ್ಯ ವಿಶ್ವಪರಿಸ್ಥಿತಿಯಲ್ಲಿ ಸೋವಿಯತ್ ದೇಶದ ಅಸ್ತಿತ್ವ ಮತ್ತು ಅದರ ಉದಾಹರಣೆ ಏಕೈಕ ಧ್ರುವತಾರೆಯಾಗಿ ಬೆಳಗುತ್ತಿದೆ.

ಸೋವಿಯತ್ ರಷ್ಯಾದ ಜಯಾಪಜಯ ಕಮ್ಯುನಿಸ್ಟ್ ಪ್ರಭುತ್ವದ ಸ್ಥಾಪನೆಯಲ್ಲಿ ಒಂದು ಪ್ರಾಯೋಗಿಕ ಪ್ರಯತ್ನವಾಗಿ ಬಹಳ ಮುಖ್ಯವಾದ ವಿಷಯ. ಆದರೆ ಒಂದು ಸಿದ್ಧಾಂತವಾಗಿ ಸಮತಾವಾದವು ರಷ್ಯಾದ ಈ ಪ್ರಯೋಗದ ಮೇಲೆ ಮಾತ್ರವೇ ನಿಂತಿಲ್ಲ. ಬೋಲ್ಷೆವಿಕರು ತಮ್ಮ ಹಾದಿಯಲ್ಲಿ ಮುಗ್ಗರಿಸಿಯಾರು. ಅಷ್ಟೇಕೆ, ಆಂತರಿಕ ಹಾಗೂ ಅಂತರರಾಷ್ಟ್ರೀಯ ಕಾರಣಗಳಿಂದಾಗಿ ಅವರು ವಿಫಲರೂ ಆಗಬಹುದು. ಆದರೂ ಸಮತಾವಾದಿ ಸಿದ್ಧಾಂತದ ನೆಲೆ ಗಟ್ಟಿಯಾದುದೇ ಇರಬಹುದು. ರಷ್ಯಾದಲ್ಲಿ ಆಗುತ್ತಿರುವುದನ್ನೆಲ್ಲಾ ಬೇರೆ ದೇಶಗಳಲ್ಲಿ, ಮಕ್ಕೀಕಾಮಕ್ಕಿ ಕಾಪಿ ಮಾಡುವುದು ಅರ್ಥಹೀನವೆಂದು ಆ ಸಿದ್ಧಾಂತವೇ ಸಾರುತ್ತದೆ. ಸಮತಾವಾದದ ಮೂಲಭೂತ ಸಿದ್ಧಾಂತ ಒಂದು ನಿಖರ ಸ್ವರೂಪದ್ದು. ಆದರೆ ಅದರ ಅನ್ವಯವಾಗುವಾಗ, ಅದರ ಸ್ವರೂಪ ಅದನ್ನು ಯಾವ ದೇಶಕ್ಕೆ, ಯಾವ ಸಮಾಜಕ್ಕೆ ಅನ್ವಯಿಸಬೇಕು ಎಂಬುದು ಅದರ ಪ್ರತ್ಯೇಕ ಪರಿಸ್ಥಿತಿ ಮತ್ತು ಅದರ ಚಾರಿತ್ರಿಕ ಬೆಳವಣಿಗೆಯ ಹಂತವನ್ನು ಅವಲಂಬಿಸಿರುತ್ತದೆ. ಅಷ್ಟೇ ಅಲ್ಲ, ಭಾರತವೋ ಅಥವಾ ಇನ್ನಾವ ರಾಷ್ಟ್ರವೋ, ಬೋಲ್ಷೆವಿಕರ ಸಾಧನೆಗಳನ್ನು ಮಾತ್ರವಲ್ಲದೆ, ಅವರ ತಪ್ಪುಗಳಿಂದಲೂ ಪಾಠ ಕಲಿತು, ಲಾಭ ಪಡೆಯಬಹುದು. ಬಹುಶಃ ಬೋಲ್ಷೆವಿಕರು ತಮ್ಮ ಉದ್ದೇಶ ಸಾಧನೆಗೆ ಬಲು ತ್ವರಿತಗತಿಯನ್ನು ಅನುಸರಿಸಿದರೋ ಏನೋ. ರಷ್ಯಾ ದೇಶ ಅತಿಕ್ರಮಣಕಾರಕ ಬಲಿಷ್ಠ ರಾಷ್ಟ್ರಗಳಿಂದ ಸುತ್ತುವರಿಯಲ್ಪಟ್ಟಿದ್ದನ್ನು ಗಮನಿಸಿದರೆ, ಬೋಲ್ಷೆವಿಕರ ತ್ವರಿತಗತಿಗೆ ಅರ್ಥಬರುತ್ತದೆ. ಬಹುಶಃ ಸ್ವಲ್ಪ ಮಂದಗತಿಯಲ್ಲಿ ಮುಂದುವರಿದಿದ್ದರೆ ಅಲ್ಲಿಯ ಗ್ರಾಮಾಂತರ ಪ್ರದೇಶದಲ್ಲಿ ಜನತೆಗೆ ಉಂಟಾದ ನೋವನ್ನು ಒಂದಿಷ್ಟು ತಪ್ಪಿಸಬಹುದಿತ್ತೇನೋ. ಆದರೆ ಇದರಲ್ಲಿ ಒಂದು ತಾತ್ವಿಕ ಪ್ರಶ್ನೆ ಅವರ ಮುಂದೆ ಎದ್ದಿತ್ತು; ಪ್ರಗತಿಯ ವೇಗ ಕಡಿಮೆಯಾದರೆ ಪರಿಸ್ಥಿತಿಯಲ್ಲಿ ರೂಢಮೂಲವಾದ ಪರಿಣಾಮ ಸಾಧಿಸುವುದು ಸಾಧ್ಯವಿತ್ತೆ? ಸಮಾಜದ ಮೂಲಭೂತ ರಚನೆಯ ಬದಲಾವಣೆಯೇ ಉದ್ದೇಶವಾದಾಗ, ಒಂದು ಮುಖ್ಯ ಸಮಸ್ಯೆಯನ್ನು ಒಂದು ಗಂಭೀರ ಕ್ಷಣದಲ್ಲಿ ಕೇವಲ ಸುಧಾರಣಾ ಮಾರ್ಗದಿಂದ ಪರಿಹರಿಸಲು ಸಾಧ್ಯವಿಲ್ಲ. ಮುಂದಿನದು ಎಷ್ಟೇ ಮಂದಗತಿಯ ಪ್ರಗತಿಯೇ ಆಗಲಿ, ಪ್ರಾರಂಭದ ಹೆಜ್ಜೆಯಲ್ಲಿ, ಅದು ಅಸ್ತಿತ್ವದಲ್ಲಿರುವ ಸಮಾಜದ ರಚನೆಯೊಡನೆ ತನ್ನ ಸಂಪರ್ಕವನ್ನು ಸಂಪೂರ್ಣವಾಗಿ ಒಂದೇ ಏಟಿಗೆ ಕಡಿದುಕೊಳ್ಳುವುದು ಅನಿವಾರ್ಯ. ಏಕೆಂದರೆ ಅಸ್ತಿತ್ವದಲ್ಲಿರುವ ರಚನೆ, ತನ್ನ ಉದ್ದೇಶವನ್ನು ಈಗಾಗಲೇ ಸಾಧಿಸಿ ಆಗಿದ್ದು, ಈಗ ಮುಂದಿನ ಪ್ರಗತಿಗೆ ಕೇವಲ ಮಾರಕವಾದ ಒಂದು ಹೊರೆಯಾಗಿ ಮಾತ್ರ ಉಳಿದಿರುತ್ತದೆ.

ಭಾರತದಲ್ಲಿ ಪರಸ್ಪರ ಸಂಬಂಧ ಉಳ್ಳ ಭೂಮಿ ಮತ್ತು ಕೈಗಾರಿಕೆಯ ಪ್ರಶ್ನೆ ಹಾಗೂ ಬಹುವಾಗಿ ದೇಶದ ಮಿಕ್ಕೆಲ್ಲಾ ಪ್ರಮುಖ ಸಮಸ್ಯೆಗಳಿಗೂ ಕೇವಲ ಕ್ರಾಂತಿಕಾರಕ ಯೋಜನೆಯಿಂದ ಮಾತ್ರ ಪರಿಹಾರ ಕಂಡುಕೊಳ್ಳುವುದು ಸಾಧ್ಯ. ರಷ್ಯಾದೇಶದ ವಿಷಯ ಒತ್ತಟ್ಟಿಗಿರಲಿ. ಅದಲ್ಲದೆಯೂ, ಮಾರ್ಕ್ಸ್‌ವಾದದ ತತ್ವಶಾಸ್ತ್ರ ಮತ್ತು ಸಿದ್ಧಾಂತ, ನನ್ನ ಮನಸ್ಸಿನ ಅನೇಕ ಕತ್ತಲೆಯ ಮೂಲೆಗಳಿಗೆ ಬೆಳಕು ಚೆಲ್ಲಿತ್ತು. ಅದರಿಂದ ಇತಿಹಾಸಕ್ಕೆ ಒಂದು ಹೊಸ ಅರ್ಥ ನನಗೆ ದೊರೆಯಿತು. ಇತಿಹಾಸದ ಮೇಲೆ ಮಾರ್ಕ್ಸ್‌ವಾದ ಒಂದು ಪ್ರಖರ ಪ್ರಭೆಯನ್ನು ಪಸರಿಸಿ, ನನ್ನ ಮಟ್ಟಿಗೆ ಹೊಸ ಅರ್ಥವನ್ನೇ ಬೆಳಗಿತು. ಅದೆಷ್ಟೇ ಅಪ್ರಜ್ಞಾಪೂರ್ವಕವೆನಿಸಿದರೂ, ಚರಿತ್ರೆಯ ಆಗುಹೋಗುಗಳು ಒಂದು ಉದ್ದೇಶಪೂರ್ವಕ ಶಿಸ್ತಿನಿಂದ ಕೂಡಿರುವಂತೆ ಭಾಸವಾಯಿತು. ಗತಕಾಲದ ಹಾಗೂ ವರ್ತಮಾನ ಕಾಲದ ಅಪಾರ ದುಃಖಭರಿತ ನಿರುಪಯುಕ್ತತೆ ಕಣ್ಮುಂದೆ ನಿಂತಾಗಲೂ ಭವಿಷ್ಯವನ್ನು ಪ್ರಕಾಂಡ ಭರವಸೆಯಿಂದ ಎದುರುನೋಡುವುದು ಸಾಧ್ಯವಾಯಿತು. ಅದೆಷ್ಟೇ ಆತಂಕಕಾರಕ ಪ್ರಸಂಗಗಳು ಅಡ್ಡಿಮಾಡಿದರೂ, ಮಾರ್ಕ್ಸ್‌ವಾದದಲ್ಲಿ ಪ್ರಮುಖವಾಗಿ ನನಗೆ ಮೆಚ್ಚುಗೆಯಾದದ್ದು ಅದರ ತತ್ವಾಂಧತೆಗೆ ಶರಣಾಗದ ವೈಜ್ಞಾನಿಕ ಮಾರ್ಗ. ರಷ್ಯಾದ ಅಧಿಕೃತ ಸಮತಾವಾದದಲ್ಲಿ ಹಾಗೂ ಕೆಲವೆಡೆ, ಅದೆಷ್ಟೋ ತತ್ವಾಂಧತೆಯ ಸೋಂಕು ನುಸುಳಿರುವುದು ನಿಜ. ಅಷ್ಟೇ ಅಲ್ಲ, ಆಗಾಗ್ಗೆ ಸಂಪ್ರದಾಯವಿರೋಧಿ ಎಂಬ ಆಪಾದನೆಯ ನೆಪದಲ್ಲಿ ಒಡನಾಡಿಗಳ ಬೇಟೆಯನ್ನು ಸಂಘಟಿಸಿದ ಪ್ರಸಂಗಗಳೂ ಉಂಟು. ಅದು ಖಂಡಿತ ಖಂಡನೀಯ. ಆದರೂ ಅದೇಕೆ ಹಾಗಾಯಿತು ಎಂದು ಪರ್ಯಾಲೋಚಿಸಿದರೆ, ಅದು ಸ್ಪಷ್ಟವೂ ಆಗುತ್ತದೆ. ಅಷ್ಟೊಂದು ವೇಗದಲ್ಲಿ ಮಹತ್ವದ ಬದಲಾವಣೆಗಳಾಗುತ್ತಿದ್ದ ಕ್ರಾಂತಿಕಾರಿ ಪರಿಸ್ಥಿತಿಯಲ್ಲಿ, ಪರಿಣಾಮಕಾರಿ ವಿರೋಧಗಳ ಸಂಘಟನೆಯಾಗಲು ಬಿಟ್ಟಿದ್ದರೆ, ಅದು ಕ್ರಾಂತಿಗೇ ಕೊಡಲಿ ಪೆಟ್ಟಾಗಬಹುದಿತ್ತು.

ವಿಶ್ವದಾದ್ಯಂತ ಜಾರಿಯಲ್ಲಿದ್ದ ಅಂದಿನ ಮಹಾಮುಗ್ಗಟ್ಟಿನ ದಾರುಣ ಪರಿಸ್ಥಿತಿಯನ್ನು ಮಾರ್ಕ್ಸ್‌ವಾದ ವಿಶ್ಲೇಷಿಸುವ ರೀತಿ ಮಾರ್ಕ್ಸ್‌ವಾದದ ತಥ್ಯತೆಯನ್ನು ಪುಷ್ಟೀಕರಿಸುವಂಥದು. ಬೇರೆಲ್ಲ ವ್ಯವಸ್ಥೆಗಳೂ, ಸಿದ್ಧಾಂತಗಳೂ ಕಗ್ಗತ್ತಲಿನಲ್ಲಿ ದಾರಿ ಕಾಣದೆ ತಡವರಿಸುತ್ತಿದ್ದಾಗ, ಸ್ವೀಕಾರಾರ್ಹವಾದ ವಿವರಣೆ ನೀಡುವುದು ಮಾತ್ರವಲ್ಲದೆ, ಪರಿಸ್ಥಿತಿಗೆ ಪರಿಣಾಮಕಾರಿ ಪರಿಹಾರವನ್ನೂ ಸೂಚಿಸುವ ಏಕಮಾತ್ರ ಸಿದ್ಧಾಂತವಾಗಿ ಮಾರ್ಕ್ಸ್‌ವಾದ ಬೆಳಗಿತು.

**(ಜವಹರಲಾಲ್ ನೆಹರೂರವರ ''ಆತ್ಮಕಥೆ''ಯ ''ಹೋರಾಟ''ವೆಂಬ ಅಧ್ಯಾಯದಲ್ಲಿನ ಕೆಲವು ಭಾಗಗಳ ಭಾವಾನುವಾದ.)**

ಅನುವಾದ : **ಪಾರ್ಥಸಾರಥಿ**
ಬೆಂಗಳೂರು

**ಇರುವ ಸಂಗತಿ** (ಕವನ ಸಂಕಲನ)

*ಆರ್. ವಿಜಯರಾಘವನ್*

**ಪುಟ : 105** **ಬೆಲೆ : ರೂ. 40**

**ಸೌಮ್ಯ ಪ್ರಕಾಶನ**, ವೆಟರ್ನರಿ ಆಸ್ಪತ್ರೆ ರಸ್ತೆ, ಪೇಟೆ ಚಾಮನಹಳ್ಳಿ, ಕೋಲಾರ - 563 101



*ಆಡುಮಾತಿಗೆ ಅತ್ಯಂತ ಸಮೀಪವಿರುವ ಈ ಕವನ ಸಂಕಲನದಲ್ಲಿ ಒಂದು ನೆಲೆಯಿಂದ ಹೊರಟು ಎಲ್ಲ ದಿಕ್ಕುಗಳಿಗೂ ವಿಸ್ತರಿಸಿದ ಅಗಾಧ ಸಮಸ್ಯೆಗಳ ಚಿತ್ರಣವಿದೆ. ಭ್ರಮಾಲೋಕದ ತುತ್ತ ತುದಿಗೇರಿ ಕವಿ ಅವುಗಳ ನಿವಾರಣೋಪಾಯವನ್ನು ಹುಡುಕಿ ವ್ಯರ್ಥಪ್ರಯತ್ನವೆಂಬಂತೆ ವಾಸ್ತವತೆಯನ್ನೇ ನಮ್ಮ ಮುಂದಿರಿಸಿದ್ದಾರೆ. ಕವನಗಳು ನಾವು ಉತ್ತರಗಳನ್ನು ತಡಕಾಡುವಂತೆ ಮಾಡುವಲ್ಲಿ ಯಶಸ್ವಿಯಾಗಿವೆ.*



**ಕನಸಿನ ಕ್ಷಣಗಳು** (ಕವನಗಳು)

*ಇಂಗ್ಲಿಷ್ : ಉಪೇಂದ್ರ ತ್ರಿಪಾಠಿ, ಕನ್ನಡಕ್ಕೆ: ಪ್ರೊ.. ನಾ. ದಯಾನಂದ*

**ಪುಟ : 72** **ಬೆಲೆ : ರೂ. 60**

**ಶೃಂಗಾರ ಪ್ರಕಾಶನ**, ಬ್ರಾಹ್ಮಣರ ಬೀದಿ,
ಚಿಕ್ಕನಾಯಕನಹಳ್ಳಿ - 572214 ತುಮಕೂರು ಜಿಲ್ಲೆ.

*ಕಾವ್ಯದ ಗುಣ ಲಕ್ಷಣಗಳೆಲ್ಲವನ್ನೂ ಉಳಿಸಿಕೊಂಡು ತಮ್ಮ ವಿದ್ವತ್ತನ್ನೂ ಬಳಸಿಕೊಂಡು ಅನುವಾದದೊಂದಿಗೆ ಮೂಲ ಕಾವ್ಯಕ್ಕೂ ಹೆಚ್ಚಿನ ಮೆರಗು ತಂದಿತ್ತ ದಯಾನಂದರ ಈ ಅಪೂರ್ವ ಅನುವಾದಿತ ಕೃತಿ ಇಂಗ್ಲಿಷ್ ಮೂಲದ ಉಪೇಂದ್ರ ತ್ರಿಪಾಠಿಯವರ ಕವನಗಳದ್ದು. ಎಲ್ಲಿಯೂ ತೀಕ್ಷ್ಣ ಅಭಿವ್ಯಕ್ತಿ ಕಾಣಿಸದ ಸೌಮ್ಯ ದನಿಯ ಕವನಗಳು ತಮ್ಮ ತಮ್ಮಲ್ಲೇ ಬದುಕಿನ ವ್ಯಂಗ್ಯ-ಸೊಗಸುಗಳನ್ನು ನಮ್ಮ ಸುತ್ತಮುತ್ತ ಅರಸುತ್ತವೆ.*

**ವೀಣೆಯ ನೆರಳಿನಲ್ಲಿ.....** (ಆತ್ಮಕಥನ)

*ನಿರೂಪಣೆ : ಭಾರತೀ ಕಾಸರಗೋಡು*

**ಪುಟ : 192** **ಬೆಲೆ : ರೂ. 95**

**ಗೀತಾ ಬುಕ್ ಹೌಸ್**, ಪ್ರಕಾಶಕರು, ಮೈಸೂರು - 570 001



*ಮೈಸೂರಿನ ಹೆಸರನ್ನು ವೀಣೆಯೊಂದಿಗೆ ಸಮೀಕರಿಸಿದ ಡಾ|| ದೊರೆಸ್ವಾಮಿ ಅಯ್ಯಂಗಾರ್ಯರ ಆತ್ಮಕಥನವಿದು. ಅವರ ಕಛೇರಿಗಳೆಂದರೆ ಮುಗಿಬಿದ್ದು ಹೋಗುತ್ತಿದ್ದ ಶ್ರೋತೃಗಳನ್ನು ಅಲೌಕಿಕ ಆನಂದಾನುಭವದಿಂದ ತೇಲಿಸುವ ಅಮೋಘ ಪ್ರತಿಭೆ ಅವರಲ್ಲಿತ್ತು. ಲೆಕ್ಕವಿಲ್ಲದಷ್ಟು ಪ್ರಶಸ್ತಿ - ಪುರಸ್ಕಾರಗಳು ಲಭಿಸಿದ್ದರೂ, ಬಹಳ ಎತ್ತರಕ್ಕೇರಿ ನಿಂತರೂ ಅದೆಲ್ಲವೂ ವೀಣೆಯ ನೆರಳಿನಲ್ಲಿಯೇ ಸಾಧಿಸಿದ್ದೆಂದು ವಿನೀತ ಭಾವದಿಂದ ಅವರ ಜೀವನವನ್ನು ದಾಖಲಿಸಿದ್ದಾರೆ.*



**ಕನ್ನಡ ರಾಷ್ಟ್ರೀಯತೆ** (ಮಹಾಪ್ರಬಂಧ)

*ಡಾ|| ಬಂಜಗೆರೆ ಜಯಪ್ರಕಾಶ್*

**ಪುಟ : [illegible]** **ಬೆಲೆ : ರೂ. 160**

**ಕ್ರಾಂತಿಸಿರಿ ಪ್ರಕಾಶನ**, ನಂ. 55, 2ನೇ ಮೇನ್, ವಿನಾಯಕ ಬಡಾವಣೆ, 3ನೇ ಹಂತ, ವಿಜಯನಗರ, ಬೆಂಗಳೂರು-560040

*ಕನ್ನಡ-ಕರ್ನಾಟಕವೆಂಬುದು ಕೇವಲ ಒಂದು ಗಡಿಯೊಳಗೆ ಗುರುತಿಸಲ್ಪಡುವ ಭೂಭಾಗದ ಮಣ್ಣಷ್ಟೇ ಅಲ್ಲ. ಅದನ್ನೂ ಮೀರಿ ಒಂದಷ್ಟು ಸಾಂಸ್ಕೃತಿಕ - ಸಾಮಾಜಿಕ ಬೇರುಗಳು ರಾಷ್ಟ್ರ-ಅಂತರರಾಷ್ಟ್ರೀಯ ಮಟ್ಟದಲ್ಲೂ ಹಬ್ಬಿವೆಯೆಂಬ ಪರಿಕಲ್ಪನೆಯನ್ನು ಹೊಂದಿದ ಈ ಮಹಾ ಸಂಪ್ರಬಂಧ ಸಮಗ್ರ ವಿವೇಚನೆಯೊಂದನ್ನು ನಮ್ಮ ಮುಂದಿಟ್ಟಿದೆ. ಕನ್ನಡ ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿಯನ್ನು ಈ ಕೃತಿ ಪಡೆದುಕೊಂಡಿದೆ.*



**ಅಣ್ಣನ ಅರಿವು ಮತ್ತು ಆಚಾರ**

*ಕೆ. ಡಿ. ಮುತ್ತೂರ*

**ಪುಟ : 134** **ಬೆಲೆ : ರೂ. 35**

**ಸರ್ವೋದಯ ಪ್ರಕಾಶನ**, ಮುಧೋಳ, ತಾ|| ಮುಧೋಳ, ಜಿಲ್ಲಾ|| ಬಾಗಲಕೋಟ.

*ಬಸವಣ್ಣನವರ ಕೆಲವು ಕ್ರಾಂತಿಕಾರಿ ಅಮೂಲ್ಯ ವಚನಗಳನ್ನು ಸಂಗ್ರಹಿಸಿ ಇಲ್ಲಿ ಅರ್ಥಸಹಿತ ಕೊಡಲಾಗಿದೆ. ಬಾಹ್ಯಾಚರಣೆ - ಡಂಭಾಚಾರಕ್ಕಾಗಿ ಮಾಡುವ ಪೂಜೆ ವ್ಯರ್ಥವೆಂದು ತಿಳಿಸುತ್ತ, ಸುಜ್ಞಾನಿಯು ತನ್ನ ಅರಿವಿನಿಂದ ಸತ್‌ಕ್ರಿಯೆಗಳನ್ನು ಆಚರಿಸುತ್ತ ಸನ್ಮಾರ್ಗದಲ್ಲಿ ನಡೆಯಬೇಕೆಂದು ಕರೆಕೊಡುವ ವಚನಾಮೃತಗಳು ಇಲ್ಲಿವೆ. ಇವು ಎಲ್ಲ ಕಾಲಕ್ಕೂ ಅನ್ವಯಿಸುವಂತಹ ಅಮೂಲ್ಯ ಕೊಡುಗೆಗಳಾಗಿವೆ.*

**ಗುರುಗ್ರಹದಲ್ಲಿ ದೀಪಾವಳಿ** (ವೈಜ್ಞಾನಿಕ ಲೇಖನಗಳು)

*ನಾಗೇಶ ಹೆಗಡೆ*

**ಪುಟ : 192** **ಬೆಲೆ : ರೂ. 80**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -1



*ವಿಜ್ಞಾನ ಕ್ಷೇತ್ರಕ್ಕೆ ದಿನವೂ ಸೇರ್ಪಡೆಯಾಗುತ್ತಿರುವ ಹೊಸ ಹೊಸ ಅಚ್ಚರಿಯ ವಿಷಯಗಳನ್ನು ತಿಳಿದುಕೊಳ್ಳಲು ಹಾತೊರೆಯುವ ನಿಮಗಿದೋ ವೈಜ್ಞಾನಿಕ ಲೇಖನಗಳ ಸುಗ್ಗಿ! ವಿಜ್ಞಾನದ ಹೊಸ ಆವಿಷ್ಕಾರಗಳು ತಂದೊಡ್ಡುವ ಪ್ರಯೋಜನದೊಂದಿಗೆ ಎಡವಟ್ಟು ಸ್ವಾರಸ್ಯ- ವೈಫಲ್ಯ ಮೋಜಿನ ಪ್ರಸಂಗಗಳೂ ಇಲ್ಲಿದ್ದು ಲೇಖನಗಳೆಲ್ಲ ಮೋಡಿಮಾಡಿದಂತೆ ಓದಿಸಿಕೊಂಡು ಹೋಗುತ್ತವೆ. ರೇಖಾಚಿತ್ರಗಳು ಇನ್ನಷ್ಟು ಖುಷಿಪಡಿಸುತ್ತವೆ.*



**ರಾಕೆಟ್ ಕಥೆ**

*ಎನ್. ಶಂಕರಪ್ಪ*

**ಪುಟ : 132** **ಬೆಲೆ : ರೂ. 55**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -1

*ರಾಕೆಟ್ ತಂತ್ರಜ್ಞಾನ ಮೈಸೂರು ಯುದ್ಧದಲ್ಲಿ ಟಿಪ್ಪುವಿನಿಂದ ಪ್ರಯೋಗಿಸಲ್ಪಟ್ಟಿತ್ತು ಎಂಬ ಕುತೂಹಲಕಾರಿ ಅಂಶದೊಂದಿಗೆ ಈ ಲೇಖನಗಳು ಪ್ರಾರಂಭವಾಗುತ್ತವೆ. ಭೌತ ವಿಜ್ಞಾನಿಗಳು ಅನೇಕ ಅಸಾಧ್ಯಗಳನ್ನು ಸಾಧ್ಯಗೊಳಿಸುತ್ತ ಬಾಹ್ಯಾಂತರಿಕ್ಷ ಶೋಧನೆ-ಅನ್ಯಗ್ರಹಾನ್ವೇಷಣೆ-ಯುದ್ಧ ಭೂಮಿಗಳಲ್ಲಿ ತಮ್ಮ ಹಿರಿಮೆಯನ್ನು ತೋರ್ಪಡಿಸುತ್ತ ಬಲಗೈ ಭಂಟನಂತಿರುವ ರಾಕೆಟ್‌ಗಳ ಉಗಮ - ತಂತ್ರಜ್ಞಾನಗಳ ಬಗ್ಗೆ ಸಂಪೂರ್ಣ ವಿವರವಿದೆ. ರಮ್ಯ ಕಥೆಗಳನ್ನೋದಿದ ಅನುಭವ.*

**ಯಶೋಧರಾ** (ಕಾದಂಬರಿ)

*ಡಾ|| ಎಸ್. ವಿ. ಪ್ರಭಾವತಿ*

**ಪುಟ : 130** **ಬೆಲೆ : ರೂ. 60**

**ಡಾ|| ಎಸ್. ವಿ. ಪ್ರಭಾವತಿ**, ಉಪನ್ಯಾಸಕಿ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ವಿಜಯನಗರ, ಬೆಂಗಳೂರು-560041



*ಅಧ್ಯಾಪಕಿ, ಲೇಖಕಿ ಡಾ|| ಎಸ್. ವಿ. ಪ್ರಭಾವತಿಯವರು ಪೌರಾಣಿಕ ಸ್ತ್ರೀಪಾತ್ರಗಳ ಬೆನ್ನು ಹತ್ತಿ ಅವರ ಮುಚ್ಚಿದ್ದ ಬಾಯಿ ತೆರೆಸಿ ಹೆಣ್ಣಾಗಿ ಆಕೆಯ ಭಾವನೆಗಳೇನೆಂಬುದನ್ನು ನಮಗೆ ತಿಳಿಸಿಕೊಡುವಲ್ಲಿ ನಿಸ್ಸೀಮರು. ಇಲ್ಲಿ ಚರಿತ್ರೆಯಲ್ಲಿ ಬುದ್ಧನ ಪೂರ್ವಾಶ್ರಮದ ಪತ್ನಿಯೆಂದು ಕಡೆಗಣಿಸಲ್ಪಟ್ಟ ಯಶೋಧರೆ ಬದುಕಿನ ಅನಿವಾರ್ಯಗಳೇನೆಂಬುದನ್ನು ತಿಳಿದುಕೊಂಡು ಆತನ ಸಾಧನೆಗೆ ಸಹವರ್ತಿಯಾಗಿ ಎತ್ತರಕ್ಕೆ ಏರಿದ್ದಾಳೆ.*

**- ಇಂದಿರಾ ಕುಮಾರಿ**

# ಅಡಿಗೊಂದು ತೇಗ - ತೇಕಡಿ

**ಮಾಲಾ ಶ್ರೀಧರ**

**ಪಟಾಕಿ** ಶಬ್ದದಿಂದ ದೂರವಿರುವ ಅವಕಾಶ ನಗರವಾಸಿಗಳಾದ ನಮಗೆ ಸಿಕ್ಕುವ ಸಾಧ್ಯತೆಗಳು ತೀರ ವಿರಳ ಎಂದೇ ಹೇಳಬೇಕು. ಮನೆ ಮಕ್ಕಳು ಉದ್ಯೋಗ ಮುಂತಾದ ನೂರಾರು ಅನಿವಾರ್ಯತೆಗಳು ಹಾಗೂ ಆಚರಣೆಗೆ ಬದ್ಧರಾಗುವಂತೆ ಮಾಡುವ ಹಬ್ಬ ನಮ್ಮಂತಹವರ ಜೀವನಶೈಲಿ ಆಗಿಬಿಟ್ಟಿದೆ. ಆದರೆ ಕಳೆದ ದೀಪಾವಳಿಯು ಒಂದು ಉಲ್ಲಾಸಕರ ಉಡುಗೊರೆಯನ್ನು ನಮ್ಮ ಆತ್ಮೀಯ ಸ್ನೇಹಿತರಿಂದ ಒದಗಿಸಿಕೊಟ್ಟಿತು. ನನ್ನ ಮಿತ್ರರು ಕೇರಳದ ಇಡುಕ್ಕಿ ಪ್ರದೇಶದಲ್ಲಿರುವ ತೇಕಡಿಯಲ್ಲಿ ನಾಲ್ಕು ದಿನಗಳನ್ನು ಕಳೆಯುವ ಅವಕಾಶ ಕಲ್ಪಿಸಿಕೊಟ್ಟರು. ನಗರವಾಸಿಯಾದ ನನಗೆ ಈ ಜಾಗದಲ್ಲಿ ನಾಲ್ಕು ದಿನಗಳು ಇರಲು ಸಾಧ್ಯವೇ ಎನ್ನುವ ಆತಂಕ ಇತ್ತು. ಕೇರಳದ ಬ್ಯಾಕ್ ವಾಟರ್ ಬಗ್ಗೆ ಕೇಳಿದ್ದೇನೆ, ಅಲ್ಲಿನ ಪ್ರಕೃತಿ ಸೌಂದರ್ಯದ ಬಗ್ಗೆ ಉಲ್ಲೇಖ ಮತ್ತು ಚಿತ್ರಗಳನ್ನು ಸಹ ನೋಡಿದ್ದೇನೆ. ಆದರೆ ತೇಕಡಿಯ ಬಗ್ಗೆ ಹೆಚ್ಚು ಅರಿವು ನನಗಿರಲಿಲ್ಲ. ನಾವು ಬೆಂಗಳೂರು ನಗರದಿಂದ ಸುಮಾರು ೫೫೦ ಕಿ. ಮೀ. ದೂರದಲ್ಲಿರುವ ಈ ಜಾಗವನ್ನು ತಲುಪಲು ತಮಿಳುನಾಡಿನಲ್ಲಿರುವ ವತ್ತಲಗುಂಡಿ ಎಂಬ ಸಣ್ಣ ಊರನ್ನು ಹಾದು ತಮಿಳುನಾಡಿನ ಅಂಚಿನ ಊರಾದ ಕುಮಿಲಿಯನ್ನು ತಲುಪಿದೆವು. ಕುಮಿಲಿ ತಮಿಳುನಾಡಿನ ಬಾರ್ಡರ್ ಊರಾದರೆ ತೇಕಡಿಯೂ ಕೇರಳದ ಇನ್ನೊಂದು ಅಂಚಿನ ಊರು. ಈ ಎರಡು ಊರುಗಳಿಗೂ ತಮ್ಮದೇ ಆದ ಇತಿಹಾಸವಿದೆ.

ಅಕ್ಟೋಬರ್ ತಿಂಗಳ ಕೊನೆಯ ಭಾಗದಲ್ಲಿ ನಾವು ಪ್ರಯಾಣ ಮಾಡಿದ್ದರೂ ಸಹ ಅಲ್ಲಲ್ಲಿ ಮಳೆ ಬಿದ್ದು ವರ್ಷ ಋತುವಿನ ಕೊನೆಯ ದಿನಗಳು ಹತ್ತಿರವಾದಂತೆ ಕಂಡುಬರುತ್ತಿತ್ತು. ಮಲಬಾರ್ ವರ್ಷಾರಣ್ಯವೆಂದೇ ಖ್ಯಾತಿ ಪಡೆದಿರುವ ಏಲಕ್ಕಿ ಬೆಟ್ಟ (ಕಾರ್‌ಡಮಮ್ ಹಿಲ್ಸ್) ಪ್ರವೇಶಿಸುತ್ತಿದ್ದೇವೆ ಎನ್ನುವುದನ್ನು ಸಾರುವಂತಹ ಸುವಾಸನೆಯನ್ನು ಮೊಟ್ಟಮೊದಲಬಾರಿಗೆ ನಾವು ಅನುಭವಿಸಿದೆವು. ಪಶ್ಚಿಮ ಘಟ್ಟದ ಪೂರ್ವ ದಿಕ್ಕಿನಲ್ಲಿರುವ ಇಡುಕ್ಕಿಯ ಪ್ರದೇಶಕ್ಕೆ ಈ ಬೆಟ್ಟ ಪ್ರದೇಶ ಸೇರಿರುತ್ತದೆ. ೧೯೩೪ರಲ್ಲಿ ತಿರುವಾಂಕೂರಿನ ಮಹಾರಾಜರು ಈ ಸ್ಥಳವನ್ನು ಸಂರಕ್ಷಿತ ಸ್ಥಳವೆಂದು ಘೋಷಿಸಿ ಇದಕ್ಕೆ ಪೆರಿಯಾರ್ ಸ್ಥಳವೆಂದು ಕರೆದರು ಎನ್ನುತ್ತಾರೆ. ಆದರೆ ಈ ಸ್ಥಳದಲ್ಲಿ ೧೮೯೫ರ ಸಮಯದಲ್ಲಿ ಪೆರಿಯಾರ್ ನದಿಗೆ ಅಡ್ಡ ಸೇತುವೆ ನಿರ್ಮಾಣವಾದ ಕಾರಣದಿಂದ ಸುಮಾರು ೨೦೦೦ ಹೆಕ್ಟೇರ್ ಜಾಗದಷ್ಟು ಜಲಾವರಣಗೊಂಡು ಸುಂದರವಾದ ಮಾನವ ನಿರ್ಮಿತ ಸರೋವರ ಇಂದು ಅನೇಕಾನೇಕ ಪ್ರಾಣಿ ಪಕ್ಷಿಗಳ ಅಭಯಾರಣ್ಯ ಕೇಂದ್ರಬಿಂದುವಾಗಿದೆ. ಇಂದಿಗೂ ಸಹ ಈ ಸರೋವರದಲ್ಲಿ ಅಲ್ಲಲ್ಲಿ ದೊಡ್ಡ ದೊಡ್ಡ ತೇಗದ ಮರಗಳು ಒಣಗಿದ್ದರೂ ಸಹ ಭದ್ರವಾಗಿ ಬೇರೂರಿದ್ದು ಸುಂದರ ಪಕ್ಷಿಗಳಾದ ಹಳದಿ ಶಿರದ ಹಿಂಪುಕ್ಕ ಅಡುಸುವ ಜಾತಿ ಕಿಂಗ್ ಫಿಷರ್ (ನೀಲಿ ವರ್ಣದ್ದು), ಕಾರ್‌ಮೂರಾಂಟ್, ಡಾರ್‌ಟರ್ ಅಥವಾ ಸ್ನೇಕ್ ಪಕ್ಷಿ ಹಾಗೂ ಕೊಕ್ಕರೆಗಳಿಗೆ ಸಂತಾನಾಭಿವೃದ್ಧಿ ತಾಣವಾಗಿದೆ.

ಈ ಜಾತಿಯ ಪಕ್ಷಿಗಳನ್ನು ನಾವು ವೀಕ್ಷಿಸಲು ಸಾಧ್ಯವಾಗುವುದಕ್ಕೆ ಕಾರಣವೆಂದರೆ ಅಭಯಾರಣ್ಯ ನಿರ್ವಹಣೆಯ ವತಿಯಿಂದ ಯಾತ್ರಿಗಳಿಗೆ ನಿಗದಿತ ಅವಧಿಯಲ್ಲಿ ಈ ಸರೋವರದಲ್ಲಿ ಯಂತ್ರಚಾಲಿತ ದೋಣಿವಿಹಾರ ವ್ಯವಸ್ಥೆಯನ್ನು ಕೇರಳದ ಸರ್ಕಾರ ಮಾಡಿರುವುದು. ಸುಮಾರು ಎರಡು ಘಂಟೆಗಳ ಈ ವಿಹಾರಾವಧಿಯಲ್ಲಿ ಅನೇಕ ವಿಧದ ವನ್ಯಜೀವಿಗಳನ್ನು ನೇರವಾಗಿ ನೋಡುವ ಅವಕಾಶವಿದೆ. ನಾವು ಈ ಸರೋವರದಲ್ಲಿ ಸಂಜೆಯಲ್ಲಿ ವಿಹರಿಸಿದಾಗ ಕಂಡುಬಂದ ಪ್ರಾಣಿಗಳಲ್ಲಿ ಆನೆಯ ಹಿಂಡು, ಬೊಗಳುವ ಜಿಂಕೆ, ಕಾಡುಹಂದಿ, ಕೆಂಪುವರ್ಣದ ಮುಂಗುಸಿ ಹಾಗೂ ಒಂದೆರಡು ಲಾಂಗೂರು ಮಂಗಗಳು ನಮ್ಮ ಕಣ್ಣೆದುರಿನಲ್ಲೆ ನಿರ್ಭಯವಾಗಿ ಸುಳಿದಾಡುತ್ತಿದ್ದವು. ಬಹುಶಃ ಯಂತ್ರ ಚಾಲಿತ ದೋಣಿಯ ಶಬ್ದಕ್ಕೆ ಅವುಗಳು ಅನಿವಾರ್ಯವಾಗಿ ಹೊಂದಿಕೊಂಡಿವೆಯೋ ಏನೊ. ಈ ನಯನ ಮನೋಹರ ಸರೋವರದಲ್ಲಿ ವಿಹರಿಸುವ ಪ್ರತಿಯೊಬ್ಬರ ಮನದಲ್ಲೂ ಕಾವ್ಯಸ್ಫೂರ್ತಿ ತನ್ನಷ್ಟಕ್ಕೆ ತಾನೇ ಚಿಮ್ಮುವುದು. ಆದರೆ, ಈ ವಿಹಾರಕ್ಕಾಗಿ ಬಳಸಿದ ದೋಣಿಯು ಮಾಡುವ ಕರ್ಕಶ ಶಬ್ದ, ಡೀಸಲ್ ಹೊಗೆ ಮತ್ತು ಈ ದೋಣಿಗಳಿಂದ ಸುರಿಯುವ ಎಣ್ಣೆ ಸರೋವರದ ಮೇಲ್‌ಪದರದಲ್ಲಿ ಕಾಮನವರ್ಣದ ರೇಖೆಗಳಿಂದ ಕಾಣಬರುತ್ತಿದ್ದುದು ತೀರ ದುರದೃಷ್ಟಕರ. ಪರಿಸರವನ್ನು ಕಾಪಾಡುವ ಯತ್ನ ಇಲ್ಲಿ ಅತ್ಯಾವಶ್ಯಕವಾಗಿ ಅನುಷ್ಠಾನಕ್ಕೆ ಬರಬೇಕಾಗಿದೆ.



ಪ್ರಶಾಂತ ಸರೋವರ

೭೭ ಸಾವಿರ ಹೆಕ್ಟೇರ್ ಪ್ರದೇಶದ ತೇಕಡಿ ಅಭಯಾರಣ್ಯದಲ್ಲಿ ಅಡಿಗೊಂದು ತೇಗದ ಮರ ಇರುತ್ತದೆಂದು ಪ್ರತೀತಿ. ಆದರೆ ಇಂದು ಈ ಮಾತು ಭಾಗಶಃ ಅನ್ವಯಿಸುತ್ತದೆ. ಕಾಡುಗಳ್ಳರು ಅರಣ್ಯ ಸಂಪತ್ತನ್ನು ನಿಷ್ಕರುಣೆಯಿಂದ ಲೂಟಿ ಮಾಡುತ್ತಿರುವುದು ಮತ್ತು ಜನಸಂಖ್ಯೆ ಹೆಚ್ಚಾಗುತ್ತಿರುವುದರಿಂದ ಅರಣ್ಯ ಪ್ರದೇಶ ಮೊಟಕಾಗಿ ಇರುವುದೆಂದು ಭಾಸವಾಗುತ್ತದೆ. ದುರ್ಗಮಾರಣ್ಯದಲ್ಲಿ ಸೊಂಪಾಗಿ ಬೆಳೆದಿರುವ ವೃಕ್ಷಗಳ ರಾಶಿಯಲ್ಲಿ ತೇಗ, ಗಂಧ, ರೋಸ್, ಯೂಕಲಿಪ್ಟಸ್ ಮುಂತಾದವುಗಳು ರಾರಾಜಿಸುತ್ತಿವೆ. ಈ ಮರಗಳು ಬೆಳೆದು ದಿಗಂತದತ್ತ ಚಾಚಿರುವುದನ್ನು ನೋಡಿದಾಗ ಉಂಟಾಗುವ ಮನೋಲ್ಲಾಸ ಅವರ್ಣನೀಯ. ಇದರೊಂದಿಗೆ ಹಚ್ಚಹಸಿರು ಹುಲ್ಲು ಕಣ್ಣಿಗೆ ತಂಪನ್ನು ಉಂಟುಮಾಡುತ್ತದೆ. ಈ ಹುಲ್ಲಿಗೆ ಆಕರ್ಷಿತವಾದ ಸಾಂಬಾ ಜಿಂಕೆ, ಕಾಡುಹಂದಿ ಹಾಗೂ ಸಣ್ಣ ಪುಟ್ಟ ಪ್ರಾಣಿಗಳು ನಮ್ಮೆದುರಿನಲ್ಲೇ ಅರಣ್ಯ ಮಧ್ಯದ ಟಾರು ರಸ್ತೆಯನ್ನು ಹಾಯುವುದು ಈ ಋತುವಿನಲ್ಲಿ ಸಾಮಾನ್ಯವೆಂದು ಹೇಳುತ್ತಾರೆ. ದುರದೃಷ್ಟಕರವಾದದ್ದೇನೆಂದರೆ ಈ ರಸ್ತೆಯಲ್ಲಿ ಓಡಾಡುವ ವಾಹನಗಳ ಗಾತ್ರ ಹಾಗೂ ಸಂಖ್ಯೆ ದೊಡ್ಡದಾಗಿಯೇ ಇದೆ. ಈ ವಾಹನಗಳು ಉಗುಳುವ ಹೊಗೆ ಮತ್ತು ಶಬ್ದಮಾಲಿನ್ಯವನ್ನು ತಡೆಗಟ್ಟುವ ವಿಧಾನಗಳು ಯಾವಾಗ ಬರುವದೋ ಕಾದು ನೋಡಬೇಕು.

ತೇಕಡಿಯಲ್ಲಿ ನಾವು ಕಳೆದ ನಾಲ್ಕು ದಿನಗಳಲ್ಲಿ ಹೆಚ್ಚಿನ ಸಮಯವನ್ನು ಕಾಡಿನ ವಿವಿಧ ದಿಕ್ಕುಗಳತ್ತ ಕಾಲ್‌ನಡಿಗೆಯಲ್ಲಿ ಕಳೆದೆವು. ಅಲ್ಲಿ ಇಲ್ಲಿ ಓಡಾಡುತ್ತ ಅನೇಕ ಪಕ್ಷಿಗಳನ್ನು ಮತ್ತು ಮರಗಳ ಮೇಲೆ ನಿರಾಯಾಸವಾಗಿ ಚಲಿಸುವ ಕೆಲವು ಕಾಡು ಪ್ರಾಣಿಗಳನ್ನು ಬಹು ಸನಿಹದಲ್ಲಿ ನೋಡಲು ಸಾಧ್ಯವಾಯಿತು. ಪೆರಿಯಾರ್ ಸರೋವರದ ಮಧ್ಯದಲ್ಲಿ ಹತ್ತಾರು ವರ್ಷಗಳಿಂದಲೂ ಒಣಮರಗಳು ಡಾರ್ಟರ್ ಪಕ್ಷಿ ಅಥವಾ ಹಾವಿನಂತೆ ತನ್ನ ಉದ್ದವಾದ ಕತ್ತನ್ನು ಅಂಬರದತ್ತ ಚಾಚಿ ರೆಕ್ಕೆ ಪುಕ್ಕಗಳನ್ನು ಸೂರ್ಯನ ತಾಪಕ್ಕೆ ಒಡ್ಡುವ ನೋಟ ಸೊಗಸಾಗಿರುತ್ತದೆ. ತುಂಬ ತಂಪಾದ ಗಿಡಗಳ ನೆರಳಿನಿಂದ ತಪ್ಪಿಸಿಕೊಳ್ಳುವ ಸಲುವಾಗಿಯೇ

ಏನೋ ಗಿಡುಗಗಳು, ಕಾರ್ಮೋರಾಂಟ್‌ಗಳು ಅಂದರೆ ನೀರ್‌ಕಾಗೆ ಮತ್ತು ಕುಬ್ಜ ನೀರ್‌ಕಾಗೆಗಳು ತಮ್ಮ ಕರಿವರ್ಣದ ಮಿರುಗುವ ದೇಹವನ್ನು ಆಗಿಂದಾಗ್ಗೆ ಚಾಚಿ ವಟವೃಕ್ಷಕ್ಕೆ ಕೊಕ್ಕನ್ನು ತೀಡುತ್ತಿರುತ್ತವೆ. ನೀಲಿ ವರ್ಣದ ಕಿಂಗ್‌ಫಿಷರ್ (ರಾಜ ಮೀನಕ್ಕಿಗಳು) ಮೀನು ಮತ್ತು ಇತರೆ ಸಣ್ಣಪುಟ್ಟ ಜಲಚರಗಳನ್ನು ಬೇಟೆಯಾಡು ತ್ತಿರುತ್ತದೆ. ಅತೀ ಇಂಪಾದ ದನಿಯಿರುವ ಮಲಬಾರ್ ಗುಬ್ಬಿಗಳ ಹಾಡು ಒಮ್ಮೊಮ್ಮೆ ಇಡೀ ಅರಣ್ಯವನ್ನೇ ಆವರಿಸುತ್ತದೆ. ದೊಡ್ಡದಾದ ಕೊಕ್ಕುಳ್ಳ ಪಕ್ಷಿಗಳ ಗುಂಪಿಗೆ ಗ್ರೇ ಹಾರನ್ ಬಿಲ್, ಅಂದರೆ ಕಂದು ವರ್ಣ ಗಿಡುಗ ರೂಪಿ ಇಲ್ಲಿ ಕಾಣಬರುತ್ತದೆ.



*ಕಾಡಿನಲ್ಲಿ ತಿರುಗಾಡುವ ಸೊಗಸು*

ಇಳಿ ಸಂಜೆಯ ತಂಪಿನಲ್ಲಿ ಸರೋವರದ ಸುತ್ತ ಮೇಲ್ದಂಡೆಯಲ್ಲಿ ಕಾಲುನಡಿಗೆಗೆ ಹಿತವೆನಿಸುವ ಕೆಂಪುವರ್ಣದ ಗಟ್ಟಿನೆಲವು ನಮಗೆ ತಾರಾಡುವುದಕ್ಕೆ ಹುಮ್ಮಸ್ಸು ಕೊಟ್ಟಿತು. ವಿಶಾಲ ಸರೋವರದ ದಂಡೆಯಲ್ಲಿ ಚೀರಿಡುವ ಜಿಂಕೆಗಳ ಪುಟ್ಟ ಮರಿಗಳು ನೀರಿನ ಬಳಿಗೆ ಬಂದುಹೋಗುತ್ತಿದ್ದುವು. ಹಾಗೆಯೇ ಜುಟ್ಟಿರುವ ಕಾಡುಹಂದಿಗಳು ವೇಗವಾಗಿ ಹುಲ್ಲನ್ನು ಕಬಳಿಸುವ ರಭಸ ಅಚ್ಚರಿ ಉಂಟುಮಾಡಿತು. ಸರೋವರದ ಅಂಚಿನಂತೆ ಕಾಣುವ ಬಂಡೆ ಪ್ರದೇಶಗಳಲ್ಲಿ ದಪ್ಪನೆಯ ಆಮೆಗಳು ಗೋಚರಿಸಿದವು. ಆರ್ಭಟ ಮಾಡದ ದೊಡ್ಡ ಆನೆಯ ಸಂಸಾರ ಒಣದಂಡೆಯ ಮೇಲೆ ನಿರಾಳವಾಗಿ ಸೊಂಪಾಗಿ ಬೆಳೆದಿದ್ದ ಎಳೆಯ ಹುಲ್ಲನ್ನು ಕಂತುಗಳನ್ನಾಗಿಸಿ ಬೇರಿನಲ್ಲಿರುವ ಮಣ್ಣನ್ನು ತೊಳೆದು ಕೊಡವಿ ಮುಕ್ಕುತ್ತಿದ್ದವು. ಈ ಗುಂಪಿನಲ್ಲಿದ್ದ ಸಲಗವೊಂದು ತನ್ನ ದಂತಗಳನ್ನು ಹಾಗೆಯೇ ಉಳಿಸಿಕೊಂಡಿರುವುದನ್ನು ನೋಡಿ ಕಾಡುಗಳ್ಳರ ಗುಂಡಿಗೆ ಇದು ಬಲಿಯಾಗದಿರಲಿ ಎನ್ನುವ ಪ್ರಾರ್ಥನೆ ನಮ್ಮೆಲ್ಲರ ಮನದಾಳದಲ್ಲಿತ್ತು. ಈ ವನ್ಯ ಜೀವಿಗಳು ತೇಕಡಿಯ ಅಭಯಾರಣ್ಯದ ಎಪ್ಪತ್ತೇಳು ಸಾವಿರ ಹೆಕ್ಟೇರ್ ವಿಶಾಲ ಪ್ರದೇಶದಲ್ಲಿ ನಿರ್ಭೀತಿಯಿಂದ ಇರುವುದಕ್ಕೆ ನಾವು ಸಹ ಶ್ರಮ ಪಡಬೇಕಾಗಿದೆ ಎನ್ನುವ ಸತ್ಯವೂ ಸಹ ತಕ್ಷಣದಲ್ಲಿ ನನ್ನ ಮನಸ್ಸಿಗೆ ಗೋಚರಿಸದೇ ಇರಲಿಲ್ಲ.

ಈ ಅರಣ್ಯವನ್ನು ನಿತ್ಯ ಹರಿದ್ವರ್ಣದ ವಿಧದ್ದೆಂದು ಕರೆಯುತ್ತಾರೆ. ಈ ವನವೂ ಮೇಲ್ಮಟ್ಟದ ಇಳಿಜಾರಿಗೆ ಸೇರಿದ್ದು ಇಲ್ಲಿ ದೇವದಾರು, ರೋಸ್, ಬಿಳಿ ಸೀಡರ್, ಸಿಲ್ಕ್ ಕಾಟನ್ ಜಾತಿಗೆ ಸೇರಿದ ದೊಡ್ಡ ಮರಗಳು ಹೇರಳವಾಗಿ ಕಾಣಬರುತ್ತವೆ. ಕೆಳಜಾರಿನ ಪ್ರದೇಶದಲ್ಲಿ ಸಾಗುವನೆ, ಸಾಲ್‌ಹೊನ್ನೆ, ಶ್ರೀಗಂಧದ ಮರಗಳನ್ನು ನೋಡಬಹುದು. ಪೆರಿಯಾರ್ ಅಭಯಾರಣ್ಯವನ್ನು ಮೂಲತಃ ಕ್ಷೀಣಿಸುತ್ತಿರುವ ಹುಲಿಗಳ ಅರಣ್ಯವೆಂದು ಹೇಳುತ್ತಾರಾದರೂ, ಇಲ್ಲಿ ಚಿರತೆ, ಕಾಡುನಾಯಿ, ಕರಡಿ ಮತ್ತು ನೀಲಿವರ್ಣದ ಗೂಳಿಗಳು ಗೂಢಾರಣ್ಯದಲ್ಲಿವೆ ಎಂದು ನಮ್ಮ ಜೊತೆಯಲ್ಲಿ ಚಾರಣ ಮಾರ್ಗದರ್ಶಿಯಾಗಿ ಬಂದಿದ್ದ ಮೂಲ ಬುಡಕಟ್ಟಿನ ಸಾಜಿ ಎಂಬ ತರುಣ ವಿವರಿಸಿದ. ಈ ಗೂಢಾರಣ್ಯದ ಒಳಾವರಣವು ನಾವಿದ್ದ ಜಾಗದಿಂದ ಸುಮಾರು ೩೦ ಕಿ.ಮೀ.ಗಳಿಗಿಂತಲೂ ದೂರದ ಒಳಾರಣ್ಯ ಪ್ರದೇಶದಲ್ಲಿದೆ ಎಂದು ವಿವರಿಸಿದ. ನಮ್ಮ ಚಾರಣ ಪ್ರದೇಶವನ್ನು ವಿಹಾರಾರ್ಥಿಗಳ ಪ್ರದೇಶವೆಂದು ಗುರುತಿಸಿರುತ್ತಾರೆ. ಈ ಪ್ರದೇಶದಲ್ಲಿ ಅರಣ್ಯ ಇಲಾಖೆಯವರು ನೇಮಿಸಿದ ಮಾರ್ಗದರ್ಶಿಯೊಂದಿಗೆ ಮಾತ್ರ ಪ್ರವೇಶಿಸಲು ಸಾಧ್ಯ. ಇದೊಂದು ಉತ್ತಮವಾದ ಪದ್ಧತಿಯೆಂದು ನನಗನಿಸಿತು. ಈ ಬುಡಕಟ್ಟಿನವರು ಅರಣ್ಯದ ಒಂದು ಅವಿಭಾಜ್ಯ ಅಂಗವೆನ್ನುವುದನ್ನು ಗಮನಿಸಿ ಇಂತಹ ಹಲವಾರು ಮಂದಿಗೆ ಸೂಕ್ತ ತರಬೇತಿ ನೀಡಿ ಮಾರ್ಗದರ್ಶಿ ಉದ್ಯೋಗಕ್ಕೆ ನೇಮಿಸಿರುವುದು ಅಭಿನಂದನಾರ್ಹವಾದದ್ದು. ಈ ತರುಣನ ಪೂರ್ವಜರೆಲ್ಲರೂ ಈ ವನದಲ್ಲಿ ಬಾಳಿದವರು. ಈತನಿಗೆ ಕಾಡಿನ ಬಗ್ಗೆ ಇರುವ ತಿಳಿವಳಿಕೆ ಮೆಚ್ಚಿಕೊಳ್ಳುವಂತಹದು.

ಕಾಡಿನ ಚಾರಣದಲ್ಲಿ ಕಂಡುಬಂದ ನೀಲಗಿರಿ ಲಂಗೂರ್ ಮಂಗಗಳು ಅಲ್ಲೊಂದು ಇಲ್ಲೊಂದು ಮರದಿಂದ ಮರಕ್ಕೆ ಜಿಗಿಯುತ್ತ ಹಣ್ಣಿದ್ದ ಕಾಡು ಸೀಬೆ ಮರಗಳಿಗೆ ದಾಳಿಯಿಡುತ್ತಿದ್ದವು. ದಪ್ಪನೆಯ ಕಾಡ ಅಳಿಲು, ಅಂದರೆ ಮಲಬಾರ್ ಅಳಿಲು ನಾಡ ಗಡವ ಕೋತಿಗಿಂತ ದಪ್ಪವಾಗಿದ್ದು ಮರದ ಕೊಂಬೆಗಳ ಮೇಲೆ ಸರಾಗವಾಗಿ ಓಡಾಡುತ್ತಿದ್ದವು. ಇದೇ ಪ್ರದೇಶದಲ್ಲಿ ಸಿಂಕೋನ ತೊಗಟೆಯ ಉತ್ಪತ್ತಿ ಮಾಡುವ ಮರಗಳು ಹೇರಳವಾಗಿವೆ. ಈ ಮರಗಳ ತೊಗಟೆಯನ್ನು ಕದ್ದು ಸಾಗಿಸುವ ವ್ಯವಹಾರ ನಡೆಯುತ್ತಲಿದೆ ಎಂದು ಸಾಜಿ ಹೇಳುತ್ತಾನೆ. ಅನೇಕ ಜಾತಿಯ ಗಿಡಮೂಲಿಕೆಗಳು ಮತ್ತು ಅವುಗಳ ರೋಗ ನಿರೋಧಕ ಗುಣಗಳನ್ನು ಸಾಜಿ ಹೇಳುತ್ತಿದ್ದಾಗ ಇವನೊಬ್ಬ ಆಯುರ್ವೇದ ಪಂಡಿತನೇನೋ ಎನ್ನುವಂತಿತ್ತು. ಇದಲ್ಲದೆ ಕೆಲವೊಂದು ವನ್ಯ ಪ್ರಾಣಿಗಳ ಮಾಂಸವನ್ನು ತಿನ್ನುವುದರಿಂದ ಲೈಂಗಿಕ ತಾಕತ್ತು ಬರುತ್ತದೆ ಎಂದು ನಂಬಿ ಈ ಜೀವಿಗಳನ್ನು ಗುಟ್ಟಾಗಿ ಕಾಡಿನಲ್ಲಿ ಕೊಲ್ಲುವ ಉದಾಹರಣೆಗಳು ಇವೆ ಎನ್ನುವುದನ್ನು ಕೇಳಿ ತುಂಬ ಬೇಸರವಾಯಿತು. ಇದಲ್ಲದೆ ಕೆಲವೊಂದು ಬರಡು ಪ್ರದೇಶದಲ್ಲಿ ಸಾರಾಯಿ ಬಾಟ್ಲಿಗಳು, ಪ್ಲಾಸ್ಟಿಕ್ ಚೀಲಗಳು, ಚೆಲ್ಲಾಡಿರುವುದು ಸಹ ಕಂಡುಬಂತು. ನಮ್ಮ ಪರಿಸರದ ಬಗ್ಗೆ ಇರುವ ಬೇಜವಾಬ್ದಾರಿತನ ತಿದ್ದಲು ಸಾಧ್ಯವಿಲ್ಲವೆ ಎನ್ನುವ ಚಿಂತೆ ಬಹಳ ಸಮಯ ನಮ್ಮನ್ನು ಕಾಡುತ್ತಿತ್ತು.

ನಾವೇರುತ್ತಿದ್ದ ಇಳಿಜಾರು ಬೆಟ್ಟ ದೊಡ್ಡ ಮರಗಳ ನಡುವಿನ ಹಾದಿಯಲ್ಲಿತ್ತು. ನಾ ತಿಳಿದಂತೆ ಇವು ಕಾಡುದಾರಿಗಳೇ ಹೊರತು ಕಾಲ್‌ದಾರಿಗಳಲ್ಲ ಎಂದು ಸ್ಪಷ್ಟವಾಗಿ ತೋರುತ್ತಿತ್ತು. ಈ ಪ್ರದೇಶದಲ್ಲಿನ ಕೆಲವು ಮರಗಳು ನೂರಾರು ವರ್ಷಗಳ ಹಳೆಯವೇನೋ ಎನ್ನುವಂತಿತ್ತು. ಈ ಅರಣ್ಯದಂಚಿನಲ್ಲೇ ಇದ್ದರೂ ಸಹ ಕಾಡಿನ ಪರಿಮಳ ಪ್ರಬಲವಾಗಿಯೇ ಬರುತ್ತಿತ್ತು. ಕೆಲವು ಗಂಟೆಗಳ ಈ ಚಾರಣದಲ್ಲಿ ಅರಣ್ಯದಲ್ಲಿ ಹರಿಯುವ ಸಣ್ಣ ಝರಿ, ಕುಂಟೆ ಹಾಗೂ ಜೇಡಿಮಣ್ಣಿನಿಂದ ಕೊಚ್ಚೆಯಂತೆ ಕಂಡುಬಂದ ಸ್ಥಳಗಳಲ್ಲಿ ಬಹು ಎಚ್ಚರಿಕೆಯಿಂದಲೇ ನಡೆಯುತ್ತಿದ್ದೆವು. ಹೀಗೆ ನಡೆಯುತ್ತಿದ್ದಾಗ ಒಮ್ಮೆಲೆ ಸಾಜಿ ಕಿರಿಚುತ್ತ ನಮ್ಮ ಕಾಲುಗಳತ್ತ ಗಮನಹರಿಸುವಂತೆ ಸೂಚಿಸಿದ. ಯಾವುದೋ ಮಾಯದಲ್ಲಿ ನಮ್ಮ ಎರಡು ಕಾಲುಗಳ ಕಾಲುಚೀಲದ ಮೇಲ್‌ಭಾಗದಲ್ಲಿ ಕಮಾನಿನಂತೆ ಚಲಿಸುವ ಸಣ್ಣ ಹುಳುಗಳು ಮುತ್ತಿದ್ದವು. ಈ ಜಂತುಗಳು ಯಾವುವೆಂದು ಕೇಳುವುದಕ್ಕೆ ಮುಂಚೆಯೇ ಸಾಜಿ ಮರದ ಮೇಲೇರಿ ತನ್ನ ಕಾಲುಚೀಲವನ್ನು ಕಡ್ಡಿಯಿಂದ ಜವರುತ್ತಿದ್ದ. ನಮಗೆ ಆಗ ತಿಳಿಯಿತು ಇದು ಜಿಗಣೆಯೆಂದು. ನಮ್ಮೆಲ್ಲರಿಗೂ ರಕ್ಷಣೆಗೆಂದು ನೀಳವಾದ ಕಾಲುಚೀಲವನ್ನು ಚಾರಣ ಪ್ರಾರಂಭವಾಗುವ ಮುನ್ನವೇ ಧರಿಸುವಂತೆ ತಿಳಿಸಲಾಗಿತ್ತು. ಈ ಎಚ್ಚರಿಕೆಯನ್ನು ನಾವು ಪಾಲಿಸಿದ ಕಾರಣದಿಂದ ಬಟ್ಟೆಯ ಕಾಲ್‌ಚೀಲದ ಮೇಲೆ ಮಾತ್ರ ನೂರಾರು ಜಿಗಣೆಗಳು ಮೊಕ್ಕಾಂ ಹೂಡಿ ನಮ್ಮ ಚರ್ಮದಿಂದ ದೂರವಿದ್ದವು. ಪೇಟೆಯವರ ರಕ್ತ ಹೀರಲು ಹೆಚ್ಚು ಅವಕಾಶ ಈ ಜಂತುಗಳಿಗೆ ಸಿಗಲಿಲ್ಲ. ಆದರೆ ಇವುಗಳನ್ನು ಕೊಡುವುವ ವಿಧಾನ ತಿಳಿಯದ ಕಾರಣ ನಮ್ಮಲ್ಲಿ ಒಬ್ಬರ ಕೈ ಬೆರಳಿಗೆ ಈ ಜಿಗಣೆ ಹತ್ತಿತ್ತು. ಜಿಗಣೆ ಹಿಡಿತ ಏನೆಂಬುದರ ಅರ್ಥ ಅವರ ಮುಖದ ಮೇಲೆ ಕಾಣಬಂದ ಬೆವರಹನಿಗಳಿಂದ ತಿಳಿಯುತ್ತಿತ್ತು. ಈ ಪ್ರದೇಶಕ್ಕೆ ಬರಲು ಅನುಮತಿ ಇಲ್ಲವೆಂದು ಈ ಜಿಗಣೆಗಳು ಸೂಚಿಸಿದವು. ಅರಣ್ಯವನ್ನು ಕಾಪಾಡುವ ಹೊಣೆಗಾರಿಕೆಯನ್ನು ನಿಸರ್ಗ ಈ ಜಂತುಗಳಿಗೆ ವಹಿಸಿಕೊಟ್ಟಿದೆ ಎಂದರೆ ತಪ್ಪಾಗಲಾರದು. ಚಾರಣವನ್ನು ಅಲ್ಲಿಗೆ ನಿಲ್ಲಿಸಿ ಇಳಿಜಾರು ಬೆಟ್ಟದಿಂದ ಜಾರುತ್ತಾ ಮೇಲುಸಿರು ಬಿಡುತ್ತ ಕೆಳಗಿನ ಮಟ್ಟಸ್ಥಳಕ್ಕೆ ಬಂದು ಬಿಸಿಲಿನ ಪ್ರದೇಶ ಒಂದರಲ್ಲಿ ಸುಮಾರು ಒಂದು ಗಂಟೆಕಾಲ ಜಿಗಣೆ ಬಿಡಿಸುವ ಕೆಲಸದಲ್ಲಿ ನಿರತರಾದೆವು. ನಮ್ಮ ಚಾರಣ ಈ ಪ್ರಸಂಗದೊಂದಿಗೆ ಕೊನೆಗೊಳ್ಳುವಂತಾಯಿತು. ಕಾಡಿನ ಅಂಚಿನಿಂದ ಮುಖ್ಯರಸ್ತೆಗೆ ಬಂದಾಗ ಕರ್ನಾಟಕದ ಪ್ರವಾಸಿಗರ ವಾಹನದಿಂದ ಬಂದ ಜೋಗದ ಸಿರಿ..... ದನಿಯು ನನ್ನ ಮನಸ್ಸಿನಲ್ಲಿ ತೇಗದ ಸಿರಿ ಎಂದು ಮಾರ್ಪಾಡಾಗಿ ಕೇಳಿಬರುತ್ತಿತ್ತು.

**ಮಾಲಾ ಶ್ರೀಧರ**
೯೦/೩, ೧೧ನೇ 'ಸಿ' ಮುಖ್ಯರಸ್ತೆ, ೧ನೇ ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೧೧

# ಆರ್ಥಿಕೋನ್ನತಿ ಹಾಗೂ ಪರಿಸರ ಸಮಸ್ಯೆ

**ಡಾ|| ಎಂ. ಎ. ನಾಡಕರ್ಣಿ**

ನಾನು ಎಪ್ಪತ್ತರ ದಶಕದಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾಗ ಪರಿಸರ ಸಮಸ್ಯೆಗಳಿಗೆ ಸಂಬಂಧಿಸಿ ನನ್ನಲ್ಲಿ ಮೊದಲ ಆಸಕ್ತಿ ಹಾಗೂ ಚಿಂತನೆ ಮೊಳೆಯಿತು ಎನ್ನಬಹುದು. ನಿಸರ್ಗದಲ್ಲಿನ ಜಲಾಭಾವ ಪರಿಸ್ಥಿತಿ ಹೇಗೆ ಕೃಷಿರಂಗದಲ್ಲಿ ಅಸ್ಥಿರತೆ ಉಂಟುಮಾಡುತ್ತದೆ ಎಂಬುದರ ಅಧ್ಯಯನ ನನ್ನ ಮೊದಲ ಕಾರ್ಯವಾಗಿದ್ದಿತು. ೧೯೭೨-೭೩ರಲ್ಲಿ ಮರಾಠವಾಡದಲ್ಲುಂಟಾದ ಭೀಕರ ಜಲಕ್ಷಾಮದ ಕುರಿತು ನಾನು ಪ್ರೊ. ಬಿ. ಎ. ಬೋರ್ಕರ್‌ರೊಂದಿಗೆ ಕೂಡಿ ನಡೆಸಿದ ಕಾರ್ಯ ಪ್ರೊ. ಅಮರ್ತ್ಯ ಸೇನ್ ಮತ್ತು ಡಾ|| ಎನ್. ಎಸ್. ಜೋಧರಂಥ ಘನ ವಿದ್ವಾಂಸರ ಗಮನ ಸೆಳೆಯಿತು. ಕೃಷಿಯು ನಮ್ಮ ದೇಶದಲ್ಲಿ ಕೋಟ್ಯಾಂತರ ಜನರ ಜೀವನದ ಆಧಾರವಾದುದರಿಂದ ಆರಂಭದಲ್ಲಿ ಕೃಷಿಗೆ ಸಂಬಂಧಿಸಿದ ಪರಿಸರ ಸಮಸ್ಯೆಗಳಲ್ಲಿ ನನ್ನ ಆಸಕ್ತಿ ಮೂಡಿತು. ತದನಂತರ ನಾನು ಕಾಡುಪ್ರದೇಶಗಳಿಗೆ ಸಂಬಂಧಿಸಿದ ಪರಿಸರ ಸಮಸ್ಯೆಗಳಲ್ಲಿ ಆಸಕ್ತನಾದೆ. ಏಕೆಂದರೆ ರೈತರ ಮತ್ತಿತರರ ಪುರೋಭಿವೃದ್ಧಿ ಕಾಡು ಪ್ರದೇಶಗಳ ಸಂರಕ್ಷಣೆ ಹಾಗೂ ಏಳಿಗೆಯನ್ನೇ ಅವಲಂಬಿಸಿದೆ. ಬಂಜರು ಹಾಗೂ ಬಳಕೆಯಾಗದ ಭೂಮಿಗಳ ಬಗೆಗೆ ನಿರ್ಲಕ್ಷ್ಯ ಹಾಗೂ ಆಡಳಿತ ವ್ಯವಸ್ಥೆಯ ಅಸಮರ್ಪಕತೆ ಎದ್ದು ಕಾಣುತ್ತಿದ್ದವು. ತದನಂತರ ನನ್ನ ಗಮನ ಈ 'ಹಸಿರು' ಪರಿಸರ ಸಮಸ್ಯೆಗಳಿಂದ ಮಾಲಿನ್ಯದಂತಹ 'ಕಂದು' ಪರಿಸರ ಸಮಸ್ಯೆಗಳ ಕಡೆಗೆ ಹರಿಯಿತು. ನಾನು ರಾಜಕೀಯ ಆರ್ಥಿಕತೆಯ ದೃಷ್ಟಿಕೋನದಿಂದ ದೇಶದೊಳಗಿನ ಹಾಗೂ ನಾನಾ ದೇಶಗಳ ನಡುವಿನ ಸಾರ್ವತ್ರಿಕ ಪರಿಸರ ಸಮಸ್ಯೆಗಳ ಅಧ್ಯಯನ ನಡೆಸಿದೆ.

ನಮ್ಮ ದೇಶದಲ್ಲೇ ಅನಾದಿಕಾಲದಿಂದಲೂ ಕಾಡುಗಳ ಸಂರಕ್ಷಣೆಯ ಕಡೆಗೆ ಗಮನ ನೀಡಿಕೊಂಡು ಬರಲಾಗಿದೆ. ಕ್ರಿ. ಪೂ. ೩೦೦ ವರ್ಷಗಳಷ್ಟು ಹಿಂದೆಯೇ ಕೌಟಿಲ್ಯ ತನ್ನ 'ಅರ್ಥಶಾಸ್ತ್ರ' ಗ್ರಂಥದಲ್ಲಿ ಕಾಡುಗಳ ಹಾಗೂ ವನ್ಯ ಮೃಗಗಳ ಸಂರಕ್ಷಣೆ ರಾಜಮಹಾರಾಜರುಗಳ ಆದ್ಯ ಕರ್ತವ್ಯವೆಂದು ಆಗ್ರಹಪಡಿಸಿದ್ದಾನೆ. ಕೈಗಾರಿಕೀಕರಣ, ಆಧುನಿಕ ಆರ್ಥಿಕೋನ್ನತಿ ಹಾಗೂ ಜನಸಂಖ್ಯಾ ಒತ್ತಡಗಳು ನೈಸರ್ಗಿಕ ಸಂಪನ್ಮೂಲಗಳ ಮೇಲೆ ಎಂಥ ಅಹಿತ ಪರಿಣಾಮ ಉಂಟುಮಾಡಿವೆ ಎಂಬುದನ್ನು ಜಾನ್ ರಸ್ಕಿನ್ ೧೮೬೨ರಲ್ಲಿ ಪ್ರಕಟವಾದ ತನ್ನ ಮಹದ್ಗ್ರಂಥ 'ಅಂಟು ದಿಸ್ ಲಾಸ್ಟ್'ನಲ್ಲಿ ವಿಶದಪಡಿಸಿದ್ದಾನೆ. ಬ್ರಿಟನ್ನಿನಲ್ಲಿ ಕೈಗಾರಿಕೀರಣದ ಫಲವಾಗಿ ಕಲ್ಲಿದ್ದಲ ನಿಕ್ಷೇಪಗಳು ಬರಿದಾದಂತೆ ಭಾರತದಲ್ಲೂ ಬ್ರಿಟಿಷರ ನೌಕಾ ನಿರ್ಮಾಣ ಕೈಗಾರಿಕೆಗಾಗಿಯೂ ರೈಲ್ವೇ ಜಾಲ ಬಂಧದ ವಿಸ್ತರಣೆಗಾಗಿಯೂ ತೇಗದ ಮರದ ಅಪರಿಮಿತ ಬಳಕೆಯಾಗಿ ಕಾಡುಗಳ ವಿನಾಶಕ್ಕೆ ದಾರಿಯಾಯಿತು. ಆದರೂ ೧೯ನೆಯ ಶತಮಾನದಲ್ಲಿ ಆಧುನಿಕ ಆರ್ಥಿಕ ಬೆಳೆವಣಿಗೆ ಇನ್ನೂ ಆರಂಭ ಘಟ್ಟದಲ್ಲಿದ್ದುದರಿಂದ ಪರಿಸರ ಸಮಸ್ಯೆಗಳು ಅಷ್ಟು ತೀವ್ರವಾಗಿ ಗಮನಕ್ಕೆ ಬರಲಿಲ್ಲ.

೨೦ನೆಯ ಶತಮಾನದಲ್ಲಿ, ಅದರಲ್ಲೂ ಅದರ ಕೊನೆಯ ಮೂರು ದಶಕಗಳಲ್ಲಿ, ಪರಿಸರದ ಉತ್ಕಟ ಸ್ಥಿತಿ ಉಲ್ಬಣಗೊಂಡಿತು. ಅರಣ್ಯನಾಶ ಅಭೂತಪೂರ್ವ ಪ್ರಮಾಣಗಳಲ್ಲಿ ಜರುಗಿತು. ತತ್ಫಲವಾಗಿ ಮಣ್ಣಿನ ಫಲವತ್ತತೆ ಕುಂದಿತು, ಕೊಳ, ಜಲಾಶಯ ಹಾಗೂ ನದೀ ತಳಗಳಲ್ಲಿ ಹೂಳು ತುಂಬಿತು. ಅನೇಕ ಪ್ರದೇಶಗಳು ಪ್ರವಾಹಗಳಿಗೆ ತುತ್ತಾದವು. ಜೈವಿಕ ವೈವಿಧ್ಯತೆ ನಾಶವಾಯಿತು. ಅನೇಕ ಪ್ರಾಣಿ ಪ್ರಭೇದಗಳು ಹೇಳ ಹೆಸರಿಲ್ಲದಂತಾದವು. ಜಲ ಹಾಗೂ ವಾಯು ಮಾಲಿನ್ಯ, ಜಾಗತಿಕ ವಾತಾವರಣದ ಉಷ್ಣತೆಯಲ್ಲಿ ಏರಿಕೆ ಉತ್ಕಟ ಸ್ಥಿತಿ ತಲುಪಿದವು. ಓಜೋನ್ ಸ್ತರ ಕುಗ್ಗಿತು. ನಗರಗಳಲ್ಲಿ ಜನಸಂದಣಿ ಹೆಚ್ಚಿತು. ನಾಶಗೊಳಿಸಬಹುದಾದಂಥ ಅಥವಾ ಪುನರ್‌ಬಳಕೆಗೆ ತರಲಾಗದಂಥ ವ್ಯರ್ಥ ಪದಾರ್ಥಗಳು ದಟ್ಟೈಸಿದವು.

ವಿಕಸಿತ ದೇಶಗಳಲ್ಲಿ ಈ ಸಮಸ್ಯೆಗಳು ಮೊದಲು ಗಮನಕ್ಕೆ ಬಂದುದು ಸಹಜವೇ ಆಗಿದ್ದಿತು. ಏಕೆಂದರೆ ಈ ರಾಷ್ಟ್ರಗಳೇ ಜಾಗತಿಕ ಪರಿಸರ ಸಮಸ್ಯೆಗಳಿಗೆ ಕಾರಣಭೂತವಾದವುಗಳು. ಅವು ಈ ಸಮಸ್ಯೆಯನ್ನು ಎರಡು ರೀತಿಗಳಲ್ಲಿ ಎದುರಿಸಿದವು. ಮೊದಲನೆಯದಾಗಿ ಪರಿಸರವನ್ನು ಕಲುಷಿತಗೊಳಿಸುವಂಥ ತಂತ್ರಜ್ಞಾನ ವಿಕಸಿಸುವ ಕಡೆಗೆ ಆದ್ಯ ಗಮನ ನೀಡಿದವು. ಎರಡನೆಯದಾಗಿ, ತಮ್ಮಲ್ಲಿದ್ದ ಕೊಳಕು ಕೈಗಾರಿಕೆಗಳನ್ನು ಪರೋಕ್ಷವಾಗಿ ಅಭಿವೃದ್ಧಿಶೀಲ ದೇಶಗಳಿಗೆ ಸಾಗಹಾಕಿದವು. ಅವು ತಮ್ಮ ದೇಶಗಳಲ್ಲಿನ ಕಾಡುಗಳನ್ನೂ ಪ್ರಾಣಿ ಸಂಪತ್ತನ್ನೂ ಉಳಿಸಿಕೊಳ್ಳಲು, ತಮಗೆ ಅವಶ್ಯವಿದ್ದ ಚೌಬೀನೆಯನ್ನೂ ಮಾಂಸವನ್ನೂ ಅಭಿವೃದ್ಧಿಶೀಲ ದೇಶಗಳಿಂದ ಆಮದು ಮಾಡಿಕೊಳ್ಳತೊಡಗಿದವು. ಅಮೆರಿಕ ಹಾಗೂ ಯೂರೋಪ್ ದೇಶಗಳು ಗೋಮಾಂಸ ಭಕ್ಷಣೆಯನ್ನು ಅರ್ಧದಷ್ಟು ಕಡಿಮೆ ಮಾಡಿದರೂ ಬ್ರೆಜಿಲ್‌ನಲ್ಲಿ ಅಮೆಜಾನ್ ಪ್ರದೇಶದಲ್ಲಿ ಜರುಗುತ್ತಿರುವ ಅರಣ್ಯ ವಿನಾಶವನ್ನು ಸಂಪೂರ್ಣವಾಗಿ ತಪ್ಪಿಸುವುದು ಸಾಧ್ಯವಿದೆ. ಏಕೆಂದರೆ, ಅಲ್ಲಿನ ಕಾಡುಗಳ ಹೆಚ್ಚಿನ ಭಾಗವನ್ನು ಜಾನುವಾರು ಸಾಕಣೆ ಕ್ಷೇತ್ರವನ್ನಾಗಿ ಬಳಸಲಾಗುತ್ತಿದೆ.

ಇನ್ನು ವಿಕಾಸಶೀಲ ದೇಶಗಳ ವಿಷಯ ಹೇಳುವುದಾದರೆ, ಆರಂಭದಲ್ಲಿ ಈ ದೇಶಗಳು ಪರಿಸರ ಸಮಸ್ಯೆಗಳಿಗೆ ಸಂಬಂಧಿಸಿ ಒಂದು ರೀತಿಯ ತಾತ್ಸಾರ ಮನೋಧರ್ಮ ತಳೆದಿದ್ದವು. ಈ ಸಮಸ್ಯೆಗಳನ್ನು ಸೃಜಿಸಿರುವುದು ವಿಕಸಿತ ದೇಶಗಳು, ಆದ್ದರಿಂದ ಅವೇ ಅವುಗಳನ್ನು ಪರಿಹರಿಸಲಿ, ವಿಕಾಸಶೀಲ ದೇಶಗಳಿಗೆ ಬಡತನ ಹಸಿವುಗಳ ವಿರುದ್ಧ ಹೋರಾಟ ಮುಖ್ಯವೇ ಹೊರತು ಪರಿಸರ ಸಮಸ್ಯೆಗಳ ವಿರುದ್ಧದ ಹೋರಾಟವಲ್ಲ ಎಂದು ಅವು ವಾದಿಸಿದವು.

ಇಂತಹ ಮನೋಭಾವಕ್ಕೆ ಒಂದು ನಿಚ್ಚಳ ನಿದರ್ಶನವೆಂದರೆ ೧೯೭೨ರಲ್ಲಿ ಸ್ಟಾಕ್‌ಹೋಮ್‌ನಲ್ಲಿ ಜರುಗಿದ ವಿಶ್ವಸಂಸ್ಥೆಯ 'ಪರಿಸರ ಹಾಗೂ ಬೆಳೆವಣಿಗೆ'ಗೆ ಸಂಬಂಧಿಸಿದ ಮೊದಲ ಮಹಾಧಿವೇಶನದಲ್ಲಿ, ಆಗ ಭಾರತದ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರು ಮಾಡಿದ ಭಾಷಣ. ಆಕೆ ತಮ್ಮ ಎಂದಿನ ವಾಗ್ಮಿತೆಯೊಂದಿಗೆ ಭಾಷಣ ಮಾಡುತ್ತ ಹೇಳಿದರು : "ಬಡತನವೂ ಜೀವನಾವಶ್ಯಕತೆಗಳೂ ಮಾಲಿನ್ಯಕಾರಕಗಳಲ್ಲವೇ ? ಹಳ್ಳಿಗಳಲ್ಲಿ ಹಾಗೂ ಕೊಳೆಗೇರಿಗಳಲ್ಲಿ ವಾಸಮಾಡುತ್ತಿರುವವರ ಬಳಿ ಹೋಗಿ, ಬದುಕಿನ ಮೂಲ ಆಕರವೇ ಕಲುಷಿತಗೊಂಡಿರುವ ಅವರಿಗೆ, ಸಾಗರ, ನದಿ ಹಾಗೂ ಗಾಳಿಗಳನ್ನು ಸ್ವಚ್ಛವಾಗಿಡಿ ಎಂದು ಬೋಧಿಸುವುದು ಹೇಗೆ ಸಾಧ್ಯ ? ಬಡತನದ ಪರಿಸ್ಥಿತಿಗಳಲ್ಲಿ ಪರಿಸರ ಸುಧಾರಣೆ ಹೇಗೆ ಸಾಧ್ಯ ? ಅದೇ ಹೊತ್ತಿನಲ್ಲಿ ವಿಜ್ಞಾನ ತಂತ್ರಜ್ಞಾನದ ಬಳಕೆ ಇಲ್ಲದೆ ಬಡತನ ನಿವಾರಣೆ ಹೇಗೆ ಸಾಧ್ಯ ?"

ಆದರೂ ಸಮ್ಮೇಳನಾನಂತರ ಆಕೆ ದೇಶದಲ್ಲಿ ವಾಯು ಹಾಗೂ ಜಲಪರಿಶುದ್ಧತೆಗೆ ಸಂಬಂಧಿಸಿ ಅವಶ್ಯ ಶಾಸನವೊಂದನ್ನು ಹೊರಡಿಸಿದರು. ಅದಕ್ಕೆ ರಾಜಕೀಯ ಹಾಗೂ ನೈತಿಕ ಬೆಂಬಲ ನೀಡಿದರು. ಪರಿಸರ ಮಾಲಿನ್ಯದ ಬಗೆಗೆ ನಿಗಾ ಇರಿಸಿ ನಿಯಂತ್ರಿಸುವ ವಿಶೇಷ ಸಂಸ್ಥೆಗಳನ್ನು ಸ್ಥಾಪಿಸಿದರು. ಇತರ ವಿಕಾಸಶೀಲ ದೇಶಗಳೂ ಭಾರತದ ಇದೇ ದಾರಿ ಹಿಡಿದವು.

ಬಡತನದ ಬೇಗೆಯಲ್ಲಿ ನರಳುತ್ತಿದ್ದರೂ ವಿಕಾಸಶೀಲ ದೇಶಗಳು ಪರಿಸರ ಸಂರಕ್ಷಣೆಯ ಬಗೆಗೆ ಇಂತಹ ಕಾಳಜಿ ತೋರಿಸುವುದು ಹೇಗೆ ಸಾಧ್ಯವಾಯಿತು ? ಬಡತನ ನಿರ್ಮೂಲನೆಯ ಹೆಸರಿನಲ್ಲಿ ಪರಿಸರ ರಕ್ಷಣೆಯನ್ನು ನಿರ್ಲಕ್ಷಿಸುವುದು ಬಡವರಿಗೇ ಹೆಚ್ಚು ಅನರ್ಥಕಾರಿ, ಪರಿಸರ ಮಾಲಿನ್ಯಕ್ಕೆ ಬಡವರೇ ಮೊದಲ ಬಲಿ ಪಶು ಎಂಬುದಕ್ಕೆ

**ವಿಷಾದ**



ಹಿಡಿವಷ್ಟು ಆಯುಧ
ಸುಡುವಷ್ಟು ಬಾಂಬು
ಕುಟ್ಟಿಕೆಡವಲೆಷ್ಟೋ...
ಮಂದಿರ, ಮಸೀದಿ
ಚರ್ಚುಗಳಿರುವಾಗ
ನಡುವೆ
ಇಲ್ಲದ್ದು ಒಂದೇ –
ಪ್ರೀತಿ

ರವಿಕುಮಾರ್ ಅಜ್ಜೀಪುರ

ಹೆಚ್ಚು ಹೆಚ್ಚಿನ ಸಾಕ್ಷ್ಯಗಳು ಆ ದೇಶಗಳಲ್ಲೇ ತೋರುವಂತಾದುದು ಇದಕ್ಕೆ ಕಾರಣ. 'ಆಧುನಿಕ ಬೆಳವಣಿಗೆ'ಯು ಅನೇಕ ಪ್ರಸಂಗಗಳಲ್ಲಿ ಬಡವರನ್ನು ಪರಿಸರದಿಂದ ದೂರವಿರಿಸುತ್ತಿದ್ದಿತು. ಅಂತಹ 'ಬೆಳವಣಿಗೆ'ಯು ಬಡತನವನ್ನು ಹೆಚ್ಚಿಸುತ್ತಿದ್ದಿತಷ್ಟೆ ಅಲ್ಲ, ಆರ್ಥಿಕ ವಿಕಾಸವನ್ನು ಹೆಚ್ಚು ದುಬಾರಿಯನ್ನಾಗಿಯೂ ಕಷ್ಟಕರವನ್ನಾಗಿಯೂ ಮಾಡುತ್ತಿದ್ದಿತು. 'ಬೆಳವಣಿಗೆ'ಯೇ ಪರಿಸರಕ್ಕೆ ಹಾನಿ ಉಂಟುಮಾಡುತ್ತಿದ್ದಾಗ ಮತ್ತಷ್ಟು ಬೆಳವಣಿಗೆ ಪ್ರಶ್ನಾರ್ಥಕವಾಗಿಯೇ ಉಳಿಯುತ್ತಿದ್ದಿತು.

**ಪುಷ್ಟಿದಾಯಕ ಬೆಳವಣಿಗೆ (ಸಸ್ಟೈನಬಲ್ ಡೆವಲಪ್‌ಮೆಂಟ್)**

ಹಾಗಾಗಿ ವಿಕಾಸಶೀಲ ದೇಶಗಳಲ್ಲಿ 'ಪುಷ್ಟಿದಾಯಕ ಬೆಳವಣಿಗೆ' ಎಂಬ ಹೊಸ ಪ್ರಕಲ್ಪನೆಯೊಂದು ಅಸ್ತಿತ್ವಕ್ಕೆ ಬಂದಿತು. ಇದೇ ಇಂದು ಈ ದೇಶಗಳಲ್ಲಿ 'ಬೆಳವಣಿಗೆ' ಹಾಗೂ 'ಪರಿಸರ ರಕ್ಷಣೆ'ಯ ಮೂಲ ಸೂತ್ರವಾಗಿದೆ. ಇದು ಇಂದಿನ ಪೀಳಿಗೆಯ ಆವಶ್ಯಕತೆಗಳನ್ನು ತೃಪ್ತಿಪಡಿಸುವ ಹೊತ್ತಿನಲ್ಲೇ ಭಾವಿ ಪೀಳಿಗೆಗಳ ಹಿತಗಳನ್ನು ರಕ್ಷಿಸುವಂತಹುದಾಗಿದೆ. ಇದರ ಜೊತೆಗೇ 'ಪುನರ್‌ನವೀಕರಿಸಬಲ್ಲ ನೈಸರ್ಗಿಕ ಸಂಪನ್ಮೂಲಗಳು' ಎಂಬ ಪ್ರಕಲ್ಪನೆಯೂ ಅಸ್ತಿತ್ವಕ್ಕೆ ಬಂದಿತು. ಇದು ನೈಸರ್ಗಿಕ ಸಂಪನ್ಮೂಲಗಳ ಬಳಕೆಯನ್ನು ಅವುಗಳನ್ನು ಪುನರುಜ್ಜೀವನಗೊಳಿಸಬಹುದಾದ ಮಿತಿಗಳೊಳಗೇ ನಡೆಸಬೇಕೆಂದು ನಿಗದಿಪಡಿಸಿತು. ಹಾಗಾಗಿ ಈ ಸಂಪನ್ಮೂಲಗಳು ಭಾವೀ ಜನಾಂಗಗಳ ಬಳಕೆಗೆ ಇಲ್ಲವಾಗುವುದು ತಪ್ಪಿತು. ಬಳಕೆಯಿಂದ ಪೂರ್ತಿ ಬರಿದಾಗಿಬಿಡುವಂಥ ಸಂಪನ್ಮೂಲಗಳ ವಿಷಯದಲ್ಲಿ ಹೇಳುವುದಾದರೆ, ಹಾಗೆ ಬಳಸಿ ಲಭಿಸಿದ ಫಲದಲ್ಲಿ ಒಂದು ಭಾಗವನ್ನು ಭಾವೀ ಪೀಳಿಗೆಗಳಿಗೆ ಉಪಯೋಗವಾಗುವಂಥ ವಿಭಾಗಗಳಲ್ಲಿ ತೊಡಗಿಸಬೇಕು, ಎಂದು ನಿಗದಿಪಡಿಸಲಾಯಿತು.

'ಪುಷ್ಟಿದಾಯಕ ಬೆಳವಣಿಗೆ'ಯ ಗುರಿ ಈಡೇರಬೇಕಾದರೆ ಅವುಗಳ ಬೆಲೆಗಳನ್ನು ಪರಿಸರ ಕಾಳಜಿಗಳನ್ನು ಗಮನದಲ್ಲಿಟ್ಟುಕೊಂಡು ಗೊತ್ತುಮಾಡಬೇಕು. ಸಂಪನ್ಮೂಲಗಳ ಬೆಲೆಗಳು ಶ್ರಮ, ತಯಾರಿಕೆ, ಸಾರಿಗೆ ಮತ್ತು ಅಂತಹುವೇ ಇತರ ವೆಚ್ಚಗಳನ್ನಷ್ಟೇ ಅಲ್ಲ, ಪರಿಸರ ವೆಚ್ಚಗಳನ್ನೂ ವ್ಯಕ್ತಪಡಿಸುವಂತಿರಬೇಕು. ಪರಿಸರ ವೆಚ್ಚಗಳು ಎರಡು ರೂಪದಲ್ಲಿರುತ್ತವೆ : ಒಂದು, ಮಾಲಿನ್ಯ, ಭಾವೀ ಪೀಳಿಗೆಗಳಿಗೆ ಅಲಭ್ಯವಾಗುವಂತೆ ಇಂದಿನ ಪೀಳಿಗೆಗಳು ಉಪಯೋಗಿಸುವ ಸಂಪನ್ಮೂಲಗಳು, ಮತ್ತು ಎರಡು, ಇವುಗಳಂಥ ಋಣಾತ್ಮಕ ಬಾಹ್ಯರೂಪ (ಸಮಾಜದ ಮೇಲೆ ಪರಿಣಾಮ).

ಸಂಪನ್ಮೂಲಗಳನ್ನು ಬಳಕೆದಾರರಿಗೆ ಉಚಿತವಾಗಿ ಇಲ್ಲವೇ ತಯಾರಿಕೆಯ ವೆಚ್ಚಗಳನ್ನು ಗಣನೆಗೆ ತಾರದೆ ಅಗ್ಗವಾಗಿ ಒದಗಿಸಿದಲ್ಲಿ ಆಗ ಗ್ರಾಹಕರಲ್ಲಿ ಆವಶ್ಯಕತೆಗಿಂತ ಹೆಚ್ಚಿನ ಪ್ರಮಾಣಗಳಲ್ಲಿ ಪದಾರ್ಥಗಳನ್ನು ಬಳಸುವ ಪ್ರವೃತ್ತಿ ಉಂಟಾಗುತ್ತದೆ. ಪದಾರ್ಥಗಳ ಬೆಲೆಗಳನ್ನು ಸರಿಯಾಗಿ ನಿರ್ಣಯಿಸುವುದು ಇಂತಹ ದುರ್ಬಳಕೆ ಪ್ರವೃತ್ತಿಯನ್ನು ತಪ್ಪಿಸುತ್ತದೆ. ಅದೇ ರೀತಿ ಇತಿಮಿತಿ ಇಲ್ಲದ ಸಹಾಯಧನ ನೀಡಿಕೆಯೂ (ಸಬ್ಸಿಡಿ) ಪದಾರ್ಥಗಳ ವ್ಯರ್ಥಬಳಕೆಗೆ ದಾರಿ ಮಾಡಿಕೊಡುತ್ತದಷ್ಟೆ ಅಲ್ಲ, 'ಪುಷ್ಟಿದಾಯಕ ಬೆಳವಣಿಗೆ'ಗೆ ಕಂಟಕಪ್ರಾಯವೂ ಆಗುತ್ತದೆ. ಉದಾಹರಣೆಗೆ, ರಸಗೊಬ್ಬರಗಳಿಗೆ ಸಹಾಯಧನ ನೀಡುವುದು ಹೊಲಗಳಲ್ಲೇ ಲಭಿಸುವ ಪ್ರಾಕೃತಿಕ ಗೊಬ್ಬರಗಳಿಗಿಂತ ರಾಸಾಯನಿಕ ಗೊಬ್ಬರಗಳನ್ನೇ ಹೆಚ್ಚಾಗಿ ಬಳಸುವಂತೆ ರೈತರನ್ನು ಪ್ರೇರಿಸುತ್ತದೆ. ಅದೇ ರೀತಿ ನೀರಾವರಿಗಾಗಿ ನೀಡುವ ಸಹಾಯಧನವು ಪ್ರಶಸ್ತ ನೀರಿನ ದುರ್ಬಳಕೆಗೆ ದಾರಿ ಮಾಡಿಕೊಡುತ್ತದೆ. ಹಾಗಾಗಿ ಕೃಷಿ ಕಾರ್ಯದಲ್ಲಿ ತೊಡಗಿಸುವ ಪದಾರ್ಥಗಳಿಗೆ ಸಹಾಯಧನ ನೀಡುವ ಬದಲು ಬೆಳೆದ ಕೃಷಿ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ನಿಗದಿಪಡಿಸಿದಲ್ಲಿ ರೈತರಿಗೆ ಧನಾನುಕೂಲತೆ ಲಭಿಸಿದಂತಾಗುತ್ತದಷ್ಟೆ ಅಲ್ಲ ಸಹಾಯಧನವುಳ್ಳ ಪದಾರ್ಥಗಳ ಮಿತಿಮೀರಿದ ಬಳಕೆಯೂ ತಪ್ಪುತ್ತದೆ. ಎಲ್ಲ ವೆಚ್ಚಗಳನ್ನೂ ಒಳಗೊಳ್ಳುವಂತೆ ಸಂಪನ್ಮೂಲಗಳಿಗೆ ಸರಿಯಾದ ಬೆಲೆ ನಿರ್ಧರಿಸುವುದು ಹೆಚ್ಚು ಪರಿಶುದ್ಧ ಯಂತ್ರಕಲಾ ವಿಕಾಸಕ್ಕಷ್ಟೆ ಅಲ್ಲ ಪರಿಸರ ವೆಚ್ಚಗಳನ್ನು ಕಡಿಮೆ ಮಾಡುವ ಅಭ್ಯಾಸಗಳಿಗೂ ನೆರವಾಗುತ್ತದೆ. ಇದಿಲ್ಲದಿದ್ದರೆ 'ಪುಷ್ಟಿದಾಯಕ ಬೆಳವಣಿಗೆ' ಸಾಧಿಸಲು ಯಾವುದೇ ಉತ್ತೇಜನ ಇಲ್ಲದಂತಾಗುತ್ತದೆ.

**ಮಾಲಿನ್ಯಕಾರನ ಮೇಲೆ ದಂಡ ಹಾಕುವುದು**

ಮಾಲಿನ್ಯಕಾರನೇ ದಂಡ ನೀಡುವಂತೆ ಮಾಡುವುದು 'ಪುಷ್ಟಿದಾಯಕ ಬೆಳವಣಿಗೆ'ಯನ್ನು ಸಾಧಿಸಲು ಹೆಚ್ಚು ಸಹಕಾರಿ. ಪ್ರಸ್ತುತದಲ್ಲಿ ಈ ದಂಡವನ್ನು ಇತರರಿಂದ ವಸೂಲು ಮಾಡಲಾಗುತ್ತಿದೆ. ಆದ್ದರಿಂದಲೇ ಇದಕ್ಕೆ ಋಣಾತ್ಮಕ ಬಾಹ್ಯರೂಪಿ ವೆಚ್ಚಗಳೆಂದು ಹೇಳಲಾಗುತ್ತಿದೆ. ಮಾಲಿನ್ಯವನ್ನು ತಪ್ಪಿಸುವ ಅಥವಾ ಶಾಸನ ಗೊತ್ತುಪಡಿಸಿದ ಮಿತಿಗಳೊಳಗೇ ಅದು ಇರುವಂತೆ ಮಾಡುವ ವೆಚ್ಚವನ್ನು ಪದಾರ್ಥದ ಉತ್ಪಾದಕನೇ ಹೊರಬೇಕು. ಅವನು ಉಂಟುಮಾಡಿದ ಮಾಲಿನ್ಯಕ್ಕೆ ತುತ್ತಾದ ಇತರರಿಗೆ ಅವನೇ ಪರಿಹಾರ ಧನವನ್ನು ಸಂಪೂರ್ಣವಾಗಿ ನೀಡುವಂತಾಗಬೇಕು. ಕೇವಲ ಹೆಸರಿನಲ್ಲಿ ನೀಡಿಕೆಯಲ್ಲ, ಆದರೆ ಅದರಿಂದಾಗಿ ಆರೋಗ್ಯಕ್ಕುಂಟಾದ ನಷ್ಟ, ವೃತ್ತಿ ನಾಶ, ಜೀವನೋಪಾಯ ನಷ್ಟ ಇವೆಲ್ಲವನ್ನೂ ಅವನೇ ಭರಿಸುವಂತಾಗಬೇಕು.

ನೈಸರ್ಗಿಕ ಸಂಪನ್ಮೂಲಗಳನ್ನು ಕುಗ್ಗಿಸುವವನೇ ದಂಡ ತೆರುವಂತಾಗಬೇಕು. ಮುಂದಿನ ಪೀಳಿಗೆಗಳಿಗೆ ಸಂಪನ್ಮೂಲಗಳು ಲಭ್ಯವಿಲ್ಲದಂತೆ ಮಾಡುವ ಇಂದಿನ ಪೀಳಿಗೆಯೇ ಸಂಪನ್ಮೂಲಗಳ ಪುನರ್‌ನಿರ್ಮಾಣದ ವೆಚ್ಚ ಹೊರಬೇಕು. ಉದಾಹರಣೆಗೆ, ಖನಿಜದ ಅದುರುಗಳನ್ನೇ ತೆಗೆದುಕೊಳ್ಳಿ. ಅದುರು ತೆಗೆಯುವ ವೆಚ್ಚ ಯಾವ ರೂಪದಲ್ಲಿರಬೇಕೆಂದರೆ, ಮುಂದಿನ ಪೀಳಿಗೆಗಳು ಹೆಚ್ಚು ಆಳವಾದ ಗಣಿಗಳಿಂದ, ಹೆಚ್ಚು ಅಲಭ್ಯ ಆಕರಗಳಿಂದ ಅದುರುಗಳನ್ನು ತೆಗೆಯಲು ಅದು ಸಹಕಾರಿಯಾಗಿರಬೇಕು ಅಥವಾ ಕುಗ್ಗಿದ ಸಂಪನ್ಮೂಲಗಳಿಗೆ ಬದಲಿ ಸಂಪನ್ಮೂಲಗಳನ್ನು ಕಂಡುಹಿಡಿಯುವುದಕ್ಕೆ, ಅದಕ್ಕಾಗಿ ಸಂಶೋಧನೆ ನಡೆಸುವುದಕ್ಕೆ ತಗಲುವ ವೆಚ್ಚವನ್ನು ಅದು ಭರಿಸುವಂತಿರಬೇಕು.

ಯಾವುದೇ ಆರ್ಥಿಕ ಪ್ರಾಯೋಜನೆಯನ್ನು ಕೈಗೊಂಡಾಗ ಅದು ಆರ್ಥಿಕವಾಗಿ ಎಷ್ಟು ಸಮರ್ಥನೀಯ ಎಂಬುದರ ಮೌಲ್ಯ ನಿರ್ಣಯವಾಗಬೇಕಷ್ಟೆ. ಇದಕ್ಕಾಗಿ ನಿರ್ಮಾಣಕಾರ್ಯಗಳಿಗೆ ತಗಲುವ ನೇರ ವೆಚ್ಚಗಳನ್ನಷ್ಟೆ ಅಲ್ಲ, ಋಣಾತ್ಮಕ ಬಾಹ್ಯರೂಪಿ ವೆಚ್ಚಗಳನ್ನೂ, ಅಂದರೆ, ನಿರ್ವಸತಿಗೊಂಡ ಜನರಿಗೆ ವಸತಿ ಸೌಲಭ್ಯ, ಕುಗ್ಗಿದ ಸಂಪನ್ಮೂಲಗಳ ಭರ್ತಿವೆಚ್ಚ ಇತ್ಯಾದಿಗಳನ್ನೂ ಗಣನೆಗೆ ತಂದುಕೊಳ್ಳಬೇಕು, ಇಲ್ಲದಿದ್ದರೆ ಪರಿಣಾಮ ಪ್ರಯೋಜನಕಾರಿಯಾಗುವ ಬದಲು ವಿಪತ್ಕಾರಕವಾಗುತ್ತದೆ.

**ಜನತೆಯ ಸಹಕಾರ, ನೈತಿಕ ಬದ್ಧತೆ.....**

ಇದು ಸರಕಾರ ಮಾಡಬೇಕಾದ ಕಾರ್ಯವಷ್ಟೆ ಅಲ್ಲ. ಇಡೀ ಜನತೆ ಇದರಲ್ಲಿ ತೊಡಗಬೇಕು. ಜನರು ತಮ್ಮ ದೈನಂದಿನ ಜೀವನದಲ್ಲಿ ನೀರು, ವಿದ್ಯುಚ್ಛಕ್ತಿಗಳಂಥ ಸಂಪನ್ಮೂಲಗಳನ್ನು ತುಂಬ ಮಿತವ್ಯಯದಿಂದ ಬಳಸಬೇಕು. ವ್ಯರ್ಥವನ್ನು ತಪ್ಪಿಸಬೇಕು. ಜನರ ಸಹಕಾರದಿಂದಷ್ಟೆ ಪದಾರ್ಥಗಳ ಪುನರುಪಯೋಗ ಸಾಧ್ಯ. ಜನ ಬಯಸಿದರಷ್ಟೆ ನಗರ ಸ್ವಚ್ಛವಾಗಿರಬಲ್ಲುದು.

'ಪುಷ್ಟಿದಾಯಕ ಬೆಳವಣಿಗೆ' ಅಷ್ಟೇನೂ ಸುಲಭ ಸಾಧ್ಯವಲ್ಲ. ಅದಕ್ಕೆ ಇಡೀ ಜನತೆಯ ನೈತಿಕ ಬದ್ಧತೆ ಅತ್ಯವಶ್ಯ. ರೈತರು, ರಾಜಕಾರಣಿಗಳು, ವಿಜ್ಞಾನಿಗಳು, ಅಧ್ಯಾಪಕರು, ತಂತ್ರಜ್ಞರು, ಒಟ್ಟಿನಲ್ಲಿ ಸಾಮಾನ್ಯರಿಂದ ಹಿಡಿದು ಗಣ್ಯರವರೆಗೆ ಎಲ್ಲರೂ ಇದರಲ್ಲಿ ಪಾಲ್ಗೊಳ್ಳಬೇಕು. ಶಾಸನದಿಂದಷ್ಟೆ ಆಗುಮಾಡಲು ಸಾಧ್ಯವಿಲ್ಲ. ಪರಿಸರ ಶಿಕ್ಷಣ, ಜನ ಜಾಗೃತಿ ಬಹುಮುಖ್ಯ.

ಪರಿಸರ ಹಾನಿ ತಪ್ಪಬೇಕು ಎಂಬ ಬಗೆಗೆ ವಿಕಾಸಶೀಲ ದೇಶಗಳಲ್ಲೂ ಬಹುಮಟ್ಟಿಗೆ ಒಪ್ಪಿಗೆ ಇದ್ದರೂ ಕೆಲವು ವಿದ್ವಾಂಸರು ಇದಕ್ಕೆ ಸಂಬಂಧಿಸಿ ಕೆಲವು ಪರಿಮಿತಿಗಳನ್ನು ವ್ಯಕ್ತಪಡಿಸಿದ್ದಾರೆ. ಅಂತರರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯಲ್ಲಷ್ಟೆ ಅಲ್ಲ ಅಂತರರಾಷ್ಟ್ರೀಯ ಪರಿಸರ ವ್ಯವಸ್ಥೆಯಲ್ಲೂ ಅಸಮತೆ ಇದೆ. ಪರಿಸರ ಹಾನಿ ಆಗುತ್ತಿರುವುದು ಅಧಿಕಸಂಖ್ಯಾತ ಜನರಿಂದಲ್ಲ, ಆದರೆ ಮೇಲ್ವರ್ಗದ ಕೆಲವೇ ಶ್ರೀಮಂತ ಜನರಿಂದ, ಎಂಬುದು ಇವರ ವಾದ. ಉದಾಹರಣೆಗೆ, ಇಂದು ಪ್ರಪಂಚದಲ್ಲಿ ವಾತಾವರಣದ ಉಷ್ಣತೆ ಹೆಚ್ಚುತ್ತಿರುವುದು ಇಂಧನಗಳಿಂದ ಹೊರಹೊಮ್ಮುವ ಕಾರ್ಬನ್ ಡೈ ಆಕ್ಸೈಡ್‌ನಿಂದಷ್ಟೆ. ಭಾರತದ ಜನಸಂಖ್ಯೆ ಅಮೆರಿಕದ ಜನಸಂಖ್ಯೆಗಿಂತ ೩.೬ರಷ್ಟು ಹೆಚ್ಚಿದ್ದರೂ, ೧೯೯೬ರಲ್ಲಿ ಅಮೆರಿಕದಲ್ಲಿ ಕಾರ್ಬನ್ ಡೈ ಆಕ್ಸೈಡ್‌ನ ಮಾಲಿನ್ಯ ಭಾರತದಲ್ಲಿದ್ದುದಕ್ಕಿಂತ ೫.೩ ಪಟ್ಟು ಹೆಚ್ಚಾಗಿದ್ದಿತು. ಏಕೆಂದರೆ ಜನಸಂಖ್ಯೆಯ ತಲಾ ಒಂದರ ಲೆಕ್ಕದಲ್ಲಿ ಅಮೆರಿಕದಲ್ಲಿ ಕಾರ್ಬನ್ ಡೈ ಆಕ್ಸೈಡ್‌ನ ಹೊರ ಸೂಸಿಕೆ ಭಾರತದಲ್ಲಿದ್ದುದರ ೧೮.೨ರಷ್ಟು ಹೆಚ್ಚಿದ್ದಿತು. ಹಾಗಾಗಿ ಕಾರ್ಬನ್ ಡೈ ಆಕ್ಸೈಡ್‌ನ ಉತ್ಸರ್ಜನವನ್ನು ಕಡಿಮೆ ಮಾಡುವ ಹೊಣೆಗಾರಿಕೆ ವಿಕಸಿತ ದೇಶಗಳದ್ದಷ್ಟೆ ಅಲ್ಲವೇ ?

ನಿಜ, ಆದರೂ ಪರಿಸ್ಥಿತಿ ಬದಲುತ್ತಿದೆ. ವಿಕಾಸಶೀಲ ದೇಶಗಳೂ ವಿಕಸಿತ ದೇಶಗಳ ಆರ್ಥಿಕೋನ್ನತಿಯ ಮಾರ್ಗವನ್ನೇ ಅಂಥದೇ ಜೀವನ ಶೈಲಿಯನ್ನೇ ಅನುಸರಿಸಹೊರಟಿವೆ. ಹಾಗಾಗಿ ವಿಕಾಸಶೀಲ ದೇಶಗಳು ಜನರ ಆದಾಯದ ಮಟ್ಟಗಳಲ್ಲಿ ವಿಕಸಿತ ದೇಶಗಳ ಸರಿಸಮ ಬರದೇ ಇದ್ದರೂ, ಕಾರ್ಬನ್ ಡೈ ಆಕ್ಸೈಡ್ ಮಾಲಿನ್ಯದ ಮಟ್ಟದಲ್ಲಿ ಸರಿಸಮ ಬರುತ್ತಿವೆ, ಕೆಲವೊಮ್ಮೆ ಮೀರಿಯೂ ಮುಂದುವರೆದಿವೆ. ಉದಾಹರಣೆಗೆ, ೧೯೮೦ರಲ್ಲಿ ಭಾರತದಲ್ಲಿ ಜನಸಂಖ್ಯೆಯ ತಲಾ ಒಂದರ ಲೆಕ್ಕದಂತೆ ಕಾರ್ಬನ್ ಡೈ ಆಕ್ಸೈಡ್‌ನ ಉತ್ಸರ್ಜನ ೦.೫ ಮೆಟ್ರಿಕ್ ಟನ್‌ನಷ್ಟು ಕಡಿಮೆ ಪ್ರಮಾಣದಲ್ಲಿದ್ದರೆ, ಅಮೆರಿಕದಲ್ಲಿ ೨೦.೧ ಮೆಟ್ರಿಕ್ ಟನ್‌ನಷ್ಟಿದ್ದಿತು. ಹದಿನಾರು ವರ್ಷಗಳ ನಂತರ, ೧೯೯೬ರಲ್ಲಿ ಈ ಸಂಖ್ಯೆ

ಭಾರತದಲ್ಲಿ ೧.೧ ಮೆಟ್ರಿಕ್ ಟನ್‌ಗಳಿಗೆ ಏರಿದರೆ, ಅಮೆರಿಕದಲ್ಲಿ ೨೦ ಮೆಟ್ರಿಕ್ ಟನ್‌ಗಳಿಗೆ ಇಳಿಯಿತು. ೧೯೮೦ರಲ್ಲಿ ಜಗತ್ತಿನ ಒಟ್ಟು ಕಾರ್ಬನ್ ಡೈ ಆಕ್ಸೈಡ್ ಉತ್ಸರ್ಜನೆಯಲ್ಲಿ ಅಲ್ಪ ಆದಾಯಮಟ್ಟದ ದೇಶಗಳ ಪಾಲು ಶೇ. ೧೬.೫ರಷ್ಟಾಗಿದ್ದರೆ, ಕೇವಲ ೧೬ ವರ್ಷಗಳ ನಂತರ ೧೯೯೬ರಲ್ಲಿ, ಇದು ಶೇ. ೨೩.೪ಕ್ಕೆ ಏರಿತು.

ಹಾಗಾಗಿ ವಾತಾವರಣ ಉಷ್ಣತೆ ಏರಿಕೆ ಹಾಗೂ 'ಕಂದು' ಮಾಲಿನ್ಯ ಸಮಸ್ಯೆಗಳಿಗೆ ನಾವು ಎಷ್ಟು ಮಾತ್ರವೂ ಜವಾಬ್ದಾರರಲ್ಲವೆಂದು ವಿಕಾಸಶೀಲ ದೇಶಗಳು ಇನ್ನೆಷ್ಟು ಮಾತ್ರವೂ ಹೇಳಲಾರವು. ವಾತಾವರಣದ ಉಷ್ಣತೆ ಏರಿಕೆ ವಿಕಸಿತ ದೇಶಗಳಿಗಷ್ಟೆ ಬಾಧಕವೆಂದೂ ಹೇಳಲಾಗದು. ಉಷ್ಣತೆ ಏರಿಕೆಯಿಂದಾಗಿ ವಿಕಾಸಶೀಲ ದೇಶಗಳ ಅನೇಕ ಕರಾವಳಿ ಪ್ರದೇಶಗಳೂ ದ್ವೀಪಗಳೂ ಮುಳುಗಿಹೋಗುವ ಸಂಭವ ಇದ್ದೇ ಇದೆ.

ಪರಿಸರಕ್ಕೆ ಸಂಬಂಧಿಸಿ ವಿಕಸಿತ ದೇಶಗಳಲ್ಲಿ ವ್ಯಕ್ತಪಡಿಸಲಾಗುತ್ತಿರುವ ಕಾಳಜಿಗಳು 'ತುಂಬಿದ ಹೊಟ್ಟೆಯ ಪರಿಸರವಾದ'ವಾದರೆ, ವಿಕಾಸಶೀಲ ದೇಶಗಳ ಕಾಳಜಿಗಳು 'ಖಾಲಿಹೊಟ್ಟೆಯ ಪರಿಸರವಾದ' ಎಂದು ಕೆಲವು ವಿದ್ವಾಂಸರು ಎರಡರ ನಡುವೆಯೂ ಭಿನ್ನತೆ ಕಾಣುತ್ತಾರೆ. ವಿಕಾಸಶೀಲ ದೇಶಗಳಲ್ಲಿ ಅದು ಬದುಕಿನ ಸಮಸ್ಯೆಗಳಿಗೆ ನಿಕಟವಾಗಿ ಸಂಬಂಧಿತವಾಗಿದ್ದರೆ ವಿಕಸಿತ ದೇಶಗಳಲ್ಲಿ ಆರೋಗ್ಯ, ಮನರಂಜನೆ ಹಾಗೂ ವೈಜ್ಞಾನಿಕ ಸಂಶೋಧನೆಗಳಿಗೆ ಸಂಬಂಧಿತವಾಗಿದೆ ಎಂದವರು ವಾದಿಸುತ್ತಾರೆ.

ನಿಜ, ಬದುಕಿನ ಸಮಸ್ಯೆಗಳಿಗೆ ನಾವು ಹೆಚ್ಚಿನ ಗಮನ ನೀಡಬೇಕೆನ್ನುವುದರಲ್ಲಿ ಸಂದೇಹವಿಲ್ಲ. ಕೈಗಾರಿಕೆಗಳಿಗಾಗಿ ಕಾಡುಗಳ ಯದ್ವಾತದ್ವಾ ಬಳಕೆ ಕಾಡನ್ನೇ ಬದುಕಿನ ಆಸರೆಯನ್ನಾಗಿ ಮಾಡಿಕೊಂಡಿರುವ ಜನರಿಗೆ ಹಾನಿ ಉಂಟುಮಾಡುತ್ತದೆ. ನದಿ ಅಥವಾ ಸಮುದ್ರದ ನೀರು ಮಾಲಿನ್ಯಗೊಂಡು ಮೀನುಗಳು ಸತ್ತಾಗ ಮೀನುಗಳನ್ನೇ ಅಗ್ಗದ ಆಹಾರ ಆಕರವನ್ನಾಗಿ ಮಾಡಿಕೊಂಡ ಜನರು ಬಾಧಿತರಾಗುತ್ತಾರೆ. ಅದೇ ರೀತಿ ಅಂತರ್ಜಲ ಮಾಲಿನ್ಯಗೊಂಡಾಗ ಸಾಮಾನ್ಯ ಜನ ತಮ್ಮ ಲಾಭದಾಯಕ ನೌಕರಿಯನ್ನು ಬಿಟ್ಟುಕೊಟ್ಟು ಕುಡಿಯುವ ನೀರಿಗಾಗಿ ದೂರ ದೂರ ಪ್ರದೇಶಗಳಿಗೆ ಅಲೆದುಕೊಂಡು ಹೋಗುವ ಪರಿಸ್ಥಿತಿ ಉಂಟಾಗುತ್ತದೆ.

ಆದರೂ ಜೈವ ವೈವಿಧ್ಯತೆಯ ಸಂರಕ್ಷಣೆ, ಓಜೋನ್ ಸ್ತರ ಕುಗ್ಗುವುದನ್ನು ತಪ್ಪಿಸುವುದು, ವಾತಾವರಣ ಉಷ್ಣತೆಯ ಏರಿಕೆಯನ್ನೂ ವಾಯು ಹಾಗೂ ಜಲಮಾಲಿನ್ಯವನ್ನೂ ನಿಯಂತ್ರಿಸುವುದು – ಇವು ವಿಕಾಸಶೀಲ ದೇಶಗಳಿಗೆ ಸಂಬಂಧಿಸಿದವಲ್ಲವೆಂದೇನೂ ಹೇಳಲಾಗದು. ವಾಸ್ತವವಾಗಿ ವಾತಾವರಣ ಉಷ್ಣತೆ ಏರಿಕೆಯಲ್ಲಿ ವಿಕಾಸಶೀಲ ದೇಶಗಳ ಪಾತ್ರವೇ ಈಚೀಚೆಗೆ ಹೆಚ್ಚುತ್ತಿದೆ. ಜೈವ-ವೈವಿಧ್ಯತೆಯ ಸಂರಕ್ಷಣೆ ವಿಕಸಿತ ದೇಶಗಳ ಗಣ್ಯ ಜನರ ಕಾಳಜಿಯಷ್ಟೆ ಎಂದು ಹೇಳಲಾಗದು. ವಿಕಾಸಶೀಲ ದೇಶಗಳಲ್ಲಿ ಜೈವ ವೈವಿಧ್ಯತೆಯು ಆರ್ಥಿಕೋನ್ನತಿಗೆ ಚಿನ್ನದ ಗಣಿಯಂತಾಗಬಹುದು. ಅದನ್ನು ಎಚ್ಚರಿಕೆಯಿಂದ ಬಳಸುವುದು ನಮ್ಮ ಬುದ್ಧಿವಂತಿಕೆಗೆ ಬಿಟ್ಟುದು. ಓಜೋನ್ ಸ್ತರ ಕುಗ್ಗುವುದು ವಿಕಸಿತ ದೇಶಗಳಲ್ಲಷ್ಟೆ ಅಲ್ಲ ವಿಕಾಸಶೀಲ ದೇಶಗಳಲ್ಲೂ ಜನರಿಗೆ ಅರ್ಬುದ ರೋಗ ಬರುವುದಕ್ಕೆ ಕಾರಣವಾಗಬಹುದು. ಆದ್ದರಿಂದ ನಮ್ಮ ಆದಾಯ ಕಮ್ಮಿ ಹಾಗೂ ಬಡತನ ಹೆಚ್ಚು ಎಂದು ಹೇಳಿ ನಾವು ಜವಾಬ್ದಾರಿಯಿಂದ ನುಣುಚಿಕೊಳ್ಳಲಾರೆವು.

ವಿಕಸಿತ ದೇಶಗಳು ಕೈಗಾರಿಕೀಕರಣದ ಯೋಜನೆಗಳನ್ನು ಕೈಗೊಂಡಾಗ ಪರಿಸರ ಮಾಲಿನ್ಯ ಮತ್ತಿತರ ಸಾಮಾಜಿಕ ಸಮಸ್ಯೆಗಳ ಕಡೆಗೆ ಗಮನ ನೀಡಲಿಲ್ಲವೆಂಬುದೂ ನಿಜವೇ. ಅವು ಆರ್ಥಿಕೋನ್ನತಿಯ ಉನ್ನತ ಮಟ್ಟಗಳನ್ನು ತಲುಪಲು ಅನೇಕ ಅನುಕೂಲತೆಗಳನ್ನು ಹೊಂದಿದ್ದವು. ಅವು ಮಾಲಿನ್ಯ ನಿಯಂತ್ರಣಕ್ಕಾಗಿಯೂ ಪರಿಸರ ಅವನತಿ ಮತ್ತಿತರ ನಾನಾ ರೂಪಗಳ ನೈಸರ್ಗಿಕ ದುಷ್ಪರಿಣಾಮಗಳನ್ನು ತಪ್ಪಿಸುವುದಕ್ಕಾಗಿಯೂ ಪ್ರತ್ಯೇಕ ಹಣ ವೆಚ್ಚ ಮಾಡಬೇಕಾಗಿರಲಿಲ್ಲ. ಶ್ರಮಜೀವಿಗಳ ಹಕ್ಕುಗಳ ಮನ್ನಣೆಗಾಗಿ ಹೆಚ್ಚಿನ ಖರ್ಚು ಮಾಡಬೇಕಾಗಿರಲಿಲ್ಲ. ಇವೆಲ್ಲದರ ಜೊತೆಗೆ ಅವುಗಳಿಗೆ ವಸಾಹತುಗಳಿಂದ ಅಗ್ಗದ ಕಚ್ಚಾ ಪದಾರ್ಥಗಳನ್ನು ಕೊಳ್ಳೆ ಹೊಡೆಯುವ ಹಾಗೂ ಆ ದೇಶಗಳಿಗೆ ತಮ್ಮಲ್ಲಿ ತಯಾರಾದ ದುಬಾರಿಯ ಸಿದ್ಧ ವಸ್ತುಗಳನ್ನು ಸರಬರಾಜು ಮಾಡಿ ಲಾಭ ಗಳಿಸುವ ಅನುಕೂಲತೆಯೂ ಇದ್ದಿತು. ಇಂದು ವಿಕಾಸಶೀಲ ದೇಶಗಳಿಗೆ ಇವಾವ ಅನುಕೂಲಗಳೂ ಇಲ್ಲವಷ್ಟೆ ಅಲ್ಲ ಅವುಗಳ ಯತ್ನಗಳು ತುಂಬ ಪರಿಶ್ರಮಪೂರ್ಣವಾಗಿವೆ. ಹಾಗಾಗಿ ಈ ದೇಶಗಳಿಗೆ ಬಡತನ ಹಾಗೂ ಪರಿಸರ ಅವನತಿಗಳ ವಿರುದ್ಧ ಹೋರಾಡಲಷ್ಟೆ ಅಲ್ಲ, ಒಟ್ಟಿನ ಮೇಲೆ ಅವುಗಳ ಆರ್ಥಿಕೋನ್ನತಿಯ ಯತ್ನಗಳಿಗೆ ಉದಾರವಾದ ಸಹಾಯ ನೀಡುವುದು ವಿಕಸಿತ ದೇಶಗಳ ನೈತಿಕ ಹೊಣೆಯಾಗಿದೆ. ಅವು ಈ ದೇಶಗಳಿಗೆ ಯಂತ್ರಕಲೆಯನ್ನು ಸುಲಭ ಷರತ್ತುಗಳ ಮೇಲೆ ವರ್ಗಾಯಿಸಬೇಕಷ್ಟೆ ಅಲ್ಲ ಜೈವ ವೈವಿಧ್ಯತೆಯ ರಕ್ಷಣೆಯಲ್ಲಿ ಅವು ಮಾಡಬೇಕಾದ ಖರ್ಚುಗಳಿಗಾಗಿ ಪರಿಹಾರ ಧನವನ್ನೂ ಒದಗಿಸಬೇಕು. ಇದರಿಂದ ವಿಕಸಿತ ದೇಶಗಳಿಗೂ ಅನುಕೂಲ ಉಂಟೆಂದು ಬೇರೆ ಹೇಳಬೇಕಾಗಿಲ್ಲ.

ಅದೃಷ್ಟವಶಾತ್ ವಿಕಸಿತ ದೇಶಗಳಲ್ಲಿ ಈ ಬಗೆಗೆ ಹೆಚ್ಚಿನ ತಿಳಿವಳಿಕೆ ಉಂಟಾಗಿದೆ. ಆದರೆ ಅದು ಕಾರ್ಯರೂಪಕ್ಕೆ ಬರಬೇಕಷ್ಟೆ. ಭಾರತವು ೨೧ನೆಯ ಶತಮಾನವನ್ನು ಹೆಚ್ಚು ವಿಶ್ವಾಸದೊಂದಿಗೆ ಪ್ರವೇಶಿಸಿದೆ. ನಮ್ಮ ಬೆಳವಣಿಗೆಯ ದರಗಳು ಹೆಚ್ಚಿವೆಯಷ್ಟೆ ಅಲ್ಲ ಆರ್ಥಿಕೋನ್ನತಿಯ ಸ್ವರೂಪವೂ ಬದಲಿದೆ. ವಸ್ತುಗಳ ಉತ್ಪಾದನೆಯ ಮೇಲಿದ್ದ ಒತ್ತು ಈಗ ಸಮಾಚಾರ ತಂತ್ರಜ್ಞಾನವನ್ನೂ ಒಳಗೊಂಡಂತೆ ಸೇವಾ ಕಾರ್ಯಗಳನ್ನು ಒದಗಿಸುವುದಕ್ಕೆ ವರ್ಗಾವಣೆಯಾಗಿದೆ. ಇದರಿಂದ ಪರಿಸರಕ್ಕೆ ಆಗುವ ಹಾನಿ ತುಲನಾತ್ಮಕವಾಗಿ ತಗ್ಗಿದೆ. ಜನರ ನಡುವೆ ಅಷ್ಟೆ ಅಲ್ಲ ಸರಕಾರಗಳಲ್ಲೂ ಪರಿಸರ ಪ್ರಜ್ಞೆ ಹೆಚ್ಚಿದೆ. ಹೆಚ್ಚು ಪರಿಶುದ್ಧವೆನಿಸುವಂಥ ಯಂತ್ರಕಲೆ ತುಂಬ ಸುಧಾರಿಸಿದೆ. ಜೈವ ತಂತ್ರಜ್ಞಾನದಲ್ಲಾಗಿರುವ ಕ್ರಾಂತಿ ರಸಗೊಬ್ಬರ ಹಾಗೂ ಕ್ರಿಮಿನಾಶಕಗಳ ಮೇಲಿನ ಅವಲಂಬನೆಯನ್ನು ತಗ್ಗಿಸಿದೆ. ಇದರಿಂದ ಕೃಷಿಕಾರ್ಯ ಹೆಚ್ಚು ಪುಷ್ಟಿದಾಯಕವೂ ಕಡಿಮೆ ಹಾನಿಕಾರಕವೂ ಆಗಿದೆ.

ಆದರೂ ೨೧ನೆಯ ಶತಮಾನದ ಈ ಎರಡು ದಶಕಗಳಲ್ಲಿ ನಾವು ಎರಡು ವಲಯಗಳ ಕಡೆಗೆ ಹೆಚ್ಚಿನ ಗಮನ ನೀಡಬೇಕಾಗಿದೆ. ಅವೆಂದರೆ – ನಗರಗಳಲ್ಲಿ ಹೆಚ್ಚುತ್ತಿರುವ ಜನಸಂದಣಿ, ಕಸ ಮತ್ತು ಕೊಳಚೆ ಪದಾರ್ಥಗಳ ಸಂಚಯ, ಅಂತರ್ಜಲ ಸಂಪನ್ಮೂಲಗಳ ಕುಗ್ಗಿಕೆ ಹಾಗೂ ಮಾಲಿನ್ಯ. ಈ ಸಮಸ್ಯೆಗಳನ್ನು ಸರಕಾರಗಳಷ್ಟೆ ಪರಿಹರಿಸಲು ಸಾಧ್ಯವಿಲ್ಲವಾದುದರಿಂದ ಜನತೆಗಳ ಸಹಕಾರವೂ ಅತ್ಯಗತ್ಯವಾಗಿದೆ.

ಕೊನೆಯಲ್ಲಿ ಒಂದು ವಿಷಯವನ್ನು ಎತ್ತಿ ಹೇಳಬೇಕು. ಪರಿಸರ ಸಮಸ್ಯೆಗಳ ಆರ್ಥಿಕ ಹಾಗೂ ರಾಜಕೀಯ ಸ್ವರೂಪಗಳನ್ನು ಅರ್ಥಮಾಡಿಕೊಳ್ಳುವುದು ಇಂದು ಹೆಚ್ಚಿನ ಅಗತ್ಯವಾಗಿದೆ. ಏಕೆಂದರೆ ಪರಿಸರ ಸಮಸ್ಯೆಗಳು ಕೇವಲ ಶುದ್ಧ ತಾಂತ್ರಿಕ ಸ್ವರೂಪದವಷ್ಟೆ ಅಲ್ಲ. ಅವುಗಳಿಗೆ ಸಾಮಾಜಿಕ ಆಯಾಮಗಳೂ ಉಂಟು. ಅವನ್ನು ಅರ್ಥ ಮಾಡಿಕೊಂಡು ನಿಷ್ಠೆಯಿಂದ ಶ್ರದ್ಧೆಯಿಂದ ಅವುಗಳ ಪರಿಹಾರಕ್ಕೆ ಎಲ್ಲರೂ - ವಿಕಸಿತ ಹಾಗೂ ವಿಕಾಸಶೀಲ ದೇಶಗಳೆಲ್ಲವೂ - ಕಾರ್ಯೋನ್ಮುಖವಾಗಬೇಕಾಗಿದೆ.

**(ಆಧಾರ : ಫೆಬ್ರವರಿ ೬, ೨೦೦೧ರಂದು ಔರಂಗಾಬಾದ್‌ನಲ್ಲಿ ಜರುಗಿದ [illegible] ಬಾಬಾಸಾಹೇಬ್ ಅಂಬೇಡ್ಕರ್ ಮರಾಠವಾಡ ವಿಶ್ವವಿದ್ಯಾನಿಲಯದ ೪೨ನೆಯ ವಾರ್ಷಿಕ ಘಟಿಕೋತ್ಸವ ಸಮಾರಂಭದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಗಳು ಮಾಡಿದ ಭಾಷಣ)**

**ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

## ಸುದ್ದಿ ಚಿತ್ರ

## ಸೂಪರ್‌ಕ್ಲೋನ್ ಬಿಡುಗಡೆ



ನವಕರ್ನಾಟಕ ಪ್ರಕಟಿಸಿರುವ ಸೂಪರ್‌ಕ್ಲೋನ್ ಕೃತಿಯನ್ನು ಪುಣೆಯ ಮರಾಠಿ-ಕನ್ನಡ ಸ್ನೇಹವರ್ಧಕ ಮಂಡಲ ಏರ್ಪಡಿಸಿದ್ದ ಸಮಾರಂಭದಲ್ಲಿ ಬಿಡುಗಡೆ ಮಾಡಲಾಯಿತು. ಮರಾಠಿಯ ಪ್ರಸಿದ್ಧ ವೈಜ್ಞಾನಿಕ ಕಥಾಸಾಹಿತ್ಯ ಲೇಖಕ ಪಂಡಿತ ವಿದ್ಯಾಸಾಗರರ ಕೃತಿಯನ್ನು ಶ್ರೀ ಚಂದ್ರಕಾಂತ ಪೋಕಳೆ ಕನ್ನಡಕ್ಕೆ ಅನುವಾದಿಸಿದ್ದಾರೆ. ಖ್ಯಾತ ಮರಾಠಿ-ಕನ್ನಡ ಲೇಖಕ ಶ್ರೀ ಎ. ಎಸ್. ತೋರೋ ಪುಸ್ತಕ ಬಿಡುಗಡೆ ಮಾಡಿದರು. ಪಂಡಿತ ವಿದ್ಯಾಸಾಗರರಲ್ಲದೆ ಅನೇಕ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

# ಹೊಳೆ ದಾಟಿದ ಮೇಲೆ...

ಬಟ್ಟ ಬಯಲಿನಲ್ಲಿ ಹರಿಯುವ ನದಿಗಿಂತ ಬೆಟ್ಟ, ಕಾಡುಗಳ ಮಧ್ಯೆ ಹರಿಯುವ ನದಿಗೆ ವಿಶೇಷವಾದ ಸೊಬಗು, ಗಾಂಭೀರ್ಯ ಪ್ರಾಪ್ತವಾಗುತ್ತದೆ. ಎತ್ತರದಿಂದ ಧುಮುಕುವಾಗಲಂತೂ ಅದಕ್ಕೆ ರುದ್ರ ರಮಣೀಯ ಎಂಬ ವಿಶೇಷಣ ಸೇರಿಕೊಳ್ಳುತ್ತದೆ. ಕೊಡಗಿನಲ್ಲಿ ಹುಟ್ಟಿ ಮಾರ್ಗದುದ್ದಕ್ಕೂ ಪ್ರಕೃತಿಯ ಸೊಬಗನ್ನು ಸವಿಯುತ್ತ ಹರಿಯುವ ಪಯಸ್ವಿನಿಗೆ ಈ ಎಲ್ಲ ವಿಶೇಷಣಗಳೂ ಸಲ್ಲುತ್ತವೆ. ಇದರ ಮತ್ತೊಂದು ವೈಶಿಷ್ಟ್ಯವೆಂದರೆ, ಕರ್ನಾಟಕದಲ್ಲಿ ಪಯಸ್ವಿನಿಯಾಗಿರುವ ಇದು ಗಡಿ ದಾಟಿ ಕೇರಳ ತಲುಪಿದಾಗ 'ಚಂದ್ರಗಿರಿ' ಹೊಳೆಯಾಗುತ್ತದೆ !

ಸುಳ್ಯದಲ್ಲಿರುವ ಕವಿಮಿತ್ರ ಕಿರಣರಿಗೆ ಅದರ ಬಗ್ಗೆ 'ನಮ್ಮ ಪಯಸ್ವಿನಿ' ಎನ್ನುವಷ್ಟು ಆತ್ಮೀಯತೆ. 'ಅದು ತುಂಬಿ ಹರಿಯುವಾಗ ನೀವು ಬರಬೇಕು !' ಎನ್ನುತ್ತಾರೆ. ಪಯಸ್ವಿನಿಯ ಸೊಬಗನ್ನು ದೂರದಲ್ಲಿರುವ ನನ್ನಂಥವನೂ ನೋಡಬೇಕೆಂಬುದು ಅವರ ಹಂಬಲ. ಅಲ್ಲಿಗೆ ಹೋದಾಗ ಪಯಸ್ವಿನಿ ದಡದಲ್ಲಿ ಒಂದು ತಿರುಗಾಟದ ಕಾರ್ಯಕ್ರಮ ಇರಲೇಬೇಕು ! ಕಳೆದ ಸಲ, ನಾವಿಬ್ಬರೇ ನೋಡಿದರೆ ಸಾಲದು ಎನ್ನಿಸಿ ಚೊಕ್ಕಾಡಿಯ ಕವಿಮಿತ್ರರಿಗೆ ದೂರವಾಣಿ ಮೂಲಕ ಆದೇಶ ಹೊರಡಿಸಿ ಅವರನ್ನೂ ಬರಮಾಡಿದರು.

ಸುಳ್ಯದವರೆಗೂ ಹರಿದುಬರುವ ಪಯಸ್ವಿನಿ ಮತ್ತೆ ಎಡಕ್ಕೆ ಹೊರಳಿ ಗುಡ್ಡಗಳ ಮಧ್ಯೆ ಮರೆಯಾಗುತ್ತದೆ. ನಾವು ಮೂವರು ಸ್ವಲ್ಪ ದೂರ ಬಸ್ಸಿನಲ್ಲಿ ಪ್ರಯಾಣ ಮಾಡಿ ಬೆನ್ನು ರಿಪೇರಿ ಮಾಡಿಸಿಕೊಂಡೆವು! ಅಲ್ಲೊಂದು ಕಡೆ, ಕೇರಳದ ಗಡಿಯಕಡೆ ತಿರುಗುವ ರಸ್ತೆಯಲ್ಲಿ ಮತ್ತೊಂದು ಬಸ್ಸಿಗಾಗಿ ಕಾಯುತ್ತಿದ್ದಾಗ, ಕವಿಗಳ ಗೆಳೆಯರಾದ ಸ್ಥಳೀಯ ಎಂಜಿನಿಯರೊಬ್ಬರು ನಮ್ಮ ಮುಂದೆ ಕಾರು ನಿಲ್ಲಿಸಿ ಬಾಗಿಲು ತೆರೆದರು. ಅವರು ತೂಗು ಸೇತುವೆಗಳ ನಿರ್ಮಾಣದಲ್ಲಿ ಪರಿಣತರಂತೆ. ಕ್ಷೇಮ ಸಮಾಚಾರದ ಜೊತೆಗೆ ಸಾಹಿತ್ಯಾಭಿರಾಮ ಮಾಡುತ್ತ ನಮ್ಮನ್ನು ಪಂಜಿಕಲ್ಲು ಎಂಬಲ್ಲಿ ಇಳಿಸಿದರು.



ಅಲ್ಲಿ ನದಿ ವಿಸ್ತಾರವಾಗಿ ನಿಧಾನ ಗತಿಯಲ್ಲಿ ಹರಿಯುತ್ತದೆ. ಅದೊಂದು ಹಾಯ್ಗಡವೂ ಹೌದು. ನದಿಯ ಎರಡೂ ಬದಿಗಳಲ್ಲಿ ಅಡಿಕೆ, ತೆಂಗಿನ ತೋಟಗಳು, ಬತ್ತದ ಗದ್ದೆಗಳು. ದೋಣಿ ನೋಡಿದ ಕೂಡಲೇ ಕಿರಣರಿಗೆ ತಾನು ಅವರೆಗೆ ದೋಣಿಯಲ್ಲಿ ಕಾಲಿರಿಸಿದ್ದೇ ಇಲ್ಲ ಎಂಬುದು ನೆನಪಾಯಿತು ! ಅವರ ಜೀವಮಾನದ ಮೊದಲ ದೋಣಿ ಪ್ರಯಾಣದಲ್ಲಿ ನಾವೂ ಸಂತೋಷದಿಂದ ಭಾಗವಹಿಸಿದೆವು.

ಮುಡೂರು ಗ್ರಾಮದ ದೋಣಿಗಾರ ಅಬ್ದುಲ್ಲ ಗಟ್ಟಿ ಮುಟ್ಟಾದ ಯುವಕ. ದೋಣಿ ಸಂಚಾರಿಗಳ, ಮುಖ್ಯವಾಗಿ ನದಿ ದಾಟಿ ಶಾಲೆಗಳಿಗೆ ಹೋಗಿಬರುವ ಮಕ್ಕಳ, ಸ್ನೇಹಿತ. ನಮ್ಮ ಸಂಭ್ರಮಕ್ಕೆ ಭಂಗ ಉಂಟಾಗದಂತೆ ನಿಧಾನವಾಗಿ ಹುಟ್ಟು ಹಾಕತೊಡಗಿದ. ಆಗ ಕವಿ ಗೆಳೆಯರ ತಲೆಯಲ್ಲಿ ಕವಿತೆಯ ಸಾಲುಗಳು ಮೂಡುತ್ತಿದ್ದಿರಬಹುದು. ನನಗೆ ಅಬ್ದುಲ್ಲರ ಬಗ್ಗೆ ತಿಳಿದುಕೊಳ್ಳುವ ಕುತೂಹಲವಾಯಿತು.

ಬೇಸಗೆಯಲ್ಲಿ ನೀರು ಬತ್ತಿ ಹೋದಾಗ ಕೆಲವು ಸ್ಥಳಗಳಲ್ಲಿ ನಡೆಯುತ್ತ ನದಿ ದಾಟಬಹುದು. ಆದರೆ ಮಳೆಗಾಲ ಪ್ರಾರಂಭವಾದ ಕೂಡಲೇ ದೋಣಿಯೇ ಗತಿ. ಸಾಮಾನ್ಯವಾಗಿ ಮೇ-ಜೂನ್‌ನಿಂದ ನವೆಂಬರ್‌ವರೆಗೆ ದೋಣಿಯ ಅಗತ್ಯ ಹೆಚ್ಚು. ಕೆಲವು ದಿನಗಳಲ್ಲಿ ಹಗಲು ಇಡೀ ಬಿಡುವಿಲ್ಲದ ದುಡಿಮೆ. ಮತ್ತೆ ಕೆಲವು ದಿನ ಜನರಿಗಾಗಿ ಕಾಯುತ್ತ ಕೂಡುವ ಕೆಲಸ. ರಾತ್ರಿಯ ಹೊತ್ತು ಅಬ್ದುಲ್ಲರನ್ನು ಅರಸಿ ಬರುವ ಗಿರಾಕಿಗಳೂ ಉಂಟು. ನದಿಯಲ್ಲಿ ತುಂಬು ಪ್ರವಾಹ ಬಂದಾಗ ದೋಣಿ ಸಂಚಾರ ನಿಲ್ಲಿಸುವುದು ಅನಿವಾರ್ಯವಾಗುತ್ತದೆ. ನೆರೆ ಸ್ವಲ್ಪ ಇಳಿದ ನಂತರ ಮತ್ತೆ ಅಬ್ದುಲ್ಲರ ದೋಣಿ ಸರ್ವೀಸ್ ಪ್ರಾರಂಭವಾಗುತ್ತದೆ.

ದೋಣಿ ಮತ್ತೊಬ್ಬ ಮಾಲೀಕರದು. ದಿನಕ್ಕೆ ೨೦೦ ರೂ. ಬಾಡಿಗೆ. ಊಟ, ಟೀ ಖರ್ಚು ಕಳೆದು ಸುಮಾರು ನೂರು ರೂಪಾಯಿ ದಿನಕ್ಕೆ ದುಡಿಯಬಹುದು.

''ಸಾಲ ಹೇಳುವ ಗಿರಾಕಿಗಳು ಉಂಟೋ?''

''ಇದ್ದೇ ಇರುತ್ತಾರೆ ಸಾರ್ ! ಎಲ್ಲರೂ ಪರಿಚಿತರು. ಬಹಳ ಸ್ಟ್ರಿಕ್ಟ್ ಮಾಡಲು ಸಾಧ್ಯವಿಲ್ಲ. ಇನ್ನು ಶಾಲೆಯ ಮಕ್ಕಳು ಬರುತ್ತಾರೆ. ಕೆಲವರ ಬಳಿ ಕೆಲವು ದಿನ ಕಾಸಿರುವುದಿಲ್ಲ.....''

''ಲೆಕ್ಕ ಇಟ್ಟುಕೊಂಡು ವಸೂಲು ಮಾಡುತ್ತೀರಾ?''

''ಒಂದೆರಡು ಸಲ ರಿಯಾಯಿತಿ ತೋರಿಸಬಹುದು. ಹೆಚ್ಚಿನವರು ನೆನಪು ಮಾಡಿಕೊಂಡು ಬಾಕಿ ತೀರಿಸುತ್ತಾರೆ.''

ನಮ್ಮ ಮಾತಿನ ಮಧ್ಯೆ ಒಬ್ಬ ಪ್ರಯಾಣಿಕ ಆಚೆ ಬದಿಗೆ ಹೋಗಲು ದೋಣಿ ಹತ್ತಿದ. ಅಬ್ದುಲ್ಲ ನಮ್ಮ ಬಗ್ಗೆ ವಿಚಾರಿಸಿ ತಿಳಿದುಕೊಂಡರು. ದೋಣಿ ಹೊರಟಿತು ಎನ್ನುವಾಗ ಕಂಕುಳಲ್ಲಿ ಕೊಡೆ ಇರಿಸಿಕೊಂಡ ಹೆಂಗಸೊಬ್ಬಳು ''ಹೋಯ್ ನಿಲ್ಲಿಯಯ್ಯ....'' ಎನ್ನುತ್ತ ದೋಣಿಯ ಕಡೆಗೆ ಓಡುತ್ತ ಬಂದಳು.

ರಸ್ತೆಯ ಕಡೆ ಹೊರಡುವ ಮುನ್ನ ನನ್ನ ಡೈರಿಯಲ್ಲಿ 'ಹೊಳೆ ದಾಟಿದ ಮೇಲೆ....' ಎಂದು ಗುರುತು ಹಾಕಿಕೊಂಡೆ. 'ಅಂಬಿಗನ ಹಂಗೇನು!' ಎಂದು ಹಳೆಯ ಗಾದೆಯನ್ನು ಪೂರ್ತಿಗೊಳಿಸುವುದಿಲ್ಲ. ಹೊಳೆ ದಾಟಿದ ಮೇಲೂ ಅಂಬಿಗನನ್ನು ಮರೆಯಬಾರದಲ್ಲವೆ?

*- ಕೆ. ಪಿ. ಸ್ವಾಮಿ*

## ಸಾದರ ಸ್ವೀಕಾರ

**ಸುಪ್ರಸಿದ್ಧ ಗಾದೆಗಳು ಮತ್ತು ವಿಸ್ತರಣೆ**
*ನಿರೂಪಣೆ : ನಾಗರತ್ನ ಹೆಮ್ಮಿಗೆ*
**ಪುಟ : ೬೦** **ಬೆಲೆ : ರೂ. ೧೨**

**ಕನ್ನಡ ಬರುತಿದೆ ದಾರಿ ಬಿಡಿ** (ಪದ್ಯ ಸಂಕಲನ)
ನಾ. ಗೀತಾಚಾರ್ಯ
**ಪುಟ : ೬೪** **ಬೆಲೆ : ರೂ. ೨೫**
**ಸಿರಿಗನ್ನಡ ಪ್ರಕಾಶನ**, ನಂ. ೧೩, ೧ನೇ ಕ್ರಾಸ್
ಕಸ್ತೂರಿನಗರ, ಬೆಂಗಳೂರು - ೫೬೦ ೦೨೩

**ಕುವೆಂಪು ಅವರ ಶೂದ್ರ ತಪಸ್ವಿ ಮತ್ತು ಶ್ಮಶಾನ ಕುರುಕ್ಷೇತ್ರ**, ರಂಗಪಠ್ಯ : *ಜೆ. ಎಸ್. ಶಿವರುದ್ರಪ್ಪ*
**ಪುಟ : ೧೧೨** **ಬೆಲೆ : ರೂ. ೩೦**
**ರಾಷ್ಟ್ರಕವಿ ಕುವೆಂಪು ವಿಚಾರ ವೇದಿಕೆ**, ನಂ. ೭೨
ಡಾ|| ಎ. ಆರ್. ಕೃಷ್ಣಶಾಸ್ತ್ರಿ ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪

**ಅಪೂರ್ವ** (ಮಕ್ಕಳ ನಾಟಕ) *ಆರ್. ಕೆ. ಶಾನಭೋಗ*
**ಪುಟ : ೭೨** **ಬೆಲೆ : ರೂ. ೪೦**
**ನಿರ್ಮಲ ಪ್ರಕಾಶನ**, ೯೫೭, ಸಂತೋಷ ಸಾಗರ,
ಗೋವಿನಪುರ ಬಡಾವಣೆ, ತಿಪಟೂರು - ೫೭೨ ೨೦೨

**ನಿತ್ಯ ಆನಂದ ವಚನ** (ಮುಕ್ತಕಗಳು) *ಶಿಮುಂಜೆ ಪರಾರಿ*
**ಪುಟ : ೩೦** **ಬೆಲೆ : ರೂ. ೨೫**
**ಮನುಕುಲ ಪ್ರಕಾಶನ**, ೧೭, ಉಪಕ್ರಮ್, ಲಿಬರ್ಟಿ ಗಾರ್ಡನ್, ಮಾಲಾಡ್ (ಪ) ಮುಂಬಯಿ-೪೦೦ ೦೬೪

**ಪ್ರಾಣ ಪ್ರಪಂಚ** (ಹನಿಗವನಗಳ ಸಂಗ್ರಹ)
*ಪ್ರಾಣ್ ಎಂ. ಎ.*
**ಪುಟ : ೫೨** **ಬೆಲೆ : ರೂ. ೪೦**
**ರುಕ್ಮಿಣಿ ಪ್ರಕಾಶನ**, ಮೋದಿ ಆಸ್ಪತ್ರೆ ಹಿಂಭಾಗ,
ನಾಗಪುರ, ಬೆಂಗಳೂರು - ೫೬೦ ೦೮೬

**ಕಾಡಿನ ಕ್ರಿಕೆಟ್** (ಮಕ್ಕಳ ಪದ್ಯಗಳು) *ಬಿ. ತಿಪ್ಪೇರುದ್ರಪ್ಪ*
**ಪುಟ : ೪೨** **ಬೆಲೆ : ರೂ. ೨೫**
**ಚಾರು ಪ್ರಕಾಶನ**, ವಿದ್ಯಾನಗರ, ಚಿತ್ರದುರ್ಗ - ೨

**ಡಿಸೆಂಬರ್ - ೩೧** (ಕಥಾ ಸಂಕಲನ) *ಬಿ. ರಮೇಶ್*
**ಪುಟ : ೧೪೦** **ಬೆಲೆ : ರೂ. ೬೦**
**ಬಿ. ಆರ್. ನಾಗಲತ**, ಸ್ಕಂದ, ನಂ ೪೩,
ಸಹಕಾರಿ ತರಬೇತಿ ಕಾಲೇಜ್ ಹಿಂಭಾಗ,
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

**ಜೋಕುಲು ಬಾಲೆಲು** *(ತುಳು ನಾಟಕ)*
*ಮರಾಠಿ ಮೂಲ : ಅಶೋಕ ಪಾಟೋಳೇ*
ತುಳು ರೂಪಾಂತರ : *ಶಿಮುಂಜೆ ಪರಾರಿ*
**ಪುಟ : ೮೮** **ಬೆಲೆ : ರೂ. ೧೦೦**
**Rangadhwani,** 2/2, Gokul Angan, Krishna Township, Ambadi Road,
Vasai (W) Mumbai - 401 202

# ಕನ್ನಡಿಗರು 'ದ್ರಾವಿಡ'ರೆ?

ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿ

**ದ್ರಾ**ವಿಡ ಸಂಸ್ಕೃತಿ, ದ್ರಾವಿಡ ಭಾಷಾ ವಿಜ್ಞಾನ, ದ್ರಾವಿಡ ಮುನ್ನೇತ್ರ ಕಜಗಂ, ದ್ರಾವಿಡ ವಿಶ್ವವಿದ್ಯಾಲಯ - ಇಂತಹ ಪರಿಕಲ್ಪನೆಗಳು ನೂರೈವತ್ತು ವರ್ಷಗಳಿಂದೀಚೆಗೆ ದಟ್ಟವಾಗಿ ಕಾಣಿಸುತ್ತಿವೆ. ಇದು ಸ್ವಾಗತಾರ್ಹವೇ ಸರಿ. ಆದರೆ 'ದ್ರಾವಿಡ' ಎಂಬ ನಿರುಕ್ತದ ಅರ್ಥವನ್ನು ಈ ದಿನಗಳಲ್ಲಿಯಾದರೂ ಸರಿಯಾಗಿ ಗ್ರಹಿಸುವುದು ಸೂಕ್ತ ಎಂದು ಭಾವಿಸುತ್ತೇನೆ. ಇದಕ್ಕಾಗಿ ಸಾವಿರ ವರ್ಷಗಳ ಕನ್ನಡ ಸಾಹಿತ್ಯ-ಸಂಸ್ಕೃತಿಯಲ್ಲಿ ದ್ರಾವಿಡ ಎಂಬ ನಿರುಕ್ತ ಯಾವ ಅರ್ಥದಲ್ಲಿ ಬಳಕೆಯಾಗಿದೆ ಎಂಬುದನ್ನು ಪರಿಶೀಲಿಸುತ್ತಾ, ಅದರ ಇತಿ-ಮಿತಿಗಳನ್ನು ಪ್ರಸ್ತಾಪಿಸಲು ಇಚ್ಛಿಸುತ್ತೇನೆ.

ಸಮಕಾಲೀನ ಸಂದರ್ಭದಲ್ಲಿ ನಿಂತು ಕನ್ನಡಿಗರು ದ್ರಾವಿಡರೆ, ಎಂಬ ಪ್ರಶ್ನೆಯನ್ನು ಎತ್ತಿದರೆ ಕಣ್ಣಿನ ಎರಡೂ ಹುಬ್ಬುಗಳು ಪರಸ್ಪರ ಹತ್ತಿರ ಬರುವುದು ಸಹಜ. ಆದ್ದರಿಂದಲೇ 'ದ್ರಾವಿಡ' ಎಂಬ ನಿರುಕ್ತವನ್ನು ಆವರಣ ಸೂಚಕ ಚಿಹ್ನೆಯಲ್ಲಿ ಬಳಸಿರುವುದು.

**ದ್ರಾವಿಡ ಎಂದರೆ ಯಾರು ?**

ದ್ರಾವಿಡ ಎಂಬ ನಿರುಕ್ತ ನೇರವಾಗಿ ತಮಿಳು ಭಾಷೆ ಮತ್ತು ಅದರ ಸಂಸ್ಕೃತಿಯನ್ನು ಮಾತ್ರ ಕುರಿತದ್ದು. ಇದು ಸಾವಿರ ವರ್ಷಗಳ ಸತ್ಯ ಎಂಬುದು ಲೇಖನದ ಫಲಿತ ಮತ್ತು ಆಶಯವಾಗಿದೆ. ಈ ನಿಟ್ಟಿನಲ್ಲಿ 'ದ್ರಾವಿಡ' ಎಂಬ ನಿರುಕ್ತವು ತಮಿಳರನ್ನು ಹೊರತುಪಡಿಸಿದ ದಕ್ಷಿಣ ಭಾರತೀಯರ ನ್ನಾಗಲೀ ಭಾರತದ ಮೂಲನಿವಾಸಿಗಳೆಂದು ಹೇಳಲ್ಪಡುವ ಜನರನ್ನಾಗಲೀ ಅನುಲಕ್ಷಿಸಿದ್ದು ಅಲ್ಲ. ಇದಕ್ಕೆ ಪ್ರಾಚೀನ ಕಾಲದಿಂದಲೂ ಅನೇಕ ಆಧಾರಗಳು ಸಿಗುತ್ತವೆ. ಉದಾಹರಣೆಗೆ, ಹತ್ತನೆಯ ಶತಮಾನದ ಪಂಪನ ಕೃತಿಗಳು ತಮಿಳರನ್ನು ಮಾತ್ರ ದ್ರಾವಿಡರೆಂದು ಗುರುತಿಸುತ್ತವೆ. ಈ ಸಾಲಿನಲ್ಲಿ ಭಾರತದ ವಸಾಹತು ಕಾಲದವರೆಗಿನ ಬಹುತೇಕ ಕವಿಗಳು ನಿದರ್ಶನಗಳಾಗಿ ನಿಲ್ಲುತ್ತಾರೆ. ಅವರಲ್ಲಿ ವಿವಿಧ ಕಾಲಮಾನಗಳಿಗೆ ಪ್ರಾತಿನಿಧಿಕವಾಗಿ ಕೆಲವರನ್ನು ಪರಿಶೀಲಿಸಬಹುದು.

ಪಂಪ : ಕಾಶಿ ಕೌಸಲ ಕಳಿಂಗ ವಂಗ ಕಾಶ್ಮೀರ ಕರಹಾಟ
**ಕರ್ನಾಟ ಚೋಳ ಕೇರಳ .....ಆಂಧ್ರ..... ಪಲ್ಲವ**
**(ಆದಿಪುರಾಣ)**

'ಆದಿಪುರಾಣ' ಕಾವ್ಯದಲ್ಲಿ ಭರತನ ಸೈನ್ಯದಲ್ಲಿದ್ದ ವಿವಿಧ ದೇಶಗಳ ಸೈನ್ಯಗಳನ್ನು ಕುರಿತ ವರ್ಣನೆಯಲ್ಲಿ ಈ ಮಾತು ಬರುತ್ತದೆ. ಇಲ್ಲಿ ಆಂಧ್ರ ದೇಶವನ್ನು ಕುರಿತು ಆಂಧ್ರ ಎಂದೂ ಕೇರಳ ದೇಶವನ್ನು ಕುರಿತು ಕೇರಳ ಎಂದೂ ಕನ್ನಡ ದೇಶವನ್ನು ಕುರಿತು ಕರ್ನಾಟ ಎಂದೂ ಕವಿ ಸಂಬೋಧಿಸಿದ್ದಾನೆ. ಆದರೆ ತಮಿಳು ದೇಶವನ್ನು ಕುರಿತು ಚೋಳ ಮತ್ತು ಪಲ್ಲವ ಎಂದು ಸಂಬೋಧಿಸಿರುವುದು ಇಲ್ಲಿ ಗಮನಾರ್ಹ.

ಪಂಪನ ಮತ್ತೊಂದು ಕೃತಿಯಾದ 'ವಿಕ್ರಮಾರ್ಜುನ ವಿಜಯ'ದಲ್ಲಿ ಕವಿ ವಿವಿಧ ದೇಶಗಳ ಸೈನ್ಯಗಳನ್ನು ಪ್ರಸ್ತಾಪ ಮಾಡುತ್ತಾ ಅವುಗಳ ಹೆಸರುಗಳನ್ನು ಹೀಗೆ ಉಲ್ಲೇಖಿಸುತ್ತಾನೆ:

''ಮಗಧ ಸೌರಾಷ್ಟ್ರ ವರಾಟ ಲಾಟ ಕರ್ನಾಟ..... ಮಳಯ ಮಾಳವ
ನೇಪಾಳ... ಕಾಶಿ ಕಾಶ್ಮೀರ ಕೌಶಿಕಾಂಧ್ರ ದ್ರವಿಳ...''
(೯-೯೫)

ಇಲ್ಲಿಯೂ ಕರ್ನಾಟ, ಆಂಧ್ರ ಮತ್ತು ದ್ರವಿಳ (ದ್ರಾವಿಡ)ಗಳು ಪ್ರತ್ಯೇಕವಾಗಿಯೇ ಪ್ರಸ್ತಾಪ ಗೊಂಡಿರುವುದು ಗಮನೀಯವಾಗಿದೆ. ಇದಕ್ಕೆ ಪೂರಕವಾಗಿ ಇನ್ನೂ ಹಲವು ಆಧಾರಗಳನ್ನು ನೋಡಬಹುದು.

ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ.' ಇದರ ಕಾಲ ಸು. ೯೨೦-

''ಕುರುಜಾಂಗಣ ದ್ರವಿಳ ಲಾಳ ಕರ್ನ್ನಾಟ ಗೌಳ ಸುಹುಮ.....''

ನಾಗವರ್ಮನ ''ಛಂದೋಂಬುಧಿ.'' ಇದರ ಕಾಲ ಸು. ೯೯೦-

''ಕರ್ಣಾಟಾಂಧ್ರ ದ್ರವಿಡ ವರಾಟ.....''
(೧-೪೬ ಗದ್ಯ)

ಕರ್ಣಪಾರ್ಯನ 'ನೇಮಿನಾಥಪುರಾಣ.' ಇದರ ಕಾಲ ಸು. ೧೧೬೦-

''ಕರ್ಣಾಟಕ ಮಗಧ ಕಳಿಂಗಾಂಗ ಕಾಶ್ಮೀರ....
.... ಕೇಯೂರಾಂಧ್ರ ಲಾಟ ದ್ರಮಿಳ.....
(೧೩-೧೦೩)

ಗುಬ್ಬಿಯ ಮಲ್ಲಣಾರ್ಯನ 'ಭಾವಚಿಂತಾರತ್ನ.' ಇದರ ಕಾಲ ಸು. ೧೫೧೩-

''ಪ್ರಣವ ಪಂಚಾಕ್ಷರಿಯ ಮಹಿಮೆಯಂ ತಿಳಿಪೆ ಸ
ದ್ಗುಣಯಪ್ಪ ಸತ್ಯೇಂದ್ರ ಚೋಳ ಭೂಪನಾ ಕಥಾ
ಭಣಿತೆಯಂ ದ್ರಾವಿಡದೊಳೊರೆದುದಂ ಕನ್ನಡದಿ ಪೇಳ್ವೆನಾಲಿಸಿ ಸುಜನರು.

ನಂಜುಂಡ ಕವಿಯ 'ರಾಮನಾಥ ಚರಿತೆ.' ಇದರ ಕಾಲ ಸು. ೧೫೨೫-

ಅಳಿಯೆ ನೀನಾಂಧ್ರ ಕರ್ನಾಟ ದ್ರಾವಿಡ ಭೂತಳ
ತುಳುಮಳೆಯಾಳಗಳ
ತುಳಿವರು ಹೊಕ್ಕು ತುರುಕರು ಧರ್ಮಸ್ಥಿತಿಯಳಿವುದು
ಕುವರ ನಿನ್ನಾಣೆ.

ಈ ಎಲ್ಲಾ ಉಲ್ಲೇಖಗಳಲ್ಲಿ 'ದ್ರಾವಿಡ' ಎಂಬ ಶಬ್ದ ತಮಿಳರನ್ನು ಮಾತ್ರ ಅನುಲಕ್ಷಿಸಿ ಬಳಕೆಯಾಗಿರುವುದನ್ನು ಗಮನಿಸಬೇಕಾಗಿದೆ. ಇದರ ವ್ಯಾಪ್ತಿಯಿಂದ ಹೊರತಾಗಿ ಕರ್ನಾಟಕ, ಆಂಧ್ರ, ಕೇರಳಗಳು ಉಲ್ಲೇಖಗೊಂಡಿವೆ. ಇನ್ನೂ ಹಲವು ಕಾವ್ಯಗಳಲ್ಲಿ ದ್ರಾವಿಡ ಶಬ್ದದ ಜಾಗದಲ್ಲಿ ಚೋಳ ಎಂಬ ಶಬ್ದವೂ ಬಳಕೆಯಾಗಿದೆ. ಇದಕ್ಕೆ ಚೋಳ ಪ್ರಭುತ್ವವನ್ನು ಕುರಿತ ನಿಖರತೆಯೇ ಕಾರಣವಾಗಿದೆ.

ಅಂತಿಮವಾಗಿ ಆ ಚರ್ಚೆಯು ತೆಗೆದುಕೊಳ್ಳುವ ತೀರ್ಮಾನಕ್ಕೆ ಗುಬ್ಬಿಯ ಮಲ್ಲಣಾರ್ಯನ ಮಾತನ್ನು ಒಂದೆರಡು ವಾಕ್ಯಗಳಲ್ಲಿ ವಿಸ್ತರಿಸುತ್ತೇನೆ.

''ಸತ್ಯೇಂದ್ರ ಚೋಳ ಭೂಪನ ಕಥಾ ಭಣಿತೆಯಂ ದ್ರಾವಿಡದೊಳೊರೆದುದಂ'' ಎಂಬುದನ್ನು ಇನ್ನೂ ಸರಳವಾಗಿ ಗ್ರಹಿಸುವುದಾದರೆ, ''ಸತ್ಯೇಂದ್ರ ಚೋಳ ರಾಜನ ಕಥೆಯನ್ನು ದ್ರಾವಿಡ ಭಾಷೆಯಲ್ಲಿ ಹೇಳಿದ್ದನ್ನು....'' ಎಂದಾಗುತ್ತದೆ. ಇಲ್ಲಿ 'ದ್ರಾವಿಡದೊಳೊರೆದುದಂ' ಎಂದರೆ ತಮಿಳಿನಲ್ಲಿ ಹೇಳಿದ್ದನ್ನು ಎಂದು ತಾನೆ ಅರ್ಥ ?

ಹೀಗೆ ಪ್ರಾಚೀನ ಕಾಲದಿಂದಲೂ ವಸಾಹತು ಕಾಲವನ್ನು ಪ್ರವೇಶಿಸುವವರೆಗಿನ ಕೃತಿಗಳಲ್ಲಿ ದ್ರಾವಿಡ ಎಂಬುದು 'ತಮಿಳು' ಎಂಬ ಅರ್ಥದಲ್ಲಿ ಮಾತ್ರ ಬಳಕೆಯಾಗಿರುವುದು ವೇದ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ 'ದ್ರಾವಿಡ ಭಾಷಾ ವಿಜ್ಞಾನ' ಎಂದರೆ, ಅದು 'ತಮಿಳು ಭಾಷಾ ವಿಜ್ಞಾನ' ಎಂದೇ ಆಗಿಬಿಡುತ್ತದೆ. ಕಾರಣ, ಇದುವರೆಗಿನ ಚರ್ಚೆಯೇ ಹೇಳುವಂತೆ 'ದ್ರಾವಿಡ' ಎಂಬುದು ತಮಿಳನ್ನು ಹೊರತುಪಡಿಸಿದ ದಕ್ಷಿಣ ಭಾರತದ ವ್ಯಾಪ್ತಿಯನ್ನು ಕುರಿತಂತೆಯಾಗಲೀ ಅಥವಾ ಭಾರತದ ಮೂಲನಿವಾಸಿಗಳನ್ನು ಕುರಿತಂತೆಯಾಗಲೀ ಎಲ್ಲಿಯೂ ಬಳಕೆಗೊಂಡಿಲ್ಲ. ಇದಕ್ಕೆ ಪೋಷಕವಾಗಿ ತಮಿಳು ಸಾಹಿತ್ಯ ಚರಿತ್ರೆಯೂ ಇದೆ.

ಮು. ವರದರಾಜನ್ ಅವರು ಬರೆದಿರುವ 'ತಮಿಳು ಸಾಹಿತ್ಯ ಚರಿತ್ರೆ'ಯಲ್ಲಿ 'ದ್ರಾವಿಡ' ನಿರುಕ್ತವನ್ನು ಕುರಿತ ಪದ ನಿಷ್ಪತ್ತಿ ಚರ್ಚೆಗೆ ಬಂದಿದೆ. ಅದರ ಪ್ರಕಾರ 'ದ್ರಾವಿಡ' ಎಂಬುದು 'ತಮಿಳು' ಎಂಬ ಶಬ್ದದಿಂದ ನಿಷ್ಪನ್ನಗೊಂಡಿದೆ ಎಂಬುದು ಒಂದು ವಾದವಾಗಿದೆ (ತಮಿಳು-ದ್ರಾವಿಡ-ದ್ರಮಿಳ-ದ್ರವಿಡ-ದ್ರಾವಿಡ). ಮತ್ತೊಂದು ವಾದದ ಪ್ರಕಾರ ತಮಿಳು ಎಂಬ ಶಬ್ದವೇ 'ದ್ರಾವಿಡ'ದಿಂದ ನಿಷ್ಪನ್ನಗೊಂಡಿದೆ ಎಂಬುದು. ಈ ಎರಡು ವಾದಗಳಲ್ಲಿ ಮೊದಲನೆಯದಕ್ಕೆ ಹೆಚ್ಚು ಪುಷ್ಟಿ ದೊರೆತಿದೆ ಎಂದು ತಮಿಳು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಏನೇ ಆದರೂ ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ದ್ರಾವಿಡ ಮತ್ತು ತಮಿಳು ಎಂಬುವು ಅಭಿನ್ನ ಎಂಬುದನ್ನು ತಮಿಳು ವಿದ್ವಾಂಸರ ಮೂಲಕವೇ ಸಾಬೀತುಗೊಳಿಸಿದಂತಾಯಿತು.

**ತಪ್ಪು ಆಗಿದ್ದು ಯಾವಾಗ ?**

ಹೀಗೆ ಪರಂಪರೆಯ ಉದ್ದಕ್ಕೂ ತಮಿಳರನ್ನು ಕುರಿತು ಮಾತ್ರ ಬಳಕೆಯಾಗುತ್ತಾ ಬಂದ 'ದ್ರಾವಿಡ' ಶಬ್ದದ ವ್ಯಾಪ್ತಿಗೆ ಕನ್ನಡಿಗರು ಸೇರಿದ್ದು ಯಾವಾಗ ? ಎಂಬ ಪ್ರಶ್ನೆ ಇಲ್ಲಿ ಸಹಜವಾಗಿಯೇ ಮೂಡುತ್ತದೆ. ಇದಕ್ಕೆ ಉತ್ತರವನ್ನು ಶಂಬಾ ಜೋಶಿ ಅವರು ಒಂದೆಡೆಯಲ್ಲಿ ಹೀಗೆ ನೀಡುತ್ತಾರೆ : ''ಇವರಿಗೆಲ್ಲ (ದಕ್ಷಿಣ ಭಾರತೀಯರಿಗೆಲ್ಲ) ದ್ರವಿಡರೆಂದು ಹೇಳುವ ತಿಳಿಗೇಡಿತನವನ್ನು ಮೊದಲು ಮಾಡಿದವನು ಹರ್ಬರ್ಟ್ ರಿಸ್ಲೆ.'' ಇವನಾಡಿದ ಈ ಮಾತು ಇತಿಹಾಸಕ್ಕೊಂದು ತಿರುವಾಗುತ್ತದೆ. ಪರಿಣಾಮವಾಗಿ ಈಗಲೂ ದಕ್ಷಿಣ ಭಾರತೀಯರನ್ನು 'ಮದ್ರಾಸಿ ವಾಲಾ' ಎಂದು ಉತ್ತರ ಭಾರತದವರು ಕರೆಯುವುದನ್ನು ಇಲ್ಲಿ ಸ್ಮರಿಸಬಹುದು.

ಹೀಗೆ ಹರ್ಬರ್ಟ್ ರಿಸ್ಲೆ ಹೇಳಿದ ಒಂದು ಸುಳ್ಳು ಅಥವಾ ತಪ್ಪನ್ನೇ ಮುಂದೆ ಬಂದ ಎಲ್ಲಾ ವಿದ್ವಾಂಸರೂ

ನಿಜವೆಂದು ಭಾವಿಸಿ, ■ ದಿಕ್ಕಿನಲ್ಲಿಯೇ ಮುಂದುವರೆದರು. ಆ ತಪ್ಪು, ಸತ್ಯದ ವೇಷ ಧರಿಸಿ ವ್ಯಾಪಕವೂ ಆಯಿತು. ಭಾಷಾ ವಿಜ್ಞಾನಿಗಳಾದಿಯಾಗಿ ಸಮಸ್ತರೂ ಕನ್ನಡಿಗರನ್ನು ದ್ರಾವಿಡರೆಂದೇ ಸಂಬೋಧಿಸುವಂತಾಯಿತು. ಕನ್ನಡಿಗರ ಹಾಗೆ ಆಂಧ್ರದವರೂ ಕೇರಳೀಯರೂ ಅಸತ್ಯವನ್ನೇ ಪರಿಪಾಲಿಸುವಂತಾಯಿತು. ಇದರ ವ್ಯಾಪಕತೆ ಇಂದು ಕತ್ತಲನ್ನು ಅಕ್ಷರಶಃ ಬೆಳಕೆಂದೇ ಭ್ರಮಿಸುವಂತಾಗಿದೆ.

ನನ್ನ ಈ ಅಧ್ಯಯನಕ್ಕೆ ಮತ್ತು ಆಧಾರಗಳನ್ನೊಳಗೊಂಡ ತರ್ಕಬದ್ಧ ಈ ನಿರೂಪಣೆಗೆ ಪ್ರೇರಣೆ ನೀಡಿದವರು ಶಂಬಾ ಜೋಶಿ ಮತ್ತು ಆಲೂರ ವೆಂಕಟರಾಯರು. ಶಂಬಾ ಅವರು ನೀಡಿದ ಸುಳಿವನ್ನು ಈಗಾಗಲೇ ಪ್ರಸ್ತಾಪಿಸಿದ್ದೇನೆ. ಇನ್ನು ಆಲೂರರು ನೀಡಿದ ಸುಳಿವು ಹೀಗಿದೆ : ದೇಶಕ್ಕೆ ಸ್ವಾತಂತ್ರ್ಯ ಬಂದಾಗ ರವೀಂದ್ರನಾಥ ಠಾಕೋರರ ಪದ್ಯವೊಂದನ್ನು ರಾಷ್ಟ್ರಗೀತೆಯನ್ನಾಗಿ ಸ್ವೀಕರಿಸಲಾಯಿತು. ಅದರಲ್ಲಿ ಕವಿ ''ಪಂಜಾಬ, ಸಿಂಧು, ಗುಜರಾತ, ಮರಾಠ, ದ್ರಾವಿಡ, ಉತ್ಕಲ, ವಂಗ.......'' ಹೀಗೆ ಹಲವು ಉಪರಾಷ್ಟ್ರೀಯತೆಯ ಪ್ರದೇಶಗಳ ಉಲ್ಲೇಖಗಳನ್ನು ತರುತ್ತಾರೆ. ಇದರಲ್ಲಿ ಬಂದಿರುವ 'ದ್ರಾವಿಡ' ಎಂಬ ಶಬ್ದವು ತಮಿಳರನ್ನು ಮಾತ್ರ ಕುರಿತದ್ದು ಎಂಬುದನ್ನು ಅರಿತಿದ್ದ ಆಲೂರರು ■ ಸನ್ನಿವೇಶದಲ್ಲಿ ರಾಷ್ಟ್ರಗೀತೆಯಲ್ಲಿ 'ಕರ್ನಾಟಕ' ಶಬ್ದವನ್ನು ಸೇರ್ಪಡೆಗೊಳಿಸಬೇಕೆಂದು ಕೇಂದ್ರ ಸರ್ಕಾರವನ್ನು ಆಗ್ರಹಪಡಿಸಿದರು. ಆದರೆ ಈ ಮಾತು ಕನ್ನಡಿಗರಿಗೇ ನಾಟದಿದ್ದ ■ ಸಂದರ್ಭದಲ್ಲಿ ಕೇಂದ್ರವೂ ಕಿವುಡಾಯಿತು. ಅಂತಿಮವಾಗಿ ತಮ್ಮ ಮೊರೆಗೆ ತೀವ್ರ ಪ್ರತಿಕ್ರಿಯೆ ಬಾರದೆ, ನೈಜ ಅಭಿಪ್ರಾಯಕ್ಕೆ ಸೋಲೂ ಆಯಿತು.

ಆದರೆ ಅಲ್ಲಿ ಬಳಕೆಯಾಗಿರುವ 'ದ್ರಾವಿಡ' ಶಬ್ದದ ಮೂಲಕ ಇಡೀ ದಕ್ಷಿಣ ಭಾರತವನ್ನು ವಿವಕ್ಷಿಸಲಾಗಿದೆ ಎಂದು ಠಾಕೋರರಾಗಲೀ ಕೇಂದ್ರ ಸರ್ಕಾರವಾಗಲೀ ಅಥವಾ ಇನ್ನಾರೆ ಹೇಳಿದರೂ ಅಲ್ಲಿ ಸತ್ಯದ ಬೆಳಕಿನಲ್ಲಿ ವಾಸ್ತವ ಕರ್ನಾಟಕ ಮಾತ್ರ ಇಲ್ಲ ಎಂಬುದು ಸತ್ಯವೇ ಆಗುತ್ತದೆ.

ಇಡೀ ಭಾರತದಲ್ಲಿ ಸಂಸ್ಕೃತ ಮತ್ತು ತಮಿಳನ್ನು ಹೊರತುಪಡಿಸಿದರೆ ಭಾಷೆ ಮತ್ತು ಸಂಸ್ಕೃತಿ ಪರಂಪರೆಗಳ ದೃಷ್ಟಿಯಿಂದ ಕನ್ನಡವೇ ಅತ್ಯಂತ ಪ್ರಾಚೀನ ಮತ್ತು ಶ್ರೀಮಂತ ಎಂಬುದನ್ನು ಈಗಾಗಲೇ ವಿದ್ವಜ್ಜನರು ಒಪ್ಪಿದ್ದಾರೆ. ಹೀಗಿರುವಾಗ ಕನ್ನಡದ ಮುಂದೆ ಕಣ್ಣು ತೆರೆದ ಹಾಗೂ ಕೇವಲ ೫೦೦-೬೦೦ ವರ್ಷಗಳಿಂದೀಚೆಗಿನ ಭಾಷಾ ಇತಿಹಾಸವನ್ನು ಪಡೆದಿರುವ ಹಲವು ರಾಜ್ಯಗಳ ಉಲ್ಲೇಖ ಮೂಡಿರುವ ಹಾಗೂ ಈಗಾಗಲೇ ಗುರುತಿಸಿರುವಂತೆ ೧೫೦೦ ವರ್ಷಗಳಿಗೂ ಮಿಗಿಲಾದ ಇತಿಹಾಸ ಪಡೆದ ಕನ್ನಡ - ಕರ್ನಾಟಕದ ಉಲ್ಲೇಖವಿರದ 'ರಾಷ್ಟ್ರಗೀತೆ' ಎಂಬ ಪದ್ಯವನ್ನು ಕನ್ನಡಿಗರು ಹಾಡುವುದು ಎಷ್ಟರಮಟ್ಟಿಗೆ ಸರಿ ಎಂಬುದನ್ನು ಕರ್ನಾಟಕದ ಪ್ರಜ್ಞಾವಂತ ಜನತೆ ಇಂದು ಆಲೋಚಿಸಬೇಕಿದೆ.

ಒಟ್ಟಾರೆ ಈ ಚರ್ಚೆ 'ದ್ರಾವಿಡ' ಎಂಬ ಶಬ್ದವು ತಮಿಳು ಭಾಷಾ ಸಂಸ್ಕೃತಿ ಮತ್ತು ಅದರ ಪ್ರದೇಶಕ್ಕೆ ಸೀಮಿತವಾದುದು ಎಂಬುದನ್ನು ಮುಖ್ಯವಾಗಿ ಸಾಬೀತುಗೊಳಿಸುವುದಾಗಿದೆ. ಇಷ್ಟನ್ನು ಹೊರತುಪಡಿಸಿದರೆ, ಭಾಷಾ ವಿಜ್ಞಾನಿಗಳು 'ದ್ರಾವಿಡ' ಶಬ್ದದ ಹೆಸರಿನಲ್ಲಿ ಅಭಿಪ್ರಾಯಪಡುವ ಒಂದು ಭಾಷಾ ಪರಿವಾರದ ರೂಪುರೇಷೆಗಳ ವಿಚಾರದಲ್ಲಾಗಲಿ, ಭೌತಿಕ ಮಾನವಶಾಸ್ತ್ರದಲ್ಲಿ ದ್ರಾವಿಡ ಎಂಬ ಹೆಸರನ್ನು ಬಳಸಿ ಚರ್ಚಿಸುವ ಜನಾಂಗೀಯ ಪರಿಕಲ್ಪನೆಯ ವಿಚಾರದಲ್ಲಾಗಲಿ ನನ್ನ ಯಾವುದೇ ತಕರಾರು ಇಲ್ಲ.

ಪ್ರಸ್ತುತ ಚರ್ಚೆಯು ಈ ನೆಲೆಯನ್ನು ಮುಟ್ಟಿದಾಗ ಮತ್ತೊಂದು ಹೊಸ ಪ್ರಶ್ನೆ ಏಳುತ್ತದೆ. ಅದು ಹೀಗಿದೆ: ಒಂದು ಭಾಷಾ ಕುಟುಂಬವನ್ನು ದ್ರಾವಿಡ ಎಂದು ಕರೆಯುತ್ತಿದ್ದ ಸಮಕಾಲೀನ ಸಂದರ್ಭದಲ್ಲಿ ಅದನ್ನು ತಮಿಳಿಗೆ ಮಾತ್ರ ಸೀಮಿತಗೊಳಿಸಿದರೆ, ಆ 'ದ್ರಾವಿಡ'ದ ಸ್ಥಾನದಲ್ಲಿ ಯಾವ ನಿರುಕ್ತವನ್ನು ಸ್ಥಾಪಿಸಬೇಕು, ಎಂಬುದು. ಇದು ಚರ್ಚೆಗೆ ಒಳಪಡಬೇಕಾದ ವಿಷಯ. ಅದಕ್ಕಾಗಿ ನಾನೂ ಕುತೂಹಲದಿಂದ ಕಾಯುತ್ತೇನೆ.

**ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿ**
ಕನ್ನಡ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ
ಸ್ನಾತಕೋತ್ತರ ಕೇಂದ್ರ, ಕೋಲಾರ - ೫೬೩ ೧೦೧

# ಮುಗ್ಗಟ್ಟಿನಲ್ಲೇ ಅರಳಿದ ಕಲಾವಿದ

ಬಾಲ ಕಲಾವಿದ ಕುಶಾಲ್ ಕುಮಾರನ ವರ್ಣಚಿತ್ರಗಳ ಪ್ರದರ್ಶನ ಕಳೆದ ತಿಂಗಳು ಬೆಂಗಳೂರಿನಲ್ಲಿ ನಡೆಯಿತು. ಕಲಾಸಕ್ತರು ಈತನ ಚಿತ್ರಗಳನ್ನು ನೋಡಿ ಮೆಚ್ಚಿ ಅಭಿನಂದಿಸಿದರು. ಎಲ್ಲ ಪತ್ರಿಕೆಗಳು ಹೊಗಳಿ ಬರೆದವು. ಟಿ.ವಿ. ಚಾನೆಲ್‌ಗಳವರು ಈತನನ್ನು ಅರಸಿಬಂದರು.

ಹನ್ನೆರಡರ ಈ ಪುಟ್ಟನಿಗೆ ಚಿಕ್ಕಂದಿನಲ್ಲಿ ಚಿತ್ರ ಬರೆಯುವ ಆಸಕ್ತಿ ಇರಲಿಲ್ಲ. ತಂದೆ ಪ. ಸ. ಕುಮಾರ್ ಹೆಸರಾಂತ ಚಿತ್ರಗಾರರು. ಅಜ್ಜಿ, ಅಮ್ಮ, ಅಕ್ಕ, ತಂಗಿಯರಿಗೆ ಚಿತ್ರಕಲೆಯಲ್ಲಿ ಆಸಕ್ತಿ. ಕುಶಾಲ್‌ನಿಗೆ ಹಗಲೆಲ್ಲ ಗೆಳೆಯರೊಂದಿಗೆ ಆಟ ಅಲೆದಾಟದಲ್ಲಿ ಆಸಕ್ತಿ. ಅಜ್ಜಿಯ ಮನೆಗೆ ಹೋದರಂತೂ ರಾತ್ರಿಯಾದರೂ ಮನೆಯ ನೆನಪಾಗುತ್ತಿರಲಿಲ್ಲ. ತಾಯಿ ಆತನನ್ನು ಹುಡುಕಿ ಕರೆತರಬೇಕಾಗುತ್ತಿತ್ತು. ಅಕ್ಕ ತಂಗಿಯರನ್ನು ಸದಾ ಕೀಟಲೆ ಮಾಡಿ ಗೋಳು ಹೊಯ್ದುಕೊಳ್ಳುವ ತುಂಟ. ಮನೆಯವರ ಮಾತುಗಳಲ್ಲಿ ಹೇಳುವುದಾದರೆ ತಂಟೆಕೋರ, 'ಒರಟು ಹುಡುಗ !'

ತನ್ನ ಗೆಳೆಯರೊಂದಿಗೆ ಸದಾ ಅಲೆದಾಡುತ್ತ, ಕ್ರಿಕೆಟ್ ಆಡುತ್ತ ಕಾಲ ಕಳೆಯುತ್ತಿದ್ದ ಈ ಒರಟು ಹುಡುಗ ಓದಿನಲ್ಲಿ ಹಿಂದಿರಲಿಲ್ಲ. ಆದರೆ ಆಗಾಗ್ಗೆ ಹೊಟ್ಟೆ ನೋವಿನಿಂದ ನರಳುತ್ತಿದ್ದ. ಹೊಟ್ಟೆಯಲ್ಲಿದ್ದುದನ್ನೆಲ್ಲ ಕಾರಿಕೊಂಡು ಅರೆಜೀವವಾಗುತ್ತಿದ್ದ. ಹೊರಗಡೆ ಕಂಡದ್ದನ್ನೆಲ್ಲ ತಿನ್ನುತ್ತಾನೆ, ಆದರಿಂದ ಈ ಅವಸ್ಥೆ ಎಂದು ಭಾವಿಸುತ್ತಿದ್ದ ತಂದೆತಾಯಿಗಳು ಡಾಕ್ಟರಲ್ಲಿಗೆ ಕರೆದೊಯ್ಯುತ್ತಿದ್ದರು. ಕುಶಾಲ್ ಕೆಲವು ದಿನ ಗೆಲುವಾಗಿರುತ್ತಿದ್ದ. ಮತ್ತೆ ಅಸಾಧ್ಯ ಹೊಟ್ಟೆ ನೋವು, ವಾಂತಿ ಮರುಕಳಿಸಿ ಆತನ ಚೈತನ್ಯವನ್ನು ಹಿಂಡಿಹಾಕುತ್ತಿದ್ದವು. ತೀವ್ರ ತಪಾಸಣೆ ನಡೆಸಿದ ಡಾಕ್ಟರರು ಕುಶಾಲನ ಅಸ್ವಸ್ಥತೆಗೆ ಕಾರಣ ಕಂಡುಹಿಡಿದರು.

ಆತ ಮೂತ್ರಪಿಂಡದ ಕಾಯಿಲೆಯಿಂದ ಬಳಲುತ್ತಿರುವ ವಿಷಯ ತಿಳಿದಾಗ ತಂದೆ ತಾಯಿಗಳಿಗೆ ಆಘಾತವಾಯಿತು. ಬದಲಿ ಮೂತ್ರಪಿಂಡದ ಕಸಿ ಮಾಡಿ ಕುಶಾಲ್‌ನ ಜೀವ ಉಳಿಸಲು ಸಾಧ್ಯವಿದೆ ಎಂದು ವೈದ್ಯರು ಸಲಹೆ ಮಾಡಿದರು. ಅದಕ್ಕೆ ತಗುಲಬಹುದಾದ ವೆಚ್ಚ ಸುಮಾರು ಎರಡು ಲಕ್ಷಕ್ಕಿಂತ ಹೆಚ್ಚು ಎಂಬುದು ತಿಳಿದಾಗ ಹೆತ್ತವರು ಮತ್ತೊಮ್ಮೆ ಕಂಗಾಲಾದರು. ಕುಟುಂಬ ನಿರ್ವಹಣೆಗೆ ತಂದೆಯ ಸಂಪಾದನೆಯೊಂದೇ ಆಧಾರ. ಈ ಪರಿಸ್ಥಿತಿಯಲ್ಲಿ ಚಿಕಿತ್ಸೆ ಹೊರಲಾರದಷ್ಟು ಭಾರಿ ಹೊರೆ ಎನ್ನಿಸಿತು. ಚೈತನ್ಯದ ಚಿಲುಮೆಯಾಗಿದ್ದ ತಮ್ಮ ಒಬ್ಬನೇ ಮಗನ ಜೀವ ಉಳಿಸಬೇಕಾದರೆ ಏನಾದರೂ ಮಾಡಲೇಬೇಕಿತ್ತು. ಮನೆಯಲ್ಲಿ ಮೌನ ಕವಿಯಿತು.

ಹೆತ್ತವರು ಹೀಗೆ ಕೈ ಕಾಲು ಬಿಟ್ಟು ಕೂರುವಂತಿದೆಯೆ ? ಏನಾದರೂ ಪ್ರಯತ್ನ ಮಾಡಬೇಕಷ್ಟೆ. ಅಸ್ವಸ್ಥತೆಯ ವಿಷಯ ತಿಳಿದ ಬೆಂಗಳೂರಿನ ಅನೇಕ ಕಲೆಗಾರರು, ತಮ್ಮ ಕೃತಿಗಳನ್ನು ಮಾರಾಟಮಾಡಿ ಕುಶಾಲನ ವೈದ್ಯಕೀಯ ವೆಚ್ಚಕ್ಕೆ ಹಣ ಸಹಾಯ ಮಾಡಿದರು. ಇನ್ನಿತರ ದಾನಿಗಳೂ ನೆರವಿಗೆ ನಿಂತರು. ಮುರುಗನ್ ಎಂಬ ಮಹಾಶಯ ತನ್ನ ಮೂತ್ರಪಿಂಡ ದಾನ ಮಾಡಲು ಮುಂದೆ ಬಂದ. ಚಿಕಿತ್ಸೆಗೆ ಮುಂಚೆ, ಚಿಕಿತ್ಸೆಯ ಸಂದರ್ಭದಲ್ಲಿ ಮನೆಯವರ ಮನದಲ್ಲಿ ಮೌನ ಕವಿದಿದ್ದಾಗ, ಕುಶಾಲ್ ತನ್ನ ವಯಸ್ಸಿಗೆ ಮೀರಿದ ಸ್ಥೈರ್ಯ ತೋರಿಸಿದ. ಎಂದಿನಂತೆ ಚೇಷ್ಟೆ, ಹುಡುಗಾಟದಿಂದ ಎಲ್ಲರ ಮನಸ್ಸಿನ ಭಾರ ಕಡಿಮೆ ಮಾಡಲು ಪ್ರಯತ್ನಿಸಿದ. ಬದಲಿ ಮೂತ್ರಪಿಂಡ ಕಸಿ ಚಿಕಿತ್ಸೆ ಯಶಸ್ವಿಯಾಯಿತು. ಡಾಕ್ಟರು ಆತನಿಗೆ ಮರುಹುಟ್ಟು ನೀಡಿದರು.

ಆತನ ಬದುಕಿನ ಮತ್ತೊಂದು ಘಟ್ಟ ಇಲ್ಲಿಂದ ಪ್ರಾರಂಭವಾಯಿತು. ಚಿಕಿತ್ಸೆಯ ಸಂದರ್ಭದಲ್ಲಿ ನೀಡಿದ ಔಷಧಿಗಳ ಅಡ್ಡಪರಿಣಾಮದಿಂದ ಆತನ ಮೈತುಂಬ ದಟ್ಟ ರೋಮಗಳು



ತಾಯಿಯೊಂದಿಗೆ ಕುಶಾಲ್

ಮೂಡಿಬಂದವು. ಚಿಕಿತ್ಸೆಯ ನಂತರ ಶರೀರದ ರೋಗನಿರೋಧಕ ಶಕ್ತಿ ಕುಂದಿ ತೀವ್ರ ಸೋಂಕು ತಗುಲುವ ಸಾಧ್ಯತೆಯ ವಿರುದ್ಧ ಪ್ರತಿದಿನ ತಪ್ಪದೆ ಔಷಧಿ ತೆಗೆದುಕೊಳ್ಳುವುದರ ಜೊತೆಗೆ,. ರೋಮಗಳ ನಿವಾರಣೆಗೂ ಚಿಕಿತ್ಸೆ ಅಗತ್ಯವಾಯಿತು. ಇದು ವರ್ಷಗಳ ಕಾಲ ಮುಂದುವರಿಯಬೇಕಾದ ಚಿಕಿತ್ಸೆ. ಪ್ರತಿ ತಿಂಗಳು ಈ ಔಷಧಿಗಳಿಗಾಗಿ ಬೇಕಾಗುವ ಹಣ ಸುಮಾರು ಹನ್ನೆರಡು ಸಾವಿರ ರೂಪಾಯಿ.

ಶಸ್ತ್ರ ಚಿಕಿತ್ಸೆ ಮತ್ತು ಅನಂತರದ ಆರೈಕೆಯ ಸಂದರ್ಭದಲ್ಲಿ ಕುಶಾಲ್‌ನ ತಾಯಿ ಪ್ರೇಮಕುಮಾರಿ ಅವರ ಪಾತ್ರ ಭಾರಿ ಮಹತ್ವದ್ದು. ಆಸ್ಪತ್ರೆಯಲ್ಲಿದ್ದಷ್ಟು ಕಾಲವೂ ತಾಯಿಯನ್ನು ಹೊರತುಪಡಿಸಿ ಅಲ್ಲಿಗೆ ಬೇರೆ ಯಾರಿಗೂ ಪ್ರವೇಶ ನಿಷಿದ್ಧ. ಸೋಂಕಿನ ವಿರುದ್ಧ ರಕ್ಷಣೆಗೆ ಹೆಚ್ಚಿನ ಗಮನ ನೀಡಬೇಕಾಯಿತು. ಮನೆಯಲ್ಲಿಯೂ ಆತನಿಗೆ ಪ್ರತ್ಯೇಕ ಕೋಣೆ. ಬೇರೆ ಯಾರಿಗೂ ಪ್ರವೇಶವಿಲ್ಲ. ಆತನ ಎಲ್ಲ ಶುಶ್ರೂಷೆಯ ಹೊಣೆ ತಾಯಿಯದು. ಸೋಂಕಿನ ಭಯದಿಂದ ತಾಯಿ ನೆಂಟರಿಷ್ಟರ ಮನೆಗೂ ಹೋದುದಿಲ್ಲ.



ತಂದೆ, ಅಜ್ಜಿ, ತಂಗಿಯೊಂದಿಗೆ

ಪ್ರತಿ ತಿಂಗಳು ಔಷಧಿಯ ವೆಚ್ಚಕ್ಕೆಂದು ತಂದೆ ಅವಸ್ಥೆಪಡುತ್ತಿದ್ದುದನ್ನು ಗಮನಿಸುತ್ತಿದ್ದ ಕುಶಾಲನಿಗೆ ಮನಸ್ಸಿನಲ್ಲಿ ತಳಮಳವಾಗತೊಡಗಿತು. ಸೋಂಕಿನ ಭಯದಿಂದ ಶಾಲೆಗೆ ಹೋಗುವಂತಿಲ್ಲ. ಓದು ಅಲ್ಲಿಗೇ ನಿಂತಿತು. ಗೆಳೆಯರ ಜೊತೆಗೆ ಸೇರುವಂತಿಲ್ಲ. ಮನೆಯಲ್ಲಿ ಸ್ವಲ್ಪ ಗೆಲುವಿನ ವಾತಾವರಣ ಮರಳಿತಾದರೂ, ಒಂಟಿಯಾಗಿ ಕಾಲ ಕಳೆಯುವ ಬೇಸರ. ಅಂಥ ಸಮಯದಲ್ಲಿ ತಲೆಯಲ್ಲಿ ಮೂಡುತ್ತಿದ್ದ ಆಲೋಚನೆ - ತನ್ನ ಚಿಕಿತ್ಸೆಯ ವೆಚ್ಚದ ಸ್ವಲ್ಪವನ್ನಾದರೂ ತುಂಬಿಸಲು ತನ್ನಿಂದ ಸಾಧ್ಯವಾದರೆ.... ಎಂಬುದು.

ಹಿಂದಿನ ತುಂಟ, ಒರಟು ಹುಡುಗ ತೀರ ಬದಲಾಗಿದ್ದ. ತಾನೂ ಚಿತ್ರ ಬಿಡಿಸಬಹುದಲ್ಲ ಎನ್ನಿಸಿತು. ಒಳಗೆ ಚಡಪಡಿಸುತ್ತ ಅಡಗಿ ಕುಳಿತಿದ್ದ ಕಲಾವಿದ ಇದ್ದಕ್ಕಿದ್ದಂತೆ ಹೊರಬಂದ. ತಂದೆ ಅಗತ್ಯ ಸಾಮಗ್ರಿಗಳನ್ನು ಒದಗಿಸಿದರು. ಯಾರ ಒತ್ತಾಯವಿಲ್ಲ, ಮಾರ್ಗದರ್ಶನವಿಲ್ಲ. ಆತನದೇ ಶೈಲಿ. ಆತನ ಮನಸ್ಸಿನಲ್ಲಿ ಏಳುತ್ತಿದ್ದ ಅಮೂರ್ತ ಕಲ್ಪನೆಗಳು, ಆತನ ಒಂಟಿತನ, ಬೇಸರ, ನೋವು, ನಲಿವು, ತಳಮಳ, ಅಚ್ಚರಿಗಳು ದಟ್ಟ ಬಣ್ಣ ಹಚ್ಚಿಸಿಕೊಂಡು, ಯಾವ ಸೋಂಕಿನ ಭಯವೂ ಇಲ್ಲದ ಚಿತ್ರಗಳಾಗಿ ಮೂಡಿಬಂದವು.

ಕುಶಾಲ್ ತನ್ನ ಮೂವತ್ತೈದು ಚಿತ್ರಗಳನ್ನು ಪ್ರದರ್ಶಿಸಿದ. ಕಲಾಸಕ್ತರು ಆತನ ಇಪ್ಪತ್ತೊಂಬತ್ತು ಚಿತ್ರಗಳನ್ನು ಖರೀದಿಸಿದರು. ಮುಂದಿನ ಆರು ತಿಂಗಳ ಔಷಧಿಗೆ ಬೇಕಾದ ಹಣವನ್ನು ಸಂಪಾದಿಸಿದ ಹಿಗ್ಗು ಕುಶಾಲ್‌ಗೆ. ಆತನ ಮೂತ್ರಪಿಂಡ ಕಸಿ ಮಾಡಿದ ಡಾಕ್ಟರರು ತಮ್ಮ ಪತ್ನಿ ಸಮೇತ ಕುಶಾಲನ ಚಿತ್ರಗಳನ್ನು - ನೋವಿನಲ್ಲಿ ಅರಳಿದ ಚಿತ್ರಗಳನ್ನು - ನೋಡಿ ಸಂತೋಷಪಟ್ಟರು. ಭೇಷ್, ಚೆನ್ನಾಗಿ ಮಾಡಿದ್ದೀಯೋ ಹುಡುಗಾ ! ಕೀಪ್ ಇಟ್ ಅಪ್ - ಎಂದು ಆತನ ಬೆನ್ನು ತಟ್ಟಿ ಮನತುಂಬಿ ಹರಸಿದರು. **(ಈ ತಿಂಗಳ ಮುಖಚಿತ್ರ ಕುಶಾಲ್ ಕುಮಾರ್ 'ಹೊಸತು'ಗಾಗಿ ರಚಿಸಿಕೊಟ್ಟದ್ದು.)**

**ಪರಂಜ್ಯೋತಿ**
ನಂ. ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು

# ಆರ್ಯರ ಪ್ರಶ್ನೆ - ಸುಳ್ಳುಕುದುರೆಯ ಸಾಕ್ಷ್ಯ

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

*ಕಳೆದ ಸಂಚಿಕೆಯಲ್ಲಿ ಆರ್ಯರ ಪ್ರಶ್ನೆಗೆ ಸಂಬಂಧಿಸಿದಂತೆ ರಾಜಾರಾಂ ಮತ್ತು ಝಾ ನಡೆಸಿದ್ದರೆನ್ನಲಾದ ಸಂಶೋಧನೆಯ ನ್ಯೂನತೆಗಳ ಬಗ್ಗೆ ಗಮನಹರಿಸಲಾಗಿತ್ತು. ಅಂತೆಯೇ ಹರಪ್ಪದ ಒಂದು ಮುದ್ರೆಯಲ್ಲಿ ಇಲ್ಲದ ಕುದುರೆಯನ್ನು ಸೃಷ್ಟಿಸಿದ ಅಪಕೀರ್ತಿ ಈ ಸಂಶೋಧಕರದು ಎಂಬುದನ್ನು ವಿವರಿಸಲಾಗಿತ್ತು. ಆ ಲೇಖನದ ಮುಂದಿನ ಭಾಗ ಇಲ್ಲಿದೆ.*

ಭಾರತ ಪುರಾತತ್ವ ಸರ್ವೇಕ್ಷಣೆಯ ಮಾಜಿ ಮಹಾ ನಿರ್ದೇಶಕರಾದ ಬಿ. ಬಿ. ಲಾಲ್ ಅವರು ಇಲ್ಲಿನ ಲಿಪಿಗಳನ್ನು ಬಹು ವಿಶಿಷ್ಟವಾಗಿ ಬಲದಿಂದ ಎಡಕ್ಕೆ ಬರೆಯಲಾಗಿದೆಯೆಂದು ದಶಮಾನಗಳ ಹಿಂದೆಯೇ ತೋರಿಸಿಕೊಟ್ಟಿದ್ದರು. ಆದರೂ ಸಹ ರಾಜಾರಾಂ ಮತ್ತು ಝಾ ಅವರು ಲಿಪಿಗಳನ್ನು ಎಡದಿಂದ ಬಲಕ್ಕಾಗಲಿ ಅಥವಾ ತಿರುಗುಮುರುಗ (ತದ್ವಿರುದ್ಧ ದಿಕ್ಕಿನಲ್ಲಿ) ಆಗಲಿ ಓದಬಹುದೆಂದು ಹೇಳುತ್ತಾರೆ. ಮುಂದಿನದು : ೪೦೦ ರಿಂದ ೮೦೦ ರಷ್ಟಿರುವ ಚಿಹ್ನೆಗಳಲ್ಲಿ ಸುಮಾರು ೧೦೦ ಚಿಹ್ನೆಗಳು ರಾಜಾರಾಂ ಪ್ರಕಾರ ವರ್ಣಮಾಲೆಯಾಗಿವೆ. ಪ್ರಪಂಚದ ಬೇರಾವುದೇ ಭಾಗದಲ್ಲಿ ದೊರೆತಿರುವ ವರ್ಣಗಳಿಗಿಂತ ಪ್ರಾಚೀನವಾದವು ಇವು. ಈಗ ಅತ್ಯಂತ ಪ್ರಾಚೀನವಾದ ಸಿಂಧೂ ಕಣಿವೆಯ ವರ್ಣ ಚಿಹ್ನೆಗಳು - ಹರಪ್ಪದಲ್ಲಿ ೧೯೯೯ರಲ್ಲಿ ಹಾರ್ವರ್ಡ್‌ನ ಆರ್. ಮೆಡೋ ಪತ್ತೆ ಮಾಡಿದಂತೆ – BCE – ೩೫೦೦-೨೮೦೦ ರ ಪದರಗಳಿಂದ ದೊರೆತಿವೆ. ಉಳಿದವು ಚೀನಾದ ಬರವಣಿಗೆಯಲ್ಲಿರುವಂತೆ ಪದಸೂಚಕ ಚಿಹ್ನೆಗಳಾಗಿವೆ.

ಇನ್ನೂ ಚಮತ್ಕಾರವೆಂದರೆ, ರಾಜಾರಾಂ ಮತ್ತು ಝಾ ಅವರ ವರ್ಣಮಾಲೆಯಲ್ಲಿ ಸಾಮಾನ್ಯ ಉದ್ದೇಶದ ಒಂದು ಆರಂಭಿಕ ಸ್ವರದ (ಅ-ರ್ಯಾ; ಇ-ನ್‌ದ್ರ; ಉ-ಮ; ಹೀಗೆ)ಹೊರತಾಗಿ ಬೇರೆ ಸ್ವರಗಳಿಲ್ಲ. ಇದು ಪಾತ್ರೆಯ ಕಂಠದ ಆಕಾರದ ಪ್ರಖ್ಯಾತ U-ಚಿಹ್ನೆಯಾಗಿದ್ದು ಬಹುತೇಕ ಎಲ್ಲಾ ಸಂದರ್ಭಗಳಲ್ಲಿ ಬರಹದ ಕೊನೆಯಲ್ಲಿ ಬರುತ್ತದೆ; ಆದರೂ ಅದನ್ನು ಸಾಮಾನ್ಯವಾಗಿ ಬಲದಿಂದ ಎಡಕ್ಕೆ ಮೊದಲ ಚಿಹ್ನೆಯಾಗಿ ಓದುತ್ತಾರಂತೆ ! ಎಂಥ ವಿಚಿತ್ರ !! ವಾಸ್ತವವಾಗಿ, ವೇದಕಾಲೀನ ಸಂಸ್ಕೃತವೂ ಸೇರಿದಂತೆ ಯಾವುದೇ ಭಾರತೀಯ ಭಾಷೆಯನ್ನು ಸ್ವರಗಳ ಸಹಾಯವಿಲ್ಲದೆ ಓದುವುದು ಅಸಾಧ್ಯ. ಏಕೆಂದರೆ ಮ್, ನ್‌ಗಳ ಜೋಡಣೆಗೆ ಒಂದು ಡಜನ್ ಅಥವಾ ಇನ್ನೂ ಹೆಚ್ಚು ಸಾಧ್ಯತೆಗಳಿವೆ. ಸ್ವರಗಳಿಲ್ಲದೆ 'ಮನು' ಮತ್ತು 'ಮಿನ'ಗಳಲ್ಲಿ ವ್ಯತ್ಯಾಸ ಕಲ್ಪಿಸುವುದು ಹೇಗೆ ? ಹೀಗೆ ಒಂದು ಕಡೆ ಸ್ವರ ಸಂಜ್ಞೆಗಳ ಅಭಾವವನ್ನು ಹೇಳಿದರೆ ಮತ್ತೊಂದು ಕಡೆ ತದ್ವಿರುದ್ಧವಾಗಿ ಇಲ್ಲಿನ ಲಿಪಿ ವ್ಯವಸ್ಥೆಯು ವೇದಪಾಠಗಳ ಉಚ್ಚಾರಣೆಯ ಏರಿಳಿತವೂ ಸೇರಿದಂತೆ ಪಕ್ಕಾ ತಾಂತ್ರಿಕವಾದ, ಪಾಣಿನೀಯ ಸಂಜ್ಞೆಗಳಿಂದ ಕೂಡಿದೆಯೆಂದು ಹೇಳಲಾಗಿದೆ. ಇಷ್ಟಾದ ಮೇಲೂ ಓದಲಾರದ ಭಾಗ ಉಳಿದರೆ ಅದನ್ನು (ಅಗತ್ಯವಿದ್ದಂತೆ) ಭರ್ತಿ ಮಾಡಿಕೊಳ್ಳಬಹುದು ! ಏಕೆಂದರೆ ಸಿಂಧೂ ವರ್ಣಮಾಲೆಯು ''ಸಡಿಲವಾದ ಮತ್ತು ಸುಲಭವಾಗಿ ಒದಗುವಂತಿರುವ ವರ್ಣಮಾಲೆ''ಯಾಗಿದ್ದು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುವುದಿಲ್ಲ, ಅಂದರೆ ವಾಲ್ಟೈರ್ ಹೇಳಿದ ಹಾಗೆ ಇಲ್ಲಿ 'ವ್ಯಂಜನಗಳ ಬೆಲೆ ಅತ್ಯಲ್ಪ, ಸ್ವರಗಳಿಗೆ ಅದೂ ಇಲ್ಲ!'

ಕಡುಬಿನ ರುಚಿ ಗೊತ್ತಾಗುವುದು ತಿಂದು ನೋಡಿದಾಗ ತಾನೆ ! ಡಾ|| ರಾಜಾರಾಂ ಮತ್ತು ಝಾ ಅವರ ಓದಿನ ಕೆಲವು ನಿದರ್ಶನಗಳು ಹೀಗಿವೆ : ''ಸೊಳ್ಳೆ''; ಮನೆಯನ್ನು ಚಳಿ ಆವರಿಸಿಕೊಂಡಿದೆ; ''ನೂರು ಗದ್ದಲ ಮಾಡುವ ಹಸುಗಳು''; ''ಕುಪಿತಳಾದ ಅತ್ತೆ''. - ಇಂಥದೇನನ್ನಾದರೂ ಮುದ್ರೆಗಳ ಮೇಲೆ ಬರಸುವವರೂ ಇದ್ದಾರೆಯೆ ? ಈ ಮುದ್ರೆಗಳು ಉತ್ತರಕಾಲೀನ ವೇದ ವಿಜ್ಞಾನದ ಸಂದರ್ಭಗಳನ್ನು ಸೂಚಿಸುತ್ತವೆ; ಆದ್ದರಿಂದ ಪೈ ( π = ೨೨/೭ ಅಥವಾ ೩.೧೪೧೫), ಹಾಗೆಯೇ ರುದ್ರ, ಸೋಮ, ಯಮ, ಆಯು, ಯದು, ಪುರು, ಮದ್ರಾ, ಸುದಾಸ, ಪೈಳ, ಅಜೀಗರ್ತ ಅಥವಾ ದ್ವಾರಕ ಇತ್ಯಾದಿ ವೈದಿಕ ದೇವತೆಗಳು, ಬಣಗಳು, ರಾಜರು ಮತ್ತು ಋಷಿಗಳ ಹೆಸರುಗಳು ಕೂಡ ಬರುತ್ತವೆ. ಕುದುರೆಯಂತೂ ಇದ್ದೇ ಇದೆ. ಕೃಷ್ಣನ ಗೆಳೆಯ ಅಕ್ರೂರ, ರಾಮನ ಶ್ರೇಷ್ಠ ತಾಂತ್ರಿಕ ಅಸ್ತ್ರ ಅಗ್ನಿವಾನ್ ಇತ್ಯಾದಿ ಪುರಾಣ ಹಾಗೂ ಐತಿಹ್ಯಗಳ ಪ್ರಸ್ತಾಪವೂ ಇಲ್ಲದಿಲ್ಲ. ಏಕೆಂದರೆ ಸಿಂಧೂ - ಸರಸ್ವತೀ ಕಣಿವೆಯು ''ನಾಗರಿಕತೆಯ ತೂಗು ತೊಟ್ಟಿಲು.''

ಆರ್ಯರು ಭಾರತದ ಅನಾದಿ ಮೂಲನಿವಾಸಿಗಳೆಂದು ಪ್ರತಿಪಾದಿಸುವ ಉದ್ದೇಶದಿಂದ ಚರಿತ್ರೆಯನ್ನು ಪುನಾರಚಿಸುವ ಪರಿಷ್ಕರಣವಾದಿಗಳ ಪರಿಧಿಯಿಂದ ಆಚೆನವರು ಓದಿದಾಗ ಇದೆಲ್ಲ ಎಷ್ಟೊಂದು ಹಾಸ್ಯಾಸ್ಪದವಾಗಿ ತೋರುತ್ತದೆಂಬುದು ಡಾ|| ರಾಜಾರಾಂ ಮತ್ತು ಝಾ ಇವರಿಗೆ ಹೊಳೆಯುವುದೇ ಇಲ್ಲ ! ಈಜಿಪ್ಟ್, ಮೆಸಪೊಟೇಮಿಯಾ ಅಥವಾ ಸಿಂಧು ಕಣಿವೆ - ಎಲ್ಲಿಯೇ ಆಗಲಿ ಬರವಣಿಗೆಯು ಇನ್ನೂ ಆರಂಭ ದೆಸೆಯಲ್ಲಿರುವಾಗಲೆ ಇವರು ಒಂದು ವರ್ಣಮಾಲೆಯನ್ನು ಹುಡುಕಿದ್ದಾರೆ. ಉತ್ತರದಿಂದ ಆಮದಾದ ಕುದುರೆಯನ್ನು ಸಾಧಾರವಾಗಿ ದೃಢೀಕರಿಸುವ ಮುಂಚೆಯೇ ದಕ್ಷಿಣ ಏಷ್ಯಾದಲ್ಲಿ ತಂದು ನಿಲ್ಲಿಸಿದ್ದಾರೆ. ಉರಾಲಿಕ್ ಮೈದಾನ ಅಥವಾ ಮೆಸಪೊಟೇಮಿಯಾಗಳಿಂದ ಹೊರಗೆ ಎಲ್ಲಿಯೂ ಕಾಣಸದಿದ್ದ ಕುದುರೆಗಳು ಎಳೆಯುವ, ಚಕ್ರಸಹಿತವಾದ ರಥವನ್ನೂ ಇಲ್ಲಿ ಓಡಿಸಿದ್ದಾರೆ. ಸಾಮಾನ್ಯ ಶಕ ಪೂರ್ವ ೪೦೦೦-೨೬೦೦ ರಲ್ಲಿಯೇ ವೇದ ಸಂಸ್ಕೃತ ಮಾತಾಡುವವರು ಇಲ್ಲಿದ್ದಾರೆ ! ಇದರ ಹತ್ತಿರದ ಸಂಬಂಧಿ, ಭಾಷಾವಿಜ್ಞಾನದ ಪ್ರಕಾರ ಋಗ್ವೇದಕ್ಕಿಂತ ಸ್ವಲ್ಪ ಮುಂಚಿನ 'ಮಿಟಾನಿ' ಗುಂಪಿನ ಸಿರಿಯ ಮತ್ತು ಇರಾನ್‌ನ ಇಂಡೋ-ಆರ್ಯನ್ ಭಾಷೆಯು ಕ್ರಿ. ಪೂ. ಸುಮಾರು ೧೪೦೦ರದ್ದಾಗಿದೆ; ಇದು ವಾಸ್ತವವಾಗಿ ಪಾರ್ಸಿಗಳ ಅವೆಸ್ತಾ ಗ್ರಂಥಗಳಲ್ಲಿ ಕಾಣಸಿಗುವ, ಝುರತುಷ್ಟ್ರನ ಪ್ರಾಚೀನ ಇರಾನಿಯನ್‌ಗೆ ಸಮಕಾಲೀನವಾದುದು.

ಸಂಕ್ಷೇಪದಲ್ಲಿ ಹೇಳುವುದಾದರೆ, ರಾಜಾರಾಂ ಮತ್ತು ಝಾ ಅವರ ವಾದವು ಚಾರಿತ್ರಿಕವಾಗಿ ಅಸಾಧ್ಯವಾದುದು; ಮುದ್ರೆ, ವರ್ಣಗಳ ಋಜುವಾತಿಲ್ಲದ ಎರ್ರಾಬಿರ್ರಿ ಓದುವಿಕೆಯು ಅಸಂಗತವಾದುದು. ತಮ್ಮ ವಿಲಕ್ಷಣ ಮನೋಭಾವದಿಂದ ಓದಿದ ಓದಿನ ಪ್ರಯೋಗ ಮಾದರಿ ಎನ್ನುವ ಹಾಗೆ ಹಿಗ್ಗಿಸಿ ಪುನರ್ ಸೃಷ್ಟಿಸಿಕೊಟ್ಟಿರುವ ಕುದುರೆಯ ಚಿತ್ರವೂ ಕೂಡ ಕೃತಕವಾದುದು.

ಡಾ|| ರಾಜಾರಾಂ ಮತ್ತು ಝಾ ಇವರ ಗ್ರಂಥದಲ್ಲಿ ನಮೂದಿಸಿರುವ ಮಾಹಿತಿಗಳನ್ನು ತಾಳೆ ನೋಡಿದ ಅನಂತರ ಬಹುತೇಕ ವಿದ್ವಾಂಸರು ಮುಗುಳ್ನಕ್ಕು ಗ್ರಂಥವನ್ನು ಬದಿಗೆ ತಳ್ಳುತ್ತಾರೆ ಅಥವಾ ತಲೆ ಕೊಡವಿ, ಸದ್ಯದಲ್ಲಿ ಚರಿತ್ರೆಯನ್ನು ತಿದ್ದಿ ಬರೆಯಲು ಹೊರಟಿರುವ ಉದ್ರಿಕ್ತ ಜನರ ಗುಂಪಿನಲ್ಲಿ ಇವರೂ


ಕಾಲಿಬಂಗನ್‌ನ ಉತ್ಖನನ ಸ್ಥಳ

ಸೇರುವರೆಂದು ಕೊಳ್ಳುತ್ತಾರೆ. ಈ ಪುಸ್ತಕವು ತನ್ನ ಅಸಂಬದ್ಧತೆಗಳಿಂದಾಗಿ ಸದ್ಯದ ಪರಿಷ್ಕರಣವಾದಿಗಳ ಮುಖಕ್ಕೆ ಮತ್ತಷ್ಟು ಮಸಿ ಬಳಿಯುತ್ತದೆ. (ಎಸ್. ಎಸ್. ಮಿಶ್ರಾ, ಎನ್. ತಲಗೇರಿ, ಕೆ. ಡಿ. ಸೇತ್ನಾ, ಎಸ್. ಪಿ. ಗುಪ್ತಾ, ಭ. ಸಿಂಗ್, ಎಂ. ಷೆಂಡ್ಗೆ, ಭ. ಗಿದ್ವಾನಿ, ಪಿ. ಚೌಧರಿ, ಎ. ಶೌರಿ, ಎಸ್. ಆರ್. ಗೋಯಲ್ ಮತ್ತು ಹೊರದೇಶಗಳ ನಿವಾಸಿಗಳಾದ ನಮ್ಮ ದೇಶಾಭಿಮಾನಿಗಳು ಹಾಗೂ ವಿದೇಶೀಯರಾದ ಎಸ್. ಕಾಕ್, ಎಸ್. ಕಲ್ಯಾಣರಾಮನ್, ಡಿ. ಫ್ರಾಲೆ, ಜೆ. ಫ್ಯೂರ್‌ಸ್ಟೈನ್, ಕೆ. ವಿಲ್ಸ್ಟ್ಸ್, ಕೆ. ಕ್ಲೊಸ್ಟ್‌ಮೈರ್ ಮೊದಲಾದವರು ಇವರ ಸಹಚರರು).

ಇಲ್ಲದ ಕುದುರೆಯ ಈ ಪ್ರಸಂಗವೂ ಸಾರಸ್ವತ ಲೋಕದಲ್ಲಿ ಮತ್ತು ಒಟ್ಟಿನ ಸಮಾಜದಲ್ಲಿ ಈಗಿಂದೀಗ ಏನು ನಡೆಯುತ್ತಿದೆ ಎಂಬುದರ ಮೇಲೆ ಒಂದು ಕ್ಷ-ಕಿರಣ ಬೀರುತ್ತದೆ. ಇದು ಈ ಉಪಖಂಡದ ಆಚೆಗೂ ಗಮನಕ್ಕೆ ಬಾರದೆ ಹೋಗುವುದಿಲ್ಲ.

'ಫ್ರಂಟ್‌ಲೈನ್' ಪತ್ರಿಕೆಯು ಮೈಕೆಲ್ ವಿಟ್ಜರ್ ಮತ್ತು ಸ್ಟೀನ್ ಫಾರ್ಮರ್ ಇವರು HORSEPLAY IN HARAPPA ಎಂಬ ಶೀರ್ಷಿಕೆಯಲ್ಲಿ ಬರೆದ ಲೇಖನವನ್ನು ಪ್ರಕಟಿಸುವ ಮುಂಚೆ ಆ ಲೇಖನದ ಬಗ್ಗೆ ವಿಮರ್ಶಾತ್ಮಕ ಅಭಿಪ್ರಾಯ ನೀಡಲು ಪ್ರಾಚೀನ ಭಾರತ ಇತಿಹಾಸದ ಪ್ರಮುಖ ತಜ್ಞರಾದ ರೊಮಿಲಾ ಥಾಪರ್ ಅವರನ್ನು ಆಹ್ವಾನಿಸಿತು. ''ಹಿಂದುತ್ವ ಮತ್ತು ಇತಿಹಾಸ'' ಎಂಬ ಹೆಸರಿನಲ್ಲಿ ರೊಮಿಲಾ ಥಾಪರ್ ಬರೆದ ಲೇಖನದ ಸಾರಾಂಶವನ್ನು ಇಲ್ಲಿ ಸಂಗ್ರಹಿಸಲಾಗಿದೆ :

ಹತ್ತೊಂಬತ್ತನೆಯ ಶತಮಾನದ ಕಡೆಕಡೆಯ ಭಾಗದಲ್ಲಿ 'ಆರ್ಯ' ಎಂಬುದು ಒಂದು ಚಾರಿತ್ರಿಕ ವರ್ಗವಾಗಿ ಚರ್ಚೆ ಪ್ರಾರಂಭವಾಯಿತು. 'ಆರ್ಯ' ಎಂಬ ಜನಾಂಗ ಮತ್ತು 'ಆರ್ಯ ಭಾಷೆಗಳ' ನಡುವೆ ವಿಪರೀತ ಗೊಂದಲವಿದ್ದು ಜನಸಾಮಾನ್ಯರ ಗ್ರಹಿಕೆಯಲ್ಲಿ ಇಂದಿಗೂ ಈ ಗೊಂದಲ ಪರಿಹಾರವಾಗಿಲ್ಲ. ಭಾರತದ ಚರಿತ್ರೆಗೆ ಸಂಬಂಧಿಸಿದಂತೆ ಹೇಳುವುದಾದರೆ ಋಗ್ವೇದದಲ್ಲಿ ಉಲ್ಲೇಖಗೊಂಡಿರುವ ಆರ್ಯರು ಉತ್ತರ ಭರತಖಂಡಕ್ಕೆ ದಾಳಿಯಿಟ್ಟು, ಆಕ್ರಮಣ ಮಾಡಿ ಭಾರತೀಯ ನಾಗರಿಕತೆಯನ್ನು ಹುಟ್ಟು ಹಾಕಿ ತಮ್ಮ ಇಂಡೋ-ಆರ್ಯನ್ ಭಾಷೆಯನ್ನು ಹರಡಿದ ಆರ್ಯ ಜನಾಂಗದವರು. ಈ ಸಿದ್ಧಾಂತವು ತಮ್ಮದೇ ಆದ ವಿಶಿಷ್ಟ ರಾಜಕೀಯ ಕಾರ್ಯಸೂಚಿಯನ್ನು ಹೊಂದಿದ್ದವರ ಮೇಲೆ ಮತ್ತು ಚರಿತ್ರಕಾರರ ಮೇಲೆ ತಕ್ಷಣ ಪ್ರಭಾವ ಬೀರಿತು.

ಜ್ಯೋತಿಬಾ ಫುಲೆಯವರು ಆರ್ಯರ ಆಕ್ರಮಣವು, ಹೊರಗಿನ ಬ್ರಾಹ್ಮಣರು ಬಂದು ಪ್ರಭಾವಶಾಲಿಗಳಾಗಿ ಕೆಳಜಾತಿಗಳ ಮೇಲೆ ದಬ್ಬಾಳಿಕೆ ನಡೆಸಿದುದನ್ನು ವಿವರಿಸುತ್ತದೆ - ಎಂದು ಹೇಳಿದರು. ಚರಿತ್ರೆಯನ್ನು ಈ ದೃಷ್ಟಿಯಿಂದ ನೋಡುವುದಕ್ಕೆ ಆಕ್ರಮಣವಾದವು ಅಗತ್ಯವಾಗಿತ್ತು. ಈಗ 'ಹಿಂದುತ್ವ'ದಲ್ಲಿ ಆಸಕ್ತಿಯುಳ್ಳವರಿಗೆ ಆಕ್ರಮಣವಾದವನ್ನು ನಿರಾಕರಿಸುವುದು ಅಗತ್ಯವಾಗಿದೆ. ಸಾವರ್ಕರ್ ಹೇಳುವ ಲಕ್ಷಣದ ಪ್ರಕಾರ ಒಬ್ಬನು ಹಿಂದೂ ಆಗುವುದಕ್ಕೆ ಭಾರತವು ಆತನ 'ಪಿತೃಭೂಮಿ' ಮತ್ತು 'ಪುಣ್ಯಭೂಮಿ' ಆಗಿರಬೇಕು. ಆದ್ದರಿಂದ ಹೊರಗಿನ ಆಕ್ರಮಣಕಾರರ ಸಂತಾನದವರು ಹಿಂದೂ ಆಗಲಾರರು. ಕೆಲವರು ಹಿಂದುಗಳು ಆರ್ಯರಲ್ಲಿ ತಮ್ಮ ವಂಶಮೂಲವನ್ನು ಮತ್ತು ಪರಂಪರೆಯನ್ನು ಕಂಡುಕೊಂಡದ್ದರಿಂದ ಆರ್ಯರು ಭಾರತದ ಮೂಲನಿವಾಸಿಗಳೇ ಆಗಬೇಕಾಯಿತು. ಕ್ರಿಶ್ಚಿಯನ್ ಧರ್ಮ ಮತ್ತು ಇಸ್ಲಾಂ ಧರ್ಮಗಳು ಭಾರತದಲ್ಲಿ ಹುಟ್ಟಲಿಲ್ಲವಾದ್ದರಿಂದ ಅದರ ಅನುಯಾಯಿಗಳು (ಅವರು ಭಾರತದ ಮೂಲನಿವಾಸಿಗಳೇ ಆದರೂ ಸಹ) ಹಿಂದುಗಳಾಗುವುದಿಲ್ಲ. 'ಹಿಂದೂ' ಲಕ್ಷಣ ಸೂತ್ರವು ಅವರನ್ನೂ ಬಿಟ್ಟುಬಿಡುತ್ತದೆ. (ಹಿಂದೂ ಲಕ್ಷಣ ಸೂತ್ರದಲ್ಲೆ ವಿರೋಧಾಭಾಸವಿರುವುದು ಸ್ಪಷ್ಟ).

ಮೊದ ಮೊದಲಿನಲ್ಲಿ ಚರಿತ್ರಕಾರರು ಆರ್ಯರ ಆಕ್ರಮಣವಾದವನ್ನು ಒಪ್ಪಿಕೊಂಡರು. ಅವರಲ್ಲಿ ಕೆಲವರಂತೂ ಪುರಾತತ್ವ ಶಾಸ್ತ್ರಗಳ ಸಾಕ್ಷ್ಯಾಧಾರಗಳು ದೊರೆಯುವ ಮುಂಚೆಯೇ ಸಿಂಧೂ ಕಣಿವೆಯ ಪಟ್ಟಣಗಳ ವಿನಾಶಕ್ಕೆ ಆರ್ಯರ ಆಕ್ರಮಣವೇ ಕಾರಣವೆಂದು ಕೂಡ ವಾದಿಸಿದರು. ಆದರೆ ಇಂಡೋ – ಆರ್ಯನ್ ಭಾಷೆಯು ಈ ಉಪಖಂಡವನ್ನು ಹೇಗೆ ಪ್ರವೇಶಿಸಿತೆಂಬ ಬಗೆಗೆ ವ್ಯಕ್ತವಾದ ಪರ್ಯಾಯ ಸಿದ್ಧಾಂತಗಳ ಕಾರಣದಿಂದಾಗಿ ಆಕ್ರಮಣವಾದವನ್ನು ತಿರಸ್ಕರಿಸಲಾಯಿತು. ೧೯೬೦ರ ಭಾರತದ ಇತಿಹಾಸ ಕಾಂಗ್ರೆಸ್‌ನ ಸಮ್ಮೇಳನವೊಂದರಲ್ಲಿ ''ಇಂಡೋ – ಆರ್ಯನ್ ಭಾಷೆಯು ಹಲವು ವಲಸೆಗಳ ಸರಣಿಯ ಮೂಲಕ ಭಾರತವನ್ನು ಪ್ರವೇಶಿಸಿತು; ಜನರ ಸಂಸ್ಕೃತೀಕರಣದ ಹಲವು ಹಂತಗಳ ಮೂಲಕ ಇಲ್ಲಿ ಹರಡಿತು; ಆದ್ದರಿಂದ ಆಕ್ರಮಣ ವಾದವು ಅಸಮರ್ಥನೀಯ'' ಎಂದು ನಾನು (ರೊಮಿಲಾ ಥಾಪರ್) ಹೇಳಿದ್ದುಂಟು. ಚಾರಿತ್ರಿಕವಾಗಿ ಸುಸಂಬದ್ಧವಾದ ಪ್ರಶ್ನೆಯೆಂದರೆ ಆರ್ಯರ ಪ್ರತ್ಯೇಕ ವಿಶಿಷ್ಟತೆಯದಲ್ಲ; ಒಂದು ದೇಶದ ಭಾಷೆ ಮತ್ತು ಸಂಸ್ಕೃತಿಗಳು ಏಕೆ ಮತ್ತು ಹೇಗೆ ಬದಲಾಗುತ್ತಾ ಬಂದಿವೆ - ಎಂಬುದು.

– ಹೀಗಿದ್ದರೂ ಸಹ ಭಾರತದ ಒಳಗಿನ ಮತ್ತು ಹೊರಗಿನ ಹಿಂದುತ್ವವಾದಿ ಪಂಡಿತರು, ಸತ್ತ ಕುದುರೆಯನ್ನೇ ಬಡಿಯುತ್ತಿದ್ದು, ಈಚಿನ ಇನ್ನೂ ಹೆಚ್ಚು ಪಕ್ವವಾದ ಪರ್ಯಾಯ ಸಿದ್ಧಾಂತಗಳನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಾರೆ. ಇವರಿಗೆ ಹೊಳೆಯುವುದು ಆರ್ಯರು ಆಕ್ರಮಣಕಾರರಲ್ಲದಿದ್ದರೆ ಅವರು ಈ ದೇಶದ ಮೂಲನಿವಾಸಿಗಳಾಗಿರಬೇಕೆಂಬ ಪರ್ಯಾಯ ಮಾತ್ರ. 'ಆಕ್ರಮಣ' ಮತ್ತು 'ಮೂಲನಿವಾಸ'ಗಳೆಂಬ ಎರಡು ಅತಿರೇಕಗಳ ನಡುನಡುವೆ ಹಲವು ಪರ್ಯಾಯ ಸಾಧ್ಯತೆಗಳಿರಬಹುದೆಂಬ ವಿಚಾರದಲ್ಲಿ ಹಿಂದುವಾದಿಗಳಿಗೆ ಆಸಕ್ತಿಯಿಲ್ಲ. ಆರ್ಯರು ಭರತಖಂಡದ ಮೂಲನಿವಾಸಿಗಳೆಂದು ಒತ್ತಿ ಹೇಳುವುದು, ಇವತ್ತಿನ ಹಿಂದೂಗಳು ಆರ್ಯರ ಸಂತಾನ ಪರಂಪರೆಯವರೆಂದೂ ಆದ್ದರಿಂದ, ಚರಿತ್ರೆಯ ಆರಂಭ ಕಾಲದಿಂದಲೂ ಈ ಭೂ

ಪ್ರದೇಶದ ಆನುವಂಶಿಕ ಹಕ್ಕುದಾರರೆಂದೂ ಹೇಳಲು ಅವಕಾಶ ಮಾಡಿಕೊಡುತ್ತದೆ. ಇಷ್ಟನ್ನು ಸಾಧಿಸುವುದಕ್ಕಾಗಿಯೇ ಆರ್ಯರ ಅಸ್ತಿತ್ವವನ್ನು ಅತ್ಯಂತ ಪುರಾತನ ಮೂಲದವರೆಗೂ ತೆಗೆದುಕೊಂಡು ಹೋಗಲಾಗುತ್ತದೆ. ಹೀಗಾಗಿ ಭಾಷಾ ವಿಜ್ಞಾನ, ಪ್ರಾಚ್ಯವಸ್ತು ಸಂಶೋಧನೆ ಮೊದಲಾದವುಗಳಿಂದ ದೊರೆಯುವ ಮಾಹಿತಿಯು ಎಷ್ಟೇ ವಿರೋಧವಾಗಿದ್ದರೂ ಇವರು ತಮ್ಮ ಹಠ ಬಿಡುವುದಿಲ್ಲ. ಋಗ್ವೇದದ ಕರ್ತೃಗಳಾದ ಆರ್ಯರು ಸಿಂಧೂ ಕಣಿವೆಯ ಪಟ್ಟಣ ವಾಸಿಗಳೆಂದೂ ಅಥವಾ ಅದಕ್ಕಿಂತಲೂ ಪೂರ್ವದವರೆಂದೂ ಪಟ್ಟು ಹಿಡಿದು ಸಾಧಿಸಲು ಪ್ರಯತ್ನಿಸುತ್ತಾರೆ.

ಋಗ್ವೇದದಲ್ಲಿ ಬರುವ ಶಬ್ದಗಳನ್ನು ಸಿಂಧೂ ಕಣಿವೆಯ ಉತ್ಖನನದಲ್ಲಿ ದೊರೆತ ವಸ್ತುಗಳೊಡನೆ ಸಮೀಕರಿಸುವ ಮೂಲಕ ಆರ್ಯರ ನಾಗರಿಕತೆಯನ್ನು ಸಾಧಿಸುವ ಪ್ರಯತ್ನಗಳು ನಡೆದಿವೆ. ಋಗ್ವೇದದ ಪಶುಸಾಕಾಣಿಕೆಯ ಗ್ರಾಮ ಮೂಲ ಸಮಾಜವು ಸಿಂಧೂಕಣಿವೆಯ ಸಂಕೀರ್ಣ ನಗರ ಸಮಾಜದೊಡನೆ ಹೊಂದಿಕೊಳ್ಳಲಾರದೆಂಬ ಸರಳ ಸತ್ಯವನ್ನು ಇವರು ಒಪ್ಪುವುದಿಲ್ಲ. ಋಗ್ವೇದದಲ್ಲಾಗಲಿ ತದನಂತರದ ವೇದ ಸಂಹಿತೆಗಳಲ್ಲಾಗಲಿ ಸಿಂಧೂ ಕಣಿವೆಯ ನಗರಗಳಿಗೆ ಹೊಂದುವ ಪ್ರಸ್ತಾಪಗಳಿಲ್ಲ; ಕೆಲವೇ ನಿದರ್ಶನಗಳನ್ನು ಹೇಳಬೇಕೆಂದರೆ, ತಳಪಾಯದ ಮೇಲೆ ನಿರ್ಮಿಸಿದ ಕಟ್ಟಡಗಳು, ಸಮಾನಾಂತರ ಮಾದರಿಯ ರಸ್ತೆಗಳು, ಕ್ರಮಬದ್ಧವಾಗಿ ನಿರ್ಮಿಸಿದ ಒಳ ಚರಂಡಿ ವ್ಯವಸ್ಥೆ, ಧಾನ್ಯ ಶೇಖರಣೆಯ ಕೋಠಿಗಳು, ಸಿದ್ಧವಸ್ತುವನ್ನು ಪ್ರದರ್ಶಿಸುವ ಮಳಿಗೆಗಳು, ದೊಡ್ಡ ಪ್ರಮಾಣದಲ್ಲಿ ಗ್ರಾಹಕ ಸಾಮಗ್ರಿಗಳನ್ನು ತಯಾರಿಸುವ ಕೈಗಾರಿಕಾ ಪ್ರದೇಶಗಳು, ಮುದ್ರೆಗಳು ಮತ್ತು ಅವುಗಳನ್ನು ಉಪಯೋಗಿಸುವ ವಿಧಾನ, ವಸ್ತುಗಳನ್ನು ನಿರ್ಯಾತ ಮಾಡುವಂಥ ಸ್ಥಳಗಳ ಹೆಸರುಗಳು - ಇತ್ಯಾದಿಗಳ ಬಗೆಗೆ ವೈದಿಕ ಗ್ರಂಥಗಳಲ್ಲಿ ಯಾವ ಸೂಚನೆಗಳೂ ಇಲ್ಲ. ಈ ಎರಡೂ ಸಮುದಾಯಗಳು (ಸಿಂಧೂ ಕಣಿವೆಯ ನಾಗರಿಕರು ಮತ್ತು ವೈದಿಕ ಸಾಹಿತ್ಯವನ್ನು ರಚಿಸಿದ ಆರ್ಯರು) ಒಂದೇ ಆಗಿದ್ದಿದ್ದರೆ, ಎರಡೂ ವ್ಯವಸ್ಥೆಗಳು ಕಡೆಯ ಪಕ್ಷ ಸಮರೂಪವಾಗಿ ಇರುತ್ತಿದ್ದುವಲ್ಲವೆ ?

ಸಿಂಧೂ ನಾಗರಿಕತೆಯು ಆರ್ಯ ಮೂಲವೆಂದು ಸಾಧಿಸಬೇಕಾದರೆ, ಅಲ್ಲಿನ ಭಾಷೆಯು ಸಂಸ್ಕೃತದ ಒಂದು ಪ್ರಕಾರವಾದರೂ ಆಗಬೇಕಾಗುತ್ತದೆ. ಸಿಂಧೂ ಲಿಪಿಗಳನ್ನು ಓದಲು, ಅರ್ಥೈಸಲು ಈವರೆಗೆ ಮಾಡಿರುವ ಪ್ರಯತ್ನಗಳಾವುವೂ ಸಫಲವಾಗಿಲ್ಲ; ಅವುಗಳನ್ನು ಸಂಸ್ಕೃತವೆಂದು ಭಾವಿಸಿ ಓದುವ ಪ್ರಯತ್ನ ಕೂಡ ವಿಫಲವಾಗಿದೆ. ಲಿಪಿಗಳನ್ನು ಓದುವ, ಅರ್ಥೈಸುವ ಯಾವುದೇ ಪ್ರಯತ್ನದಲ್ಲಿ ಅನುಸರಿಸಬೇಕಾದ ಭಾಷಾಶಾಸ್ತ್ರ ನಿಯಮಗಳಿವೆ; ಈ ಲಿಪಿಯು ಇಂಥ ಭಾಷೆಯದೆಂದು ಹೇಳುವಾಗ ಅದು ಭಾಷಾ ವಿಶ್ಲೇಷಣೆಯ ನಿಕಷದಲ್ಲಿ ಗೆದ್ದು ಬರಬೇಕಾಗುತ್ತದೆ. ಅಲ್ಲದೆ ಓದುವಿಕೆ ಮತ್ತು ಅರ್ಥೈಸುವಿಕೆಗಳು ಸಂದರ್ಭಕ್ಕೆ ಸಹಜವಾಗಿ ಹೊಂದಿಕೊಳ್ಳುವಂತೆಯೂ ಇರಬೇಕು. ಡಾ|| ರಾಜಾರಾಂ ಮತ್ತು ನಟವರ ಝಾ ಅವರು ಸಿಂಧೂ ಲಿಪಿಗಳನ್ನು ಓದಿದ್ದೇನೆಂದು ಹೇಳಿಕೊಳ್ಳುವುದರಲ್ಲಿ ಮೇಲಿನ ಅಂಶಗಳ ಕೊರತೆ ಎದ್ದುಕಾಣುತ್ತದೆ.

ರಾಜಾರಾಂ ಮತ್ತು ಝಾ ಆಗ್ರಹಪೂರ್ವಕವಾಗಿ ಒತ್ತಿಹೇಳಿ ಪ್ರದರ್ಶಿಸುವ 'ಕುದುರೆ'ಯ ಮುದ್ರೆಯು ಕೂಡ ಗಣಕಯಂತ್ರದ ಮೂಲಕ ಹಿಗ್ಗಿಸಿದ ಪ್ರತಿಬಿಂಬವಾಗಿದೆ; ಎಷ್ಟೇ ಬದಲಾವಣೆಗಳನ್ನು ಮಾಡಿದ್ದರೂ ಸಹ (ಈ ಬದಲಾವಣೆಗಳನ್ನು ಈಗಾಗಲೇ ಚರ್ಚಿಸಿದ್ದಾಗಿದೆ) ಛಾಯಾಚಿತ್ರದಲ್ಲಿರುವ ಪ್ರಾಣಿಯು ಕುದುರೆಯಲ್ಲವೆಂಬುದು ಸ್ಪಷ್ಟ. ಅಷ್ಟೇ ಅಲ್ಲದೆ, ಕುದುರೆಗೆ ವೇದ ಸಂಹಿತೆಗಳಲ್ಲಿರುವಷ್ಟು ಪ್ರಾಧಾನ್ಯವು ಸಿಂಧೂ ನಾಗರಿಕತೆಯಲ್ಲಿ ಇದ್ದದ್ದೇ ಆದರೆ, ಕುದುರೆ ಮತ್ತು ರಥಗಳನ್ನು ತೋರಿಸುವ ಅನೇಕ ಮುದ್ರೆಗಳು ಇರಬೇಕಾಗುತ್ತಲ್ಲವೆ ? ಆದರೆ ಬಹುಸಂಖ್ಯೆಯ ಮುದ್ರೆಗಳಲ್ಲಿರುವುದು ಕುದುರೆಯಾಗಿರದೆ ಏಕಶೃಂಗಿ ವೃಷಭವಾಗಿದೆ.

ಒಟ್ಟಿನ ಮೇಲೆ ಈ ಹಿಂದುತ್ವವಾದಿ ವಿಚಾರಧಾರೆಯು ಪ್ರಾಚೀನ ಭಾರತದ ಇತಿಹಾಸ ತಜ್ಞರು ಎಂದೋ ತಳ್ಳಿಹಾಕಿದ ಸಿದ್ಧಾಂತಗಳನ್ನು ಪುನಃ ಚರ್ಚೆಗೆ ಮುಂದೊಡ್ಡುತ್ತದೆ. ಇದು

ಪ್ರಾಚೀನ ಪರಂಪರೆಯನ್ನು ಅರ್ಥಮಾಡಿಕೊಳ್ಳಲು ಲವಲೇಶವೂ ಸಹಾಯಕವಾಗಿಲ್ಲ. ಮಾಹಿತಿಗಳನ್ನು ಸಂಗ್ರಹಿಸುವ, ಜೋಡಿಸುವ, ವಿಶ್ಲೇಷಿಸುವ ವಿಧಾನಗಳು, ಇದರಿಂದ ಹೊರಡಿಸುವ ಸಾಧಾರಣೀಕರಣಗಳು ಇಂದು ಚರಿತ್ರೆಯ ಅಧ್ಯಯನದಲ್ಲಿ ಒಪ್ಪಿತವಾಗಿರುವ, ಬಳಕೆಯಲ್ಲಿರುವ ನಿಯಮಗಳನ್ನು ಅನುಸರಿಸುವುದಿಲ್ಲ. ಇದರಿಂದ ಚರಿತ್ರೆಯ ಅಧ್ಯಯನದ ಮೇಲೆ ಬೆಳಕು ಬೀಳುವುದೂ ಇಲ್ಲ. ಬದಲಾಗಿ ಇಂದಿನ ರಾಜಕೀಯ ಧೋರಣೆಗಳಿಗೆ ಪ್ರಾಚೀನ ಪರಂಪರೆಯ ನ್ಯಾಯಸಮ್ಮತಿ ಅಥವಾ ಸಮರ್ಥನೆ ಪಡೆಯುವ ಒಂದು ಪ್ರಯೋಗವಾಗಿದೆ, ಅಷ್ಟೆ. ಪ್ರಾಚೀನ ಪರಂಪರೆಯನ್ನು ತಮ್ಮ ಕಲ್ಪನೆಯ ಹಿಂದುತ್ವದ ಅಚ್ಚಿಗೆ ಸರಿಹೊಂದುವಂತೆ ಪರಿಷ್ಕರಿಸುವುದರಿಂದ ಮಾತ್ರ ಹಿಂದುತ್ವದೊಡನೆ ಐಕ್ಯತೆ ಸಾಧಿಸಿಕೊಳ್ಳುವುದು ಸಾಧ್ಯವೆಂದು ಭಾವಿಸಿರುವುದು ಇಲ್ಲಿನ ವಿಪರ್ಯಾಸ. ಸದ್ಯದಲ್ಲಿ ನಡೆಯುತ್ತಿರುವ ಬೆಳವಣಿಗೆಗಳನ್ನು ನೋಡಿದರೆ, ಬೌದ್ಧಿಕ ಸಂಶೋಧನಗಳಿಲ್ಲದ, ಏಕಮುಖ ಸಾಂದರ್ಭಿಕ ವ್ಯಾಖ್ಯಾನಗಳಿಂದ ಕೂಡಿದ ಉದ್ಧಟತನದ ಇತಿಹಾಸ ಗ್ರಂಥಗಳು ರಚನೆಯಾಗುವ ಸೂಚನೆಗಳಿವೆ. ಪರ್ಯಾಯ ಅಭಿಪ್ರಾಯಗಳಿಗೆ ಅವಕಾಶಕೊಡದ ಇಂಥ ಉದ್ಧಟತನವು ಬಹುತೇಕ ಕೀಳರಿಮೆ ಮತ್ತು ಚರ್ಚೆಗೆ ತೆರೆಯಲಾಗದ ಭಯದಿಂದ ಹುಟ್ಟುತ್ತದೆಯೆಂಬುದನ್ನು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ಹಿಂದುತ್ವ ಸಿದ್ಧಾಂತಗಳಿಗೆ ಹೊಂದಿಕೊಳ್ಳದ ಇತಿಹಾಸ ಸಂಪುಟಗಳ ಪ್ರಕಟಣೆಯನ್ನು ತಡೆಹಿಡಿಯುವ ನಿರ್ಧಾರ ಕೂಡ ಹೊರಬಿದ್ದಿದೆ.

ಪಠ್ಯ ಪುಸ್ತಕಗಳ ಮೂಲಕ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಬೋಧಿಸುವ ಮತ್ತು ಸಂಶೋಧನಾ ಸಂಸ್ಥೆಗಳ ಮೇಲೆ ಹೇರುವ 'ಹಿಂದುತ್ವವಾದಿ'ಗಳ ಇತಿಹಾಸ ಗ್ರಂಥಗಳು ಸಾಕ್ಷ್ಯಾಧಾರಗಳನ್ನು ಕುರಿತ ಚರ್ಚೆಯನ್ನು, ಪರ್ಯಾಯ ವ್ಯಾಖ್ಯಾನಗಳನ್ನು, ನಿರಾಕರಿಸುತ್ತವೆ. ಇತಿಹಾಸ ವಿಶ್ಲೇಷಣೆಗಾಗಿ ಸಂಶೋಧನಾ ಕೇಂದ್ರಗಳಲ್ಲಿ ಬಳಸುತ್ತಿರುವ ಆಧುನಿಕ, ವೈಜ್ಞಾನಿಕ ವಿಧಾನಗಳಲ್ಲಿ ಇವರಿಗೆ (ಹಿಂದುತ್ವವಾದಿಗಳಿಗೆ) ಆಸಕ್ತಿಯಿಲ್ಲ. ಅಂತಹ ಇತಿಹಾಸ ಸಂಶೋಧನೆಗಳಿಗೆ 'ಪಾಶ್ಚಿಮಾತ್ಯ', 'ವಸಾಹತುಶಾಹಿ', 'ಮಾರ್ಕ್ಸ್‌ವಾದಿ' ಇತ್ಯಾದಿ ಹಣೆಪಟ್ಟಿಗಳನ್ನು ಹಚ್ಚಿ ಇವರು ತಿರಸ್ಕರಿಸುತ್ತಾರೆ; ಆದರೆ ತಾವು ಹಚ್ಚುವ ಹಣೆ ಪಟ್ಟಿಗಳ ಅರ್ಥವೇನೆಂಬುದಾಗಲಿ, ಇತಿಹಾಸ ಸಂಶೋಧನೆಯ ಸ್ವರೂಪವಾಗಲಿ, ಚರಿತ್ರೆಯ ವ್ಯಾಖ್ಯಾನಕ್ಕೆ ಅಗತ್ಯವಾದ ಸಾಮಾಜಿಕ ತಳಹದಿಯಾಗಲಿ ಇವರಿಗೆ ದಕ್ಕಿಲ್ಲ. ಇಂಜಿನಿಯರುಗಳು, ಗಣಕಯಂತ್ರ ಪರಿಣತರು, ರಾಜಕೀಯಕ್ಕೆ ಹೊರಳಿದ ಪತ್ರಿಕೋದ್ಯಮಿಗಳು ಎಲ್ಲರೂ 'ಇಂಡಾಲಜಿ' ಪಂಡಿತರ ಸೋಗು ಹಾಕುತ್ತಾರೆ. ಪುರಾತತ್ವಶಾಸ್ತ್ರ ಮತ್ತು ಇತಿಹಾಸಗಳ ಬಗೆಗೆ 'ಇದಮಿತ್ಥಂ' ಎಂಬಂತೆ ಖಡಾಖಂಡಿತವಾಗಿ ಪ್ರವಚನ ನೀಡುತ್ತಾರೆ. ಮಾಧ್ಯಮಗಳು ಇಂಥವರಿಗೆ ಹೆಚ್ಚಿನ ಪ್ರಚಾರ, ಸ್ಥಾನಮಾನಗಳನ್ನು ನೀಡುತ್ತವೆ.

ಡಾ|| ರಾಜಾರಾಂ ಮತ್ತು ಝಾ ಇವರು ಹರಪ್ಪ ಲಿಪಿಗಳನ್ನು ಓದಿ, ಅರ್ಥೈಸಿರುವುದಾಗಿ ಹೇಳುತ್ತ, ಸಿಂಧೂ ನಾಗರಿಕತೆಯು ಆರ್ಯರದೇ ಎಂದು ಸಾಧಿಸಹೊರಟಿರುವ ವಿಚಾರದಲ್ಲಿ ವಿಟ್ಜೆಲ್ ಮತ್ತು ಫಾರ್ಮರ್ ಬರೆದಿರುವ ಲೇಖನವು ಗಂಭೀರ, ವಸ್ತುನಿಷ್ಠ ವಿಮರ್ಶೆಯಾಗಿದೆ. ಈ ವಿಮರ್ಶೆಯನ್ನು ಮೊದಲು ಅಂತರ್ಜಾಲದಲ್ಲಿ ಪ್ರಸಾರ ಮಾಡಲಾಯಿತು. ಆದರೆ, ಭಾರತದಲ್ಲಿ ಅಂತರ್ಜಾಲ ಸೌಲಭ್ಯವನ್ನು ಬಳಸಿಕೊಳ್ಳಬಲ್ಲ ವಿದ್ವಾಂಸರು ಇನ್ನೂ ಕೆಲವೇ ಜನ ಮಾತ್ರ. ಆದ್ದರಿಂದ ಈ ಲೇಖನವನ್ನು ಪತ್ರಿಕೆಯಲ್ಲಿ ಪ್ರಕಟಿಸುವುದು ಅಗತ್ಯವಿದೆ. ಆ ಮೂಲಕ, ಮಾಧ್ಯಮಗಳು ತಮಗೆ ಸಾಕಷ್ಟು ಪರಿಚಯವಿಲ್ಲದ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಕೇವಲ ಪ್ರಚೋದನಾತ್ಮಕವಾಗಿವೆಯೆಂಬ ಕಾರಣದಿಂದ ಪ್ರಸಾರ ಮಾಡಲು ಮುನ್ನುಗ್ಗದಂತೆ ತಡೆಯುವ ಪಾಠ ಕಲಿಸಬೇಕಾಗಿದೆ. ಅಲ್ಲದೆ, ಸಾಮಾನ್ಯ ಜನರಿಗೂ ಈ ಚರ್ಚೆಯು ನಿಲುಕುವಂತೆ ಮಾಡಿ, ಅವರು ಪ್ರಚೋದನಾತ್ಮಕ ಬರವಣಿಗೆಯಿಂದ ಮೋಸಹೋಗದಂತೆ ನೋಡಿಕೊಳ್ಳುವುದು ಕೂಡ ನಡೆಯಬೇಕಾದ ಕೆಲಸವೇ. ನಮ್ಮ ದೇಶದಲ್ಲಿ ಪುಸ್ತಕ ಭಂಡಾರಗಳ ತೀವ್ರ ಕೊರತೆಯಿದ್ದು, ಪ್ರಾಚೀನ ಇತಿಹಾಸದ ಅಧ್ಯಯನವನ್ನು ಪರಿಣಾಮಕಾರಿಯಾಗಿ ಮಾಡಬೇಕಾದರೆ, ಕ್ರಾಂತಿಕಾರಕವಾಗಿ ಪುಸ್ತಕ ಭಂಡಾರಗಳನ್ನು ಉತ್ತಮಪಡಿಸಬೇಕಾದ ಅಗತ್ಯವನ್ನು ಲೇಖನವು ಎತ್ತಿ ತೋರಿಸುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಹಿಂದುತ್ವವಾದದ ಸಮರ್ಥಕರು ಚಾರಿತ್ರಿಕ ಆಧಾರಗಳನ್ನು ಯಾವ ಮಟ್ಟಿಗೆ ತಿರುಚಬಲ್ಲರೆಂಬುದನ್ನು ಲೇಖನವು, ಅತ್ಯಂತ ಸಮರ್ಥವಾಗಿ ಪ್ರತಿಪಾದಿಸುತ್ತದೆ.

ಲಭ್ಯವಿರುವ 'ಅಶ್ವಮುದ್ರೆ' (ಮೆಕಾಯ್ 453)



ಪುನರ್ನಿರ್ಮಿತಿಗೊಂಡ ಮುದ್ರೆ



– ಇದು ರೊಮಿಲಾ ಅವರ ವಿಮರ್ಶೆಯ ಸಾರವಾಗಿದೆ.

ಕಡೆಯದಾಗಿ ಲೇಖಕ ಡಾ|| ರಾಜಾರಾಂ ಪರಿಚಯದ ಎರಡು ಮಾತು : ಇವರು ಹಲವಾರು ಕ್ಷೇತ್ರಗಳಲ್ಲಿ ಪರಿಣತರು. ೨೦೦೦ ವರ್ಷಗಳ ಹಿಂದಿನ ಯಹೂದಿಗಳ ಕ್ಯುಮ್ರಾನ್ ಚರ್ಮ ಕಾಗದದ ಸುರುಳಿಗಳಿಂದ ಹಿಡಿದು ಆಧುನಿಕ ಕ್ರೈಸ್ತ ಧರ್ಮದವರೆಗೆ; ಯೂರೋಪಿನ ಚರಿತ್ರೆಯಿಂದ ಹಿಡಿದು ವಿಶ್ವ ವ್ಯವಸ್ಥಾಶಾಸ್ತ್ರದವರೆಗೆ; ಇತ್ಯಾದಿ. (ಇವೆಲ್ಲಾ, ಅಮೆರಿಕಾ ಸಂಯುಕ್ತ ಸಂಸ್ಥಾನದ ನಾಸಾ ಮತ್ತು ಕೃತಕ ಬುದ್ಧಿಶಕ್ತಿಯ ವಿಜ್ಞಾನಿಯಾಗಿ ೧೯೯೦ರ ವರೆಗೆ ಬಿಡುವಿಲ್ಲದ, ಬಹು ಜವಾಬ್ದಾರಿಯ ಉದ್ಯೋಗವನ್ನೂ ನಿರ್ವಹಿಸಿದ್ದರ ಜೊತೆಗೆ). ಇವರು ವೃತ್ತಪತ್ರಿಕೆಗಳಿಗೆ, ನಿಯತಕಾಲಿಕಗಳಿಗೆ ಮತ್ತು ಭಾರತೀಯವೆಂದು ಹೇಳಿಕೊಳ್ಳುವ ಆದರೆ ಅಮೆರಿಕಾದಲ್ಲಿ ನೆಲೆಯೂರಿರುವ 'ಸತ್ಯದ ಖಡ್ಗ' 'ಹಿಂದು ವಿವೇಕ ಕೇಂದ್ರ' 'ಹಿಂದುತ್ವ'ಗಳಂಥ 'ಅಂತರ್ಜಾಲ ನೆಲೆ'ಗಳಿಗೆ ವಿಪುಲವಾಗಿ ಬರೆಯುತ್ತಾರೆ. ಅತ್ಯಂತ ಸಮೃದ್ಧವಾಗಿ ಉತ್ಪಾದಿಸುವ, ಅನ್ಯಾಕ್ರಮಣಶೀಲ ಸ್ವದೇಶ ಪ್ರೇಮಿಗಳಲ್ಲಿ ಒಬ್ಬರಾದ ಇವರು ಹೇಳಿದ್ದನ್ನೇ ಹೇಳಿ ತಲೆ ಚಿಟ್ಟು ಹಿಡಿಸುವುದು ಉಂಟೇ ಉಂಟು. ಪಾಶ್ಚಿಮಾತ್ಯ 'ಇಂಡಾಲಜಿ' ಅಧ್ಯಯನಗಳು (ಇವತ್ತಿನ ಕಾಲದಲ್ಲಿ ಕೂಡ ಯುರೋಪು ಕೇಂದ್ರವಾಗುಳ್ಳ ಮಿಷನರಿಗಳ ಕೊಡುಗೆ ಎಂಬ ಅರ್ಥವುಳ್ಳದ್ದು), ಮಾರ್ಕ್ಸ್‌ವಾದಿಗಳೆನ್ನುವ ದೆಹಲಿಯ ಇತಿಹಾಸ ತಜ್ಞರು, ಭಾರತದೊಳಗಿನ ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರು ಇವರತ್ತ ತಾರತಮ್ಯ ಜ್ಞಾನವಿಲ್ಲದೆ ನಿಂದನೆಯನ್ನು ಝಳಪಿಸುತ್ತಾರೆ; ಮತೀಯ ದ್ವೇಷವನ್ನು ಕೆರಳಿಸುತ್ತಾರೆ; ಯಾವತ್ತು ಇಲ್ಲದ ಸ್ವಕಪೋಲ ಕಲ್ಪಿತ ಆದರ್ಶಪೂರ್ಣ ಚಿರಸ್ಥಾಯಿ ಭಾರತದ ಕನಸು ಕಾಣಲು ಶ್ರಮಿಸುತ್ತಾರೆ. ಇವರು ಯಾವೊಂದು ಮಟ್ಟದ ಹತಾಶ ಪ್ರಯತ್ನಕ್ಕೆ ಇಳಿಯಬಲ್ಲರೆಂಬುದಕ್ಕೆ PILTDOWN HORSE ಒಂದು ನಿದರ್ಶನವಾಗಿದೆ. ಇವರ ಒಂದೇ ಒಂದು ಮುದ್ರಿಕೆಯ (No. 64) ಓದನ್ನು ಅವರ ಲೇಖನದ ಬಗ್ಗೆ ಒಪ್ಪಬಹುದು :

ಎಂಥ ಅಪಮಾನಕರ ! (A great disgrace indeed)

ಇಷ್ಟಾದರೂ ಈ ವಿದ್ವಾಂಸರಿಗೆ ಸಂಕೋಚವೆಂಬುದಿಲ್ಲ. ಸರ್ಕಾರದಲ್ಲಿರುವ ಇವರ ಹಲವು ಸ್ನೇಹಿತರು ಇವರು ಸರಸ್ವತೀ ನದಿಯನ್ನು ಕುರಿತು ಬರೆದ ಜನಪ್ರಿಯ ಗ್ರಂಥವನ್ನು ಇಂಗ್ಲಿಷ್ ಮತ್ತು ಇತರ ಹದಿಮೂರು ಭಾಷೆಗಳಲ್ಲಿ ಪ್ರಕಟಿಸುವಂತೆ (ಕನ್ನಡದಲ್ಲಿ ''ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ'' ಎಂಬ ಹೆಸರಿನಲ್ಲಿ ಸಂಗ್ರಹಾನುವಾದವು ಪ್ರಕಟವಾಗಿದೆ.) ಪುಸ್ತಕ ಭಂಡಾರಕ್ಕೆ ಸಲಹೆ ಮಾಡಿದ್ದಾರೆಂದು ಜಂಬ ಕೊಚ್ಚಿಕೊಳ್ಳುತ್ತಾರೆ. ವಿದ್ಯಾಧಿದೇವತೆ ಸರಸ್ವತಿಯು ನಮ್ಮೆಲ್ಲರನ್ನು ಕಾಪಾಡಲಿ !

ಡಾ || ಕೆ. ಎಲ್. ಗೋಪಾಲಕೃಷ್ಣಯ್ಯ
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

# ಕೂಡುಕಟ್ಟು

ಡಾ॥ ಪುರುಷೋತ್ತಮ ಬಿಳಿಮಲೆ

ಪ್ರಕಾಶಕರು
ಆನಂದಕಂದ ಪ್ರಕಾಶನ ಗ್ರಂಥಮಾಲೆ,
ಮಲ್ಲಾಡಿಹಳ್ಳಿ

ಪುಟ : ೨೪೮ ಬೆಲೆ : ರೂ. ೧೧೦

'ಕೂಡುಕಟ್ಟು' ನಾನು ಈಗಿತ್ತಲಾಗಿ ಓದಿದ ಪುಸ್ತಕಗಳಲ್ಲಿ ಒಂದು. ಇದು ಜನಪದ ಅಧ್ಯಯನದ ಲೇಖನಗಳ ಗುಚ್ಛ. ಜನಪದ ಅಧ್ಯಯನ ಈಗ ಕೇವಲ ಸಾಹಿತ್ಯದ ಆಸಕ್ತಿಗಾಗಿ ಅಭ್ಯಾಸ ಮಾಡುವ ಅಥವಾ ರಸಗ್ರಹಣ ಮಾಡುವ ಹಂತವನ್ನು ದಾಟಿಹೋಗಿದೆ. ಅದರ ಅಭ್ಯಾಸ ಸ್ವರೂಪ ಸಮಾಜಶಾಸ್ತ್ರೀಯವಾದುದು. ಡಾ॥ ಪುರುಷೋತ್ತಮ ಬಿಳಿಮಲೆ ಜನಪದ ಅಧ್ಯಯನಕ್ಕೆ ಅನ್ಯಶಾಸ್ತ್ರೀಯ ಅಭ್ಯಾಸವನ್ನು ಅಳವಡಿಸಿಕೊಳ್ಳುವ ಜಾಯಮಾನದವರು. ಇದಕ್ಕೆ ಇಲ್ಲಿರುವ ಎಲ್ಲ ಬರಹಗಳೂ ಉದಾಹರಣೆಗಳಾಗುತ್ತವೆ.

ಮೊದಲ ಲೇಖನ ಮೈಲಾರ : ಮದುವೆ, ವಾಸ್ತು, ಜಾತ್ರೆ ಮತ್ತು ಚರಿತ್ರೆ ಎಂಬುದಾಗಿದೆ. 'ಮೈಲಾರ' ಕರ್ನಾಟಕದಲ್ಲಿ ಬಹಳ ಪ್ರಸಿದ್ಧವಾದ ದೇವತೆ. ಬಿಳಿಮಲೆಯವರು ಮೈಲಾರ ಜಾತ್ರೆಯಲ್ಲಿ ನಡೆಯುವ ದೈವಿಕ ಚಡಂಗ (ರಿಚ್ಯುವಲ್ಸ್)ದಲ್ಲಿ ಅಡಕವಾಗಿ ಕೊಂಡಿರುವ ಚರಿತ್ರೆಯನ್ನು ಹೊರತೆಗೆಯುತ್ತಾರೆ. 'ಮೈಲಾರ'ನ ಮೂರು ಮದುವೆಗಳು ಕೋಮಾಲಿಯ ಮೂಲಕವಾಗಿ ಮೂಲನಿವಾಸಿಗಳಾದ ದಲಿತವರ್ಗ, ಕುರುಬತ್ತೆವ್ವನ ಮೂಲಕ ವಲಸೆಗಾರ ಕುರುಬ ವರ್ಗ ಮತ್ತು ಗಂಗವ್ವನ ಮೂಲಕ ಆರ್ಥಿಕಾಭಿವೃದ್ಧಿ ಸಾಧಿಸಿದ ವರ್ತಕ ವರ್ಗಗಳ ಚರಿತ್ರೆಯಾಗುತ್ತದೆ. ಮೊದಲ ಹಂತದಲ್ಲಿ ದಲಿತರೊಡನೆ ನಡೆದ ಸಂಘರ್ಷ ಮತ್ತು ಸಮನ್ವಯದ್ದಾದರೆ ಎರಡನೇ ಹಂತದಲ್ಲಿ ಕುರುಬರೊಡನೆ ಹಾಗೂ ಕೊನೆಯ ಹಂತ ವರ್ತಕ ವರ್ಗದೊಡನೆಯದೆಂದು ತಿಳಿಯಲಾಗುತ್ತದೆ.

'ಸಾಂಸ್ಕೃತಿಕ ಅನನ್ಯನತೆಯ ಹುಡುಕಾಟ'ದಲ್ಲಿ ಕರ್ನಾಟಕದ ಬಹುರೂಪಿ ಸಂಸ್ಕೃತಿಯ ಅಧ್ಯಯನವಿದೆ. ಇಂದಿನ ದೇಶೀಯತೆ, ದೇಸಿ ಚಿಂತನೆ ಹೊತ್ತಿನಲ್ಲಿ ಬಹಳ ಮಹತ್ವದ ಚಿಂತನೆ ಇದಾಗಿದೆ. ''ಜಾನಪದದ ಮೂಲಕ ನಮ್ಮ ಜನರ ಸಾಂಸ್ಕೃತಿಕ ಅನನ್ಯತೆಯನ್ನು ಪರಿಶೀಲಿಸ ಬೇಕು. ಅದರ ವೈವಿಧ್ಯಗಳ ಮೂಲಕ ಏಕರೂಪಿ ಆಕ್ರಮಣವನ್ನು ಮತ್ತು ಸೃಜನಶೀಲ ಸಾಮರ್ಥ್ಯ ನಾಶವಾಗದಂತೆ ಎಚ್ಚರ ವಹಿಸಬೇಕು'' ಎಂದು ಹೇಳುವ ಅವರು ಅದನ್ನು ಆರ್ಥಿಕ ಹಾಗೂ ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ.

'ಕರ್ನಾಟಕದ ಜಾನಪದ ಲೋಕದೃಷ್ಟಿಯ ಪರಿಶೀಲನೆ' ಯಲ್ಲಿ ಭ್ರಮಾತ್ಮೀಕರಣಕ್ಕೆ ಗುರಿಯಾಗುವುದನ್ನೂ ಮತ್ತು ಶ್ರೇಣೀಕರಣ ವ್ಯವಸ್ಥೆಗೆ ವಿರುದ್ಧವಾದ ತತ್ವಜ್ಞಾನ ರೂಪಿಸುವುದನ್ನೂ ಅಭ್ಯಸಿಸಲಾಗಿದೆ. ಆಶ್ಚರ್ಯವೆಂದರೆ ಜನಪದ ಲೋಕದೃಷ್ಟಿ ಪುನರ್ಜನ್ಮವನ್ನು ನಿರಾಕರಿಸುತ್ತದೆಂಬ ಮಹತ್ವದ ವಿಚಾರ ಇಲ್ಲಿದೆ.

'ಜನಪದ ಸಾಹಿತ್ಯ, ಚರಿತ್ರೆ, ಪುರಾಣ, ಮನಸ್ಸು' ಲೇಖನದಲ್ಲಿ ಶಿಷ್ಟ ಪುರಾಣಕ್ಕೂ, ಪರಿಶಿಷ್ಟ ಪುರಾಣಕ್ಕೂ ಇರುವ ವೈರುಧ್ಯವನ್ನು ವಿವರಿಸಿದ್ದಾರೆ. ಕತೆಯು ಐತಿಹ್ಯವಾಗಿ, ಐತಿಹ್ಯಗಳು ಪುರಾಣವಾಗಿ ಮಾರ್ಪಡುವ ಬಗೆಯ ಸೂಕ್ಷ್ಮ ಪರಿಶೀಲನೆ ಇಲ್ಲಿದೆ. ಇಲ್ಲಿ ಸಾಮಾನ್ಯ ವೀರರೇ ದೈವವಾಗುತ್ತಾರೆ. ಶಿಷ್ಟ ಪುರಾಣಗಳನ್ನು ದೂರೇ ಇಟ್ಟು ರಚನೆ ಮಾಡಿದ ಜನಪದ ಪುರಾಣಗಳು ನಿರ್ಲಕ್ಷ್ಯಕ್ಕೆ ಒಳಗಾಗುವುದರ ಹಿಂದಿರುವ ರಾಜಕೀಯದ ಕಡೆ ಗಮನ ಸೆಳೆಯುತ್ತಾರೆ.

'ಯಕ್ಷಗಾನ ಪ್ರದರ್ಶನ'ದಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದಲ್ಲಿ ಕೂಡಿ ೩೩ ವೃತ್ತಿನಿರತ ಮತ್ತು ೬೦೦ ಹವ್ಯಾಸಿ ಮೇಳಗಳಿದ್ದಾವೆ ಎಂದಿದ್ದಾರೆ ! ಯಕ್ಷಗಾನ ನಟರ ಜಾತಿ ಮತ್ತು ಆರ್ಥಿಕ ಸ್ಥಿತಿ, ಅವರ ವೃತ್ತಿಯ ಮೇಲೆ ಪ್ರಭಾವ ಮಾಡುವ ರಾಜಕೀಯದ ಹಿನ್ನೆಲೆಯ ಕುರಿತೂ ಇಲ್ಲಿ ವಿಶ್ಲೇಷಣೆ ಇದೆ. ''ಈ ಬ್ರಾಹ್ಮಣ-ಶೂದ್ರ ಪ್ರಶ್ನೆ ರಂಗದಲ್ಲಿ ತೋರಿಕೆಗೆ ಗೌಣವಾಗಿಯೇನೋ ಉಳಿಯಿತು. ಆದರೆ ನಟರು ಧರಿಸುವ ಪಾತ್ರದಲ್ಲಿ ಅದು ತಾನೇ ತಾನಾಗಿ ಪ್ರಕಟವಾಗುತ್ತ ಹೋಯಿತು. ದೇವರು ಧರ್ಮಕ್ಕೆ ಸಂಬಂಧಿಸಿದ ಪಾತ್ರಗಳಲ್ಲಿ ಬ್ರಾಹ್ಮಣರು ಕಾಣಿಸಿಕೊಂಡರೆ ರಾಕ್ಷಸ ಅಧರ್ಮಕ್ಕೆ ಸಂಬಂಧಿಸಿದ ಪಾತ್ರಗಳಲ್ಲಿ ಶೂದ್ರರು ಕಾಣಿಸಿಕೊಂಡರು. ರಂಗದ ಮೇಲಿನ ಈ ಸಂಘರ್ಷ ಇಪ್ಪತ್ತನೇ ಶತಮಾನದ ಎಪ್ಪತ್ತನೇ ದಶಕದ ಕೊನೆಗೆ ತುಳು ಯಕ್ಷಗಾನದ ಆರಂಭದಿಂದಾಗಿ ಸ್ಫೋಟಗೊಂಡಿತು'' ಎಂದು ಹೇಳುತ್ತಾರೆ. ಇದರಲ್ಲಿ ಇನ್ನೂ ಪರಿಶೀಲನೆಗೆ ಒಳಪಡಿಸಬಹುದಾದ ಪ್ರಶ್ನೆಗಳಿಗೆ ಅವಕಾಶವಿದೆ.

ಜನಪದ ಆಟದಲ್ಲಿ 'ಆಟಂಬಳ್ಳಿ ಅಡಗೀ ಬಟ್ಲ' ಆಟವನ್ನು ಎತ್ತಿಕೊಂಡು ಅದರ ರಚನೀಕರಣ ಮತ್ತು ಪ್ರದರ್ಶನವನ್ನು ವಿಶ್ಲೇಷಿಸಿದ್ದಾರೆ.

ಸಂಕಲನದಲ್ಲಿ ಮನಸೆಳೆಯುವ ಮತ್ತೆರಡು ಪ್ರಬಂಧಗಳು ''ಜನಪದ ಕತೆ : ನಾಗಮಂಡಲದ ಅಭ್ಯಾಸ'' ಮತ್ತು ''ಮಹಿಳಾ ಜಾನಪದ : ಮಹಿಳಾ ಶಕ್ತಿ ಮೂಲಗಳ ಶೋಧ'' ಎಂಬುದಾಗಿವೆ. ಮೊದಲು ಜನಪದ ಕತೆಯನ್ನು ಸಂಕ್ಷಿಪ್ತವಾಗಿ ಕೊಟ್ಟ ನಂತರ ಗಿರೀಶ ಕಾರ್ನಾಡರ 'ನಾಗಮಂಡಲ' ನಾಟಕದ ಮುಖ್ಯ ಘಟನೆಗಳೊಡನೆ ತೌಲನಿಕ ಅಭ್ಯಾಸ ಮಾಡುತ್ತಾರೆ. ನಾಗಮಂಡಲದಂಥ ಒಂದು ಕತೆ ಜಾನಪದದಲ್ಲಿ ಇದೆ ಎಂಬುದೇ ಒಂದು ಆಶ್ಚರ್ಯ. ಇದು ಇದ್ದಕ್ಕಿದ್ದಂತೆ ನಾಟಕವಾದರೂ ಅದ್ಭುತವೇ ಇರುತ್ತಿತ್ತು. ಗಿರೀಶರ ಕೈಯಲ್ಲಿ ಅದು ಆಧುನಿಕ ಅನುಭವದ ಅಭಿವ್ಯಕ್ತಿ ಕೂಡ ಆಗಿದೆ. ಆದರೆ ಗಿರೀಶರು ''ಆಧುನಿಕ ಅನುಭವಗಳು ಮೊದಲೂ ಇದ್ದವು ನೋಡಿ. ನಮ್ಮ ಸಂಸ್ಕೃತಿ ಎಷ್ಟು ಶ್ರೇಷ್ಠ'' ಎಂದು ತಪ್ಪಿಯೂ ಹೇಳುವುದಿಲ್ಲ. ''ವರ್ತಮಾನದ ಹಂಗಿಲ್ಲದೆ ಅವರಿಗೆ ಭೂತಕಾಲವನ್ನು ನೋಡಲು ಸಾಧ್ಯವಾಗುವುದಿಲ್ಲ'' ಎಂಬ ಮೆಚ್ಚಿಗೆಯನ್ನು ತೋರಿದ್ದಾರೆ. ''ಗಿರೀಶರು ನಮ್ಮ ನಡುವಿನ ಅತ್ಯಂತ ಪ್ರಭಾವಶಾಲಿ ನಾಟಕಕಾರರೆಂಬುದರಲ್ಲಿ ಸಂದೇಹವಿಲ್ಲ.'' ಆದರೂ ''ಅವರ ಕೈಯಲ್ಲಿ ಸ್ತ್ರೀ ಕೇಂದ್ರಿತ ಜಾನಪದ ದ್ರವ್ಯವು ಪುರುಷ ಕೇಂದ್ರಿತ ಜಾನಪದ ದ್ರವ್ಯವಾಗಿ ಮಾರ್ಪಟ್ಟಿರುವುದು ತುಂಬ ಕುತೂಹಲದ ವಿಷಯವಾಗಿದೆ. ಗಂಡಸಿನ ಅಹಂಕಾರದ ವಲಯವನ್ನು ಛಿದ್ರಗೊಳಿಸಲು ಇವರಿಗೆ ಸಾಧ್ಯವಾಗಿಲ್ಲ'' ಎಂಬ ನಿರ್ಣಯವನ್ನು ಮಾಡುತ್ತಾರೆ.

ಸ್ತ್ರೀವಾದಿ ನೆಲೆಯು ಈಗ ಸಾಹಿತ್ಯಿಕ ಚರ್ಚೆಯಲ್ಲಿ ಮಹತ್ವದ ಸ್ಥಾನ ಪಡೆಯುತ್ತಿರುವಾಗ 'ಮಹಿಳಾ ಜಾನಪದ' ಮಹತ್ವದ್ದಾಗಿದೆ. ತುಂಬ ಎಚ್ಚರದಲ್ಲಿ ಹಾಡು, ಗಾದೆ, ಒಗಟು, ಪಾಡ್ದನಗಳ ಚರ್ಚೆಯ ಮುಖಾಂತರ ಸ್ತ್ರೀವಾದಿ ಸಾಹಿತ್ಯಕ್ಕೆ ಒಂದು ಪರಂಪರೆಯನ್ನು ಕಟ್ಟಿಕೊಡುವುದು ಮಹತ್ವದ್ದಾಗಿದೆ. ಇಂಥ ಸಾಂಸ್ಕೃತಿಕ ಪ್ರಭಾವ ಪರಿಣಾಮವನ್ನು ಪ್ರಾಸ ಪದ್ಯದಿಂದ ಹಿಡಿದು ಮಕ್ಕಳು ಆಡುವ ಆಟದಲ್ಲೂ ಗುರುತಿಸಿಕೊಡುವ ಅವರ ಸೂಕ್ಷ್ಮ ನಿರೀಕ್ಷೆ ಗಮನೀಯವಾದುದು. ಗ್ರಾಮೀಣ ಸಂದರ್ಭದಲ್ಲೂ ಸ್ತ್ರೀವಾದಿ ಚಳವಳಿ ಎದುರಿಸಬೇಕಾದ, ಎತ್ತಿಕೊಳ್ಳಬೇಕಾದ ಸಮಸ್ಯೆಗಳ ಕಡೆಗೂ ಗಮನ ಸೆಳೆಯುತ್ತಾರೆ.

ಒಟ್ಟಾರೆಯಾಗಿ 'ಕೂಡುಕಟ್ಟು' ಜನಪದ ಸಂಶೋಧನೆಯಲ್ಲಿ ಮಾತ್ರವಲ್ಲ, ಸಮಾಜಶಾಸ್ತ್ರೀಯ ಅಭ್ಯಾಸವಾಗಿ ಕೂಡ ಗುರುತಿಸಿಕೊಳ್ಳಬೇಕಾದ ಮಹತ್ವದ ಪುಸ್ತಕ.

ಡಾ॥ ಆರ್. ವಿ. ಭಂಡಾರಿ
ಅರೆಅಂಗಡಿ, ೫೮೧ ೪೩೦, ಹೊನ್ನಾವರ - ಉ. ಕ.

## ವ್ಯತ್ಯಾಸ

ಸ್ವಾಮಿ
ನಾವ್ ರೈತರು
ಮೈ ಬಗ್ಗಿಸಿ ಬೆಳೆವವರು

ನೀವ್ ಅದ ತಿಂದು - ತೇಗಿ
ಶಹರದಲಿ ಕುಂತು
ಕುಂಡಿ ಬೆಳೆಸಿಕೊಂಡವರು

ನಾವ್
ಬೆಳೆದದ್ದೆಲ್ಲ ನಿಮ್
ಬಾಯ್ಗಾಕಿ
ಹಸಿವಿನಿಂದ ಸತ್ತವರು

ಸುಕುಮಾರ ಅಜ್ಜೇಶ್ವರ
ಬೆಂಗಳೂರು



# ಎಚ್ಚರಿಕೆಯ ಗಂಟೆ !




ಪ್ರಿಯ ಯಜಮಾನಪ್ಪನವರಿಗೆ ನಮಸ್ಕಾರಗಳು.

ಒಂದೆರಡು ತಿಂಗಳು ನಾಪತ್ತೆಯಾಗುತ್ತಾನೆ, ಈಗ ಇದ್ದಕ್ಕಿದ್ದಂತೆ ದಿಲ್ಲಿಯಿಂದಲೇ ರೈಲು ಬಿಡುತ್ತಾನಲ್ಲ ಎಂದು ನಿಮಗೆ ಅಚ್ಚರಿಯಾಗಬಹುದು...

ತೆಹಲ್ಕಾ ಎಚ್ಚರಿಕೆಯ ಗಂಟೆ ದನಿ ಗೊಂದಲಪುರಕ್ಕೂ ಕೇಳಿಸಿ ಗಾಬರಿಯಾಯಿತು. ಇಂಥ ಸ್ಥಿತಿಯಲ್ಲಿ ಜನಸಾಮಾನ್ಯರಾದ ನಾವು ಕಂಗೆಟ್ಟವರ ಕೈ ಬಲಪಡಿಸಬೇಕಾದ ಕರ್ತವ್ಯವೊಂದಿದೆಯಲ್ಲವೆ ? ಈ ಬಂಗಾರು ಲಕ್ಷ್ಮಣ ನೋಡಿ ಎಂಥಾ ಯಡವಟ್ಟು ಮಾಡಿಕೊಂಡರು ! ಅವರಿಗಿಷ್ಟು ಸಾಂತ್ವನ ಹೇಳಲೆಂದೇ ನಾನು ದಿಲ್ಲಿಗೆ ಹೋದದ್ದು. ದೊಣ್ಣೆಧಾರಿ ಸ್ವಯಂಸೇವಕರಂತೆ ಹಳ್ಳಕ್ಕೆ ಬಿದ್ದವನಿಗೆ ತಲೆಗೊಂದು ಕಲ್ಲು ಹಾಕುವುದು ಗೊಂದಲಪುರದವರ ಜಾಯಮಾನವಲ್ಲವಷ್ಟೆ !

ಅವರನ್ನು ಭೇಟಿ ಮಾಡಲು ಬಿಲ್‌ಕುಲ್ ಸಾಧ್ಯವಿಲ್ಲ ಎಂದು ಅಂಗರಕ್ಷಕ ಸಿಬ್ಬಂದಿಯ ಹಟ. ಬಂಗಾರುಗಾರುಗೆ ನೀಡಲೆಂದು ನಾನು ಊರಿನಿಂದ ಎರಡು ಮೂರು ಕೇಜಿ ಟೊಮ್ಯಾಟೋದ ಗಂಟು ಒಯ್ದಿದ್ದೆ. ನಿಜವಾಗಿ ಕೊಳೆತದ್ದೇನೂ ಅಲ್ಲ, ಗಂಟಿನಲ್ಲಿ ರಹಸ್ಯ ಕ್ಯಾಮರ ಅಡಗಿಸಿಟ್ಟಿರಬಹುದೆಂಬ ಕೆಟ್ಟ ಗುಮಾನಿ ಅವರದು ! ಕದ್ದುಹೋದ ನಂತರ ದಿಡ್ಡಿ ಬಾಗಿಲು ಹಾಕುವ ಜನ ಅವರು. ನಾನು ಬಿಡುತ್ತೇನೆಯೇ ? ಗೊಂದಲಪುರದ ಒರಟುತನ ತೋರಿಸಿದ ಮೇಲೆ ಅವಕಾಶ ಸಿಕ್ಕಿತು.

''ನಮಸ್ಕಾರಮಂಡಿ, ಬಂಗಾರುಗಾರು !''

''ಎವರದಿ ? ಒರೇ ಬೀರನ್ನ, ನೂವಾ ? ಎಪ್ಪುಡು ವಚ್ಚಾವಯ್ಯ, ಬಾಗುನ್ನಾವ ?'' ತೆಲುಗಿನ ಆತ್ಮೀಯ ಪರಿಚಯದ ಸ್ವಾಗತ.

''ನೇನೇಮೋ ಬಾಗಾನೆ ಉನ್ನಾನುಗಾನಿ...''

ಅವರ ಮುಖ ಸಾಕಷ್ಟು ಕಪ್ಪಿಟ್ಟಿತ್ತು. ಆದರೂ ಮುಖದಲ್ಲಿ ಸ್ವಲ್ಪ ನಗೆ ಮೂಡಿಸಲು ಪ್ರಯತ್ನಿಸಿದರು.

''ನಂಗೆ ನಂಬೋಕೆ ಆಗ್ತಾ ಇಲ್ಲ'' ಎಂದು ರಾಗ ಎಳೆದೆ.

''ಇದಂತಾ ಮನ ದುರದೃಷ್ಟಮು. ರಾಜಿನಾಮ ಪಾರೇಸನಯ್ಯ...'' ಅವರು ಕುರ್ಚಿಯಿಂದೆದ್ದು ನಿಂತೇ ಮಾತಾಡುತ್ತಿದ್ದರ ಕಾರಣ ಹೊಳೆಯಿತು.

''ಇಷ್ಟು ದೊಡ್ಡ ಹೆಮ್ಮೆಯ ಪಕ್ಷದ ಅಧ್ಯಕ್ಷರಾಗಿದ್ದು ಈ ಸಣ್ಣ ವಿಷಯ ನಿಮಗೆ ತಿಳಿಯದೇ ಹೋದದ್ದು ಹೇಗೇಂತ ? ನಮ್ಮ ತಾಲ್ಲೂಕಾಫೀಸಿನ ಗುಮಾಸ್ತ ಇಂಥ ವಿಷಯದಲ್ಲಿ ಎಷ್ಟು ಚಮತ್ಕಾರಿಕೆ ತೋರಿಸ್ತಾನೆ...ಮೇಜಿನ ಕೆಳಗೆ... ಅನ್ನೋ ಗಾದೇನೆ ಇದೆಯಲ್ಲ! ಹಣದ ಕಂತೆ ನೋಡಿದ ಕೂಡಲೇ ನಿಮಗೆ ಅದೆಲ್ಲ ಮರೆತೇಹೋಗಿರಬಹುದೆ ?'' ಎಂದೆ.

''ಇದೆಲ್ಲ ರಾಜಕೀಯ ಕುತಂತ್ರ ಬೀರನ್ನ...''

''ಇದನ್ನ ಯಾರು ಮಾಡಿಸಿದ್ರು ಅಂತ ನಾನು ಹೇಳಬಲ್ಲೆ! ನಮ್ಮ ತೃಣಮೂಲ ಮಮತಮ್ಮ ಇದ್ದಾರಲ್ಲ... ಸರಕಾರದಿಂದ ಹೊರನಡೆಯಲು ಅವರಿಗೆ ಒಂದು ಕಾರಣ ಬೇಕಾಗಿತ್ತು, ತೆಹಲ್ಕಾ ಮಾಡಿದ್ರು...'' ನನ್ನ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಲಿಲ್ಲ.

''ನಿಂಗೆ ಇದರ ಮರ್ಮ ಗೊತ್ತಾಗೊಲ್ಲ ಬೀರನ್ನ ! ನಾನು ದಲಿತ ಆದ್ದರಿಂದ ನನ್ನ ಹೆಸರಿಗೆ ಮಸಿ ಬಳಿಯೋಕೆ ನಮ್ಮ ವಿರೋಧಿಗಳು ನಡೆಸಿರೋ ಷಡ್ಯಂತ್ರ...''

''ಅಂಗಂತೀರಾ ? ಇದ್ರಲ್ಲಿ ನಿಮ್ ಪಾರ್ಟಿಯವರ್‍ದೇ ಕೈವಾಡ ಇರಬಹುದೇನೋ ? ಆದ್ರೂ, ನಾ ನಂಬೊಲ್ಲ ಬಿಡಿ. ಇಂಗಂತಾನಲ್ಲ ಈ ಬೀರಣ್ಣ ಅನ್ಕೋತೀರೇನೋ ! ನಿಮಗಿನ್ನೂ ನಯಗಾರಿಕೇನೇ ಗೊತ್ತಿಲ್ಲ. ಯಾರಾದ್ರೂ ಹಣದ ಕಂತೇನಾ ಮೇಜಿನ ಮೇಲಿಂದ ತಗೊಂಡು ಡ್ರಾಯರ್‍ಗೆ ತುಂಬಿಸ್ತಾರಾ ? ಕ್ಯಾಂಟೀನ್ ಇರ್‍ಲಿಲ್ವೆ ? ಪ್ಲಾಸ್ಟಿಕ್ ಬ್ಯಾಗ್ನಲ್ಲಾಕಿ ಅಲ್ಮಡಗಯ್ಯ ಅಂದಿದ್ರಾ ಗ್ತಿರ್‍ಲಿಲ್ಲವ ?''

ಬಂಗಾರು ಮುಖದಲ್ಲಿ ಪೆದ್ದು ಕಳೆ. ಎಂದಿನಂತೆ ಕಿರುನಗೆ ಅರಳಿಸುವ ಪ್ರಯತ್ನ . ಪಾಪ ಬಂಗಾರುಗಾರು !

''ಮತ್ತೇನು ಹೇಳು ಬೀರನ್ನ !''

''ಏನಿಲ್ಲ. ನಿಮ್ಮನ್ನ, ನಮ್ ಫೆರ್ನಾಂಡಿಸ್ ಸಾಯೇಬರ್‍ನ, ಅಂಗೆಯೇ ಜೈಟ್ಲಿ ಜಯಮ್ಮನ್ನ ನೋಡ್ಕಂಡು ಸಮಾಧಾನ ಹೇಳಾನಾಂತ ಬಂದೆ...''

''ಬೀರನ್ನ , ನಿಮ್ಮ ಗೊಂದಲಪುರ ಕೆರೇಲಿ ಕೆಂದಾವ್ರೆಗಳು ಅರಳ್ತಿದ್ವಲ್ಲ'' ಎಂದು ಬಂಗಾರುಗಾರು ಮಾತು ಬದಲಿಸಿದರು.







''ಅಯ್ಯೋ ಕೆರೆ ಬತ್ತಿ ಹತ್ತೊರ್ಷನೇ ಆಯ್ತು. ನಿಮ್ಮ ಕೆಂದಾವ್ರೆದೆಲ್ಲ ಕನಸು ಅಷ್ಟೆ. ಕೆರೆ ಇದ್ ಜಾಗ್ದಲ್ಲಿ ಈಗ ಈರಾಂಜಣೆ ಬಡಾವಣೆ ಅಲ್ವೆ ಇರೂದು ?''

ಬಂಗಾರುಗಾರು ಅವರ ಕೆಂದಾವರೆ ಕನಸನ್ನು ಕೆಡಿಸುವುದು ನನ್ನ ಉದ್ದೇಶವಾಗಿರಲಿಲ್ಲ ! ನಮ್ಮೂರ ಕೆರೆ ಇದ್ದ ಜಾಗದಲ್ಲಿ ಈಗ ಈರಾಂಜಣೆ ಬಡಾವಣೆ ಇರುವುದು ವಾಸ್ತವ.

ಟೊಮ್ಯಾಟೋ ಗಂಟನ್ನು ಅವರ ಮೇಜಿನ ಮೇಲಿರಿಸಿ, ನಮಸ್ಕಾರ ಹೇಳಿಬಂದೆ.

ಅವರ ರಾಜಿನಾಮೆಯನ್ನು ಹತ್ತು ನಿಮಿಷ ಮುಂದೂಡಿದ ಕೀರ್ತಿಯಾದರೂ ನನಗೆ ದಕ್ಕಿದರೆ ಸಾಕು. ಪಾಪ ಬಂಗಾರುಗಾರು !

ಎಂದು ನಿಮ್ಮ
ಬೀರಣ್ಣ ಗೊಂದಲಪುರ

# ಯೋಗ ಪ್ರವೇಶ-೨೦

ಜಿ. ರಾಮಕೃಷ್ಣ

**ಈ**ವರೆಗೆ ನಾವು ಶೀರ್ಷಾಸನವನ್ನು ಪ್ರಸ್ತಾಪಿಸದೆ ಬೇರೆ ಕೆಲವು ಆಸನಗಳನ್ನು ಚರ್ಚಿಸುತ್ತಾ ಬಂದಿರುವುದು ಕೆಲವರಿಗಾದರೂ ಆಶ್ಚರ್ಯ ತಂದಿರುತ್ತದೆ. ಯೋಗಾಸನವೆಂದರೆ ತಲೆಯ ಮೇಲೆ ನಿಲ್ಲುವುದು ಎಂಬ ಭಾವನೆ ವ್ಯಾಪಕವಾಗಿದೆಯಾದ್ದರಿಂದ ಸಾಮಾನ್ಯವಾಗಿ ಮೊದಲಿಗೆ ಅದನ್ನು ಪರಿಚಯ ಮಾಡಿಕೊಡುವುದು ಪದ್ಧತಿ. ಅಲ್ಲದೆ, ಆಸನ-ಪ್ರಾಣಾಯಾಮಗಳನ್ನು ನಿತ್ಯವಿಧಿಯಾಗಿ ಅಭ್ಯಾಸ ಮಾಡುವವರು ಸಾಮಾನ್ಯವಾಗಿ ಮೊದಲಿಗೆ ಶೀರ್ಷಾಸನ ಮಾಡುತ್ತಾರೆ. ಅದು ಹಾಗಿರಬೇಕಾದ್ದು ಯುಕ್ತವೆಂಬ ಅಭಿಪ್ರಾಯವಿದೆ. ಆದರೆ ಅಬದ್ಧವಾಗಿ ಅದನ್ನು ಮಾಡುವುದು ಅಚಾತುರ್ಯವಾದೀತೆಂಬ ಕಾರಣದಿಂದ ಮೊದಲಿಗೆ ಅದನ್ನು ಪ್ರಸ್ತಾಪಿಸಲಿಲ್ಲ. ಬೇರೆ ಆಸನಗಳನ್ನು ಯಥಾಕ್ರಮ ಅಭ್ಯಾಸ ಮಾಡಲು ಆರಂಭಿಸಿದ ಸ್ವಲ್ಪ ಕಾಲದ ಮೇಲೆ ಶೀರ್ಷಾಸನವನ್ನು ಮಾಡಹೊರಡುವುದು ಉಚಿತವೆನಿಸುತ್ತದೆ. ತಡವಾಗಿ



ಇದರ ಅಭ್ಯಾಸ ಆರಂಭವಾದರೂ ಮೊದಲ ಆಸನವನ್ನಾಗಿ ಶೀರ್ಷಾಸನವನ್ನು ಆಯ್ದುಕೊಳ್ಳುವುದು ಒಂದು ಸಂಪ್ರದಾಯವೇ ಆಗಿದೆ.

ನಮ್ಮೆಲ್ಲ ದೈಹಿಕ ಹಾಗೂ ಬೌದ್ಧಿಕ ಚಟುವಟಿಕೆಗಳಿಗೆ ಮಿದುಳು ಪ್ರಧಾನ ಮಾತೃಸ್ಥಾನ. ಶರೀರದ ಎಲ್ಲ ಭಾಗಗಳಿಗೂ ಹರಡಿರುವ ನರಮಂಡಲವು ಈ ಕೇಂದ್ರಸ್ಥಾನದೊಡನೆ ಸಂಪರ್ಕ ಹೊಂದಿದೆ. ವ್ಯಕ್ತಿಯು ತಲೆಯ ಮೇಲೆ ನಿಂತಾಗ ಮಿದುಳಿಗೆ ವಿಪುಲವಾಗಿ ಶುದ್ಧರಕ್ತದ ಹರಿವುಂಟಾಗುತ್ತದೆ. ಇದೇ ಶೀರ್ಷಾಸನದ ಅತಿ ಪ್ರಮುಖ ಕೊಡುಗೆ. ನಮ್ಮ ಪಂಚೇಂದ್ರಿಯಗಳ ಕಾರ್ಯಸಾಮರ್ಥ್ಯವು ಮಿದುಳಿನಿಂದ ನಿರ್ದೇಶಿತ ವಾಗುತ್ತದಾದ್ದರಿಂದ ಈ ಆಸನವು ಅದಕ್ಕೂ ಸಹಕಾರಿ ಯಾಗುತ್ತದೆ. ಎಂಡೋಕ್ರಿನ್ ಗ್ರಂಥಿಗಳ ಪೈಕಿ (ಇವನ್ನು ನಿರ್ನಾಳ ಗ್ರಂಥಿಗಳೆನ್ನುತ್ತಾರೆ) ಪಿಟ್ಯುಟರಿ ಮತ್ತು ಥೈರಾಯ್ಡ್‌ಗಳು ಹೃದಯದ ಮೇಲ್ಭಾಗದಲ್ಲಿವೆ. ಪೀನಿಯಲ್ ಮತ್ತು ಪ್ಯಾರಾಥೈರಾಯ್ಡ್ ಗ್ರಂಥಿಗಳೂ ಅಷ್ಟೆ. ನಾವು ತಲೆಕೆಳಗಾಗಿ ನಿಂತಾಗ ಈ ಗ್ರಂಥಿಗಳಿಗೆ ಉತ್ತಮ ರಕ್ತ ಸಂಚಾರ ಒದಗುತ್ತದೆ. (ಈ ಗ್ರಂಥಿಗಳು ವಿಶಿಷ್ಟವಾದ ದ್ರವಗಳನ್ನು ಸೂಸುತ್ತವೆ; ಆದರೆ ನಾಳಗಳಿಲ್ಲವಾದ್ದರಿಂದ ಅವು ಹೊರಗೆ ಹೋಗುವುದಿಲ್ಲ. ಗ್ರಂಥಿಗಳಿಗೆ ರಕ್ತ ಸಂಚಾರವಾದಾಗ ನೇರವಾಗಿ ಅವು ರಕ್ತವನ್ನು ಸೇರಿ ಕೊಳ್ಳುತ್ತವೆ). ಜೀರ್ಣಾಂಗಗಳಿಗೂ ಶೀರ್ಷಾಸನದಿಂದ ಉತ್ತಮ ಉಪಯೋಗವಿದೆ. ಪಿತ್ತಜನಕಾಂಗಕ್ಕೆ ಜೀರ್ಣಾಂಗ ಗಳಿಂದ ಹೋಗುವ ಮಲಿನರಕ್ತವು ಹೆಚ್ಚಾಗಿ ಹರಿದು ಅವಕ್ಕೆ ಶುದ್ಧರಕ್ತದ ಸರಬರಾಜು ಸಹ ಶೀರ್ಷಾಸನದಿಂದ ಹೆಚ್ಚುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ, ಶರೀರದ ಎಲ್ಲ ಅಂಗಗಳಿಗೂ ಪುಷ್ಟಿ ದೊರೆಯುವಂತೆ ಮಾಡುವ ಆಸನ ಇದು. ಆದ್ದರಿಂದ ಅನೇಕ ಅಸ್ವಸ್ಥತೆಗಳಿಗೆ ಈ ಆಸನವು ಪರಿಣಾಮಕಾರಿ ಉತ್ತರವಾಗುತ್ತದೆ.

ಈ ಆಸನವನ್ನು ಮಾಡಬಯಸುವವರು ಗೋಡೆಗೆ ಆತುನಿಲ್ಲುವ ಅಭ್ಯಾಸವನ್ನು ಬೆಳೆಸಿ ಕೊಳ್ಳದಿರುವುದು ಒಳ್ಳೆಯದು. ಅದಿಲ್ಲದೆಯೇ ಆರಾಮವಾಗಿ ತಲೆಯ ಮೇಲೆ ನಿಲ್ಲುವುದು ಚಮತ್ಕಾರದ ವಿಷಯವಲ್ಲ. ಒಂದು ಕ್ರಮವನ್ನು ಸಹನೆಯಿಂದ ಅನುಸರಿಸಿದರೆ ಇದು ಅನುಭವಕ್ಕೆ ಬರುತ್ತದೆ. ಒಂದೇ ದಿನದಲ್ಲಿ ಆಸನದ ಪೂರ್ಣಾವಸ್ಥೆಗಾಗಿ ಹಾತೊರೆಯದಿದ್ದರೆ ಶೀರ್ಷಾಸನ ವನ್ನು ಕರಗತ ಮಾಡಿಕೊಳ್ಳು ವುದು ಅಸಾಧ್ಯವಲ್ಲ. ಖೇಚರಿ ಮುದ್ರೆ ಅಭ್ಯಾಸ ಮಾಡುತ್ತಿದ್ದ ರೆಂದು ಹಿಂದೊಮ್ಮೆ ನಾವು ಪ್ರಸ್ತಾಪಿಸಿದ್ದಾಗ ಯೋಗಿ ರಾಮಾನಂದರ ಹೆಸರನ್ನು ಉಲ್ಲೇಖಿಸಿದ್ದುಂಟು. ಶೀರ್ಷಾಸನದಲ್ಲಿ ಅವರು ಒಂದು ಗಂಟೆಯ ಕಾಲ ಬೇಕಾದರೂ ಇರಬಲ್ಲವರಾಗಿದ್ದರು ಮತ್ತು ಗಡಿಯಾರದ ಸಹಾಯವಿಲ್ಲದೆಯೇ ನಾವು ಅಪೇಕ್ಷಿಸಿದಷ್ಟು ಕಾಲಕ್ಕೆ ಕ್ಲುಪ್ತವಾಗಿ ಆಸನವನ್ನು ಮುಗಿಸಲು ಸಮರ್ಥರಾಗಿದ್ದರು; ಅಲ್ಲದೆ, ಶೀರ್ಷಾಸನದ ಎಲ್ಲ ಬಗೆಗಳನ್ನೂ ಲೀಲಾಜಾಲ ವಾಗಿ ತಾಳಬಲ್ಲವರಾಗಿದ್ದರು. ಅಂದರೆ, ಅಭ್ಯಾಸದ ತೀಕ್ಷ್ಣತೆಯ ಮಟ್ಟವನ್ನು ನಾವು ಗ್ರಹಿಸಬೇಕೆಂದರ್ಥ.

ಹಠಪ್ರದೀಪಿಕೆಯು ಈ ಆಸನವನ್ನು ವಿಶದೀಕರಿ ಸಿರುವುದು ಹೀಗೆ :

**ಅಧಃ ಶಿರಶ್ಚೋರ್ಧ್ವಪಾದಃ ಕ್ಷಣಂ ಸ್ಯಾತ್ಪ್ರಥಮೇ ದಿನೇ ।**
**ಕ್ಷಣಾಚ್ಚ ಕಿಂಚಿದಧಿಕಮಭ್ಯಸೇಚ್ಚ ದಿನೇ ದಿನೇ ॥**
**(೩.೮೧-೮೨)**

ಹಾಗೆ ನೋಡಿದರೆ ಸ್ವಾತ್ಮಾರಾಮನು ಇಲ್ಲಿ ವ್ಯಾಖ್ಯಾನಿಸಿರುವುದು ವಿಪರೀತ ಕರಣೀ ಎಂಬ ಪ್ರಕ್ರಿಯೆಯನ್ನು; ಅಲ್ಲಿ ಶೀರ್ಷಾಸನವೆಂಬ ಹೆಸರು ಉಲ್ಲೇಖವಾಗಿಲ್ಲ. ಆದರೆ ಆ ಪ್ರಕ್ರಿಯೆಯು ಶೀರ್ಷಾಸನದ್ದೂ ಆಗುತ್ತದೆ. ಇಲ್ಲಿ ಕೊಟ್ಟಿರುವ ಚಿತ್ರಗಳನ್ನು ನೋಡಿದರೆ ಈ ಆಸನಕ್ಕೆ ಬೇಕಾದ ಸಿದ್ಧತೆ ಮತ್ತು ವಿಧಾನಗಳ ಪರಿಚಯವಾಗುತ್ತದೆ. ಎರಡೂ ಕೈಗಳ ಬೆರಳುಗಳನ್ನು ಜೋಡಿಸಿ ಮೊಣಕೈಗಳನ್ನು ಕೋಣದಾಕಾರದಲ್ಲಿರಿಸುವುದು ಮೊದಲ ಹಂತ. ಕೋಣದ ಶಿಖರಕ್ಕೆ ಬರುವ ಬೆರಳುಗಳ ಬಂಧನವು ತಲೆಯ ಹಿಂಭಾಗಕ್ಕೆ ಇಂಬನ್ನು ಕೊಡುವಂತಿ ರುತ್ತದೆ. ತಲೆಯ ಮೇಲೆ ನಿಲ್ಲುವಾಗ ಮುಂದಲೆಯ ಮೇಲೆ ನಿಲ್ಲುವಂತಾಗದಿರಬೇಕು. ಶೀರ್ಷಾಸನದ ಪೂರ್ಣಾವಸ್ಥೆ ಯಲ್ಲಿ ಬೆನ್ನುಹುರಿಯು ನೇರವಾಗಿರಬೇಕು. ಮುಂದಲೆಯ ಮೇಲೆ ನಿಂತರೆ ಇದು ಸಾಧ್ಯವಾಗದಿರುವ ಸಂಭವ ವಿರುತ್ತದೆ. ಮಧ್ಯದ ತಲೆಯು ನೆಲದ ಮೇಲೆ ಸ್ಥಿರವಾಗಿ ನಿಲ್ಲಲು ಬೆರಳುಗಳ ಕೊಂಡಿಯು ಸಹಾಯ ಮಾಡುತ್ತದೆ.

ಮಂಡಿಯೂರಿದ್ದುದನ್ನು ಬದಲಿಸಿ ಈಗ ಅವನ್ನು ಮೇಲಕ್ಕೆತ್ತಿ ಕಾಲ್ಬೆರಳುಗಳು ಮಾತ್ರವೇ ನೆಲದ ಮೇಲೆ ಊರಿರುವಂತೆ ಶರೀರವನ್ನು ಮೇಲಕ್ಕೆತ್ತಬೇಕು. ಈಗ ಬೆರಳುಗಳ ಕೊಂಡಿ, ಮೊಣಕೈಗಳವರೆಗಿನ ಭಾಗ, ಮಧ್ಯ ತಲೆ ಮತ್ತು ಕಾಲ್ಬೆರಳುಗಳು ಮಾತ್ರ ನೆಲದ ಮೇಲಿರುತ್ತವೆ. ಈ ಸ್ಥಿತಿಯಲ್ಲಿ ಸ್ಥಿರವಾಗಿ ಒಂದು ನಿಮಿಷವಿರುವ ಅಭ್ಯಾಸ ಶೀರ್ಷಾಸನಕ್ಕೆ ಸುಗಮ ಹಾದಿಯನ್ನು ರಚಿಸಿಕೊಡುತ್ತದೆ. ಆಮೇಲೆ ನಿಧಾನವಾಗಿ ಕಾಲುಗಳನ್ನು ಮುಂದಕ್ಕೆ ಸರಿಸಬೇಕು. ಹಾಗೆ ಮಾಡುವಾಗ ತಲೆಯ ಸ್ಥಾನ ಅಲುಗಬಾರದು ಮತ್ತು ಶರೀರವು ಪಕ್ಕಗಳಿಗೆ ವಾಲಬಾರದು. ತಲೆಯ ಕಡೆಗೆ ಎಷ್ಟು ಹತ್ತಿರ ಸಾಧ್ಯವೋ ಅಷ್ಟರವರೆಗೆ ಕಾಲುಗಳನ್ನು ಸರಿಸಿದರೆ ಆಗಲೇ ಶೀರ್ಷಾಸನದ ಛಾಯೆ ಕಾಣಸಿಗುತ್ತದೆ. ಈ ಸ್ಥಿತಿಯಲ್ಲೂ ಸ್ಥಿರವಾಗಿ ಒಂದು ನಿಮಿಷ ಉಳಿಯುವುದನ್ನು ಅಭ್ಯಸಿಸಿದ ನಂತರವೇ ಮುಂದಿನ ಹಂತಕ್ಕೆ ತೆರಳುವ ಯತ್ನ ಮಾಡಬಹುದು. ತಲೆಯ ಆಸರೆ ಪಡೆದ ಶರೀರವು ಸಾಕಷ್ಟು ಹಿಂದಕ್ಕೆ ತಳ್ಳಲ್ಪಟ್ಟಂತಿರುವಾಗ ಕಾಲ್ಬೆರಳುಗಳನ್ನು ನಿಧಾನವಾಗಿ ನೆಲದಿಂದ ಮೇಲೆತ್ತಿದರೆ ಬಿದ್ದುಹೋಗುವ ಸಂಭವವೇನೂ ಇರುವುದಿಲ್ಲ. ಶರೀರದ ಒತ್ತಡವೆಲ್ಲಾ ಮಧ್ಯ ತಲೆ, ಮೊಣಕೈಗಳವರೆಗಿನ ಭಾಗ ಹಾಗೂ ಬೆರಳುಗಳ ಕೊಂಡಿಯ ಮೇಲಿರುತ್ತದೆ. ಯಾವುದೇ ಹಂತದಲ್ಲೂ ಶೀಘ್ರಚಲನೆ ಇರಬಾರದು; ಹಾಗೇನಾದರೂ ಆದರೆ ಶರೀರದ ಆಯ ತಪ್ಪಿಬಿಡುತ್ತದೆ. ಮಂಡಿಗಳು ಮಡಿಸಿರು





ವಂತೆಯೇ ಇದ್ದು ಅವನ್ನು ನಿಧಾನವಾಗಿ ಎದೆಯ ಕಡೆಗೆ ಆನಿಸಿಕೊಳ್ಳುವುದು ಮುಂದಿನ ಹಂತ. ಈ ಸ್ಥಿತಿಯಲ್ಲೂ ಸ್ಥಿರವಾಗಿ ಒಂದು ನಿಮಿಷ ಇರುವುದನ್ನು ಸಾಧಿಸಿಕೊಳ್ಳದೆ ಮುಂದಿನ ಹಂತಕ್ಕೆ ಧಾವಿಸಬಾರದು. ಒಂದೊಂದು ಹಂತವನ್ನೂ ಮೂರು-ನಾಲ್ಕು ದಿನಗಳ ಕಾಲ ಅಭ್ಯಾಸ ಮಾಡಿ ಆಮೇಲೆ ಮುಂದಿನ ಹಂತ ಕ್ರಮಿಸಲು ಯತ್ನಿಸುವುದು ಕ್ಷೇಮ. ಮಾಂಸಖಂಡಗಳು ಪ್ರತಿಯೊಂದು ಹಂತಕ್ಕೂ ಒಗ್ಗಿದನಂತರ ಮುಂದುವರಿಯಲು ಸುಲಭವೆನಿಸುತ್ತದೆ. ಈವರೆಗಿನ ಅಭ್ಯಾಸದಲ್ಲಿ ಯಶಸ್ಸು ಗಳಿಸಿದರೆ ಇನ್ನು ಮುಂದಿನ ಭಾಗ ಸರಳವಾಗಿ ಸಿದ್ಧಿಸುತ್ತದೆ. ಈಗ ಉಳಿದಿರುವುದಿಷ್ಟೇ : ಮಂಡಿಗಳು ಮಡಿಸಿಯೇ ಇರಲಿ, ಆದರೆ ತೊಡೆಗಳನ್ನು ಎದೆಗೆ ಸಮನಾಗಿರುವಂತೆ (ಅಂದರೆ, ಭೂಮಿಗೆ ಲಂಬವಾಗಿರುವಂತೆ) ಮೇಲಕ್ಕೇರಿಸಿ. ಈ ಸ್ಥಿತಿಯಲ್ಲಿಯೂ ಸ್ಥಿರವಾಗಿ ಉಳಿಯುವುದನ್ನು ಅಭ್ಯಾಸ ಮಾಡಿದ ಮೇಲೆ ಮಡಿಸಿದ ಮಂಡಿಗಳನ್ನು ತೆರವು ಮಾಡಿ ಪಾದಗಳು ಮೇಲಕ್ಕೇರುವಂತೆ ಮಾಡಿ. ಬಹುಮಟ್ಟಿಗೆ ಶರೀರವು ಸರಳರೇಖೆಯ ರೂಪವನ್ನು ತಾಳಬೇಕು; ಕಾಲುಗಳ ಮೇಲೆ ನಿಂತಿದ್ದಾಗ ಇರುವಂತೆಯೇ, ಎನ್ನಬಹುದು. ಶರೀರವು ವಕ್ರವಾದರೆ ಬೆನ್ನುಹುರಿಯ ಮೇಲೆ ಅನಗತ್ಯವಾದ ಒತ್ತಡ ಹೇರಿಕೊಂಡು ಆಯಾಸವಾಗುತ್ತದೆ ಮತ್ತು ಬೆನ್ನುಹುರಿಗೆ ಬಾಧಕವಾಗುತ್ತದೆ. ಇದನ್ನು ಸರ್ವಥಾ ಆಗಗೊಡಬಾರದೆಂಬುದನ್ನು ಗಮನಿಸಿ. ಬೆನ್ನಿನ ಹಾಗೂ ಪೃಷ್ಠದ ಮಾಂಸಖಂಡಗಳನ್ನು ಸಂಕುಚಿಸುವ ಕ್ರಿಯೆ ಶೀರ್ಷಾಸನದ ಈ ಹಂತದಲ್ಲಿ ತಾನೇ ತಾನಾಗಿ ಉಂಟಾಗುತ್ತದೆ. ಶರೀರದ ಭಾರವು ಎಲ್ಲೂ ಕೇಂದ್ರೀಕರಿಸದೆ ಶರೀರದ ವಿವಿಧ ಭಾಗಗಳಿಗೆ ಚೆನ್ನಾಗಿ ಹರಡಿಕೊಂಡಿರುತ್ತದೆ.

ಮೊದಲಿಗೆ ಕಾಲುಗಳನ್ನು ಎತ್ತಿ ನಿಲ್ಲಿಸುವುದನ್ನು ಕಲಿತರೆ ಶೀರ್ಷಾಸನವು ಸುಗಮವಾಗುತ್ತದೆಂಬ ಅನಿಸಿಕೆ ಆಗಾಗ್ಗೆ ಪ್ರಚಾರಕ್ಕೆ ಬರುತ್ತದೆ. ಯಾರದೋ ಸಹಾಯ ಪಡೆದು ತಲೆಯ ಮೇಲೆ ನಿಂತರೆ ಕ್ರಮೇಣ ಸಮತೋಲನ ಸಹಜವಾಗಿ ಉದ್ಭವಿಸುತ್ತದೆಂಬ ಮಿಥ್ಯಾಕಲ್ಪನೆಯೂ ಇದೆ. ಗೋಡೆಗೊರಗಿ ಕಾಲುಗಳನ್ನು ರಭಸದಿಂದ ಮೇಲಕ್ಕೆತ್ತುವ ಪ್ರಯತ್ನ ಮಾಡಿದವರೂ ಇದ್ದಾರೆ. ಇವಾವುವೂ ಕುಸಿಯುವಿಕೆಯನ್ನು ತಡೆಗಟ್ಟುವುದಿಲ್ಲ. ದೇಶದ ಪ್ರಗತಿಯ ಸಂದರ್ಭದಲ್ಲಿ ಇದ್ದಂತೆ ಇಲ್ಲಿಯೂ ಪೂರ್ಣ ಸ್ವಾವಲಂಬನೆಯೇ ಯಶಸ್ಸಿನ ಗುಟ್ಟಾಗಿರುತ್ತದೆ. ಮಾನಸಿಕ ಸ್ಥೈರ್ಯವೂ ಮೇಲೆ ವಿವರಿಸಿದ ಕ್ರಮದಿಂದ ಲಭಿಸುತ್ತದೆಯೇ ವಿನಾ ಬೇರೆ ಕೃತಕ ಆಲಂಬನಗಳಿಂದ ದೊರೆಯುವುದಿಲ್ಲ. ಶೀರ್ಷಾಸನದಲ್ಲಿ ಕೆಲವೇಳೆ ಕಾಲುಗಳು ಹಿಂದಕ್ಕೆ ಸರಿಯುವ ಸಾಧ್ಯತೆ ಇರುತ್ತದೆ. ಅದನ್ನು ಪರಿವೀಕ್ಷಿಸಿ ಶರೀರವು ಸರಳರೇಖೆಯ ರೂಪದಲ್ಲಿರುವಂತೆ ಅಭ್ಯಾಸ ಮಾಡುವುದು ಅಗತ್ಯ. ಸಾಮಾನ್ಯವಾಗಿ ಈ ಆಸನವನ್ನು ಐದಾರು ನಿಮಿಷಗಳವರೆಗಾದರೂ ಇರಿಸಿಕೊಳ್ಳುವುದು ಆರೋಗ್ಯಕರವೆನ್ನುತ್ತಾರೆ. ಆರಂಭಕ್ಕೆ ಅರ್ಧ ನಿಮಿಷವಾದರೂ ಸಾಕು; ಕ್ರಮೇಣ ಅದನ್ನು ಐದಾರು ನಿಮಿಷಗಳಿಗೆ ವರ್ಧಿಸಬಹುದು. ಶರೀರವು ಸೊಟ್ಟಾಗದೆ ಸ್ಥಿರವಾಗಿ ತಲೆಯ ಮೇಲೆ ನಿಲ್ಲುವುದನ್ನು ಕರಗತ ಮಾಡಿಕೊಂಡ ನಂತರ ಇಪ್ಪತ್ತು ನಿಮಿಷಗಳ ಕಾಲ ಈ ಆಸನದಲ್ಲಿ ಉಳಿಯಲು ಅಡ್ಡಿಯಿಲ್ಲ. ಅಂದರೆ, ಕೇವಲ ಶೀರ್ಷಾಸನವನ್ನು ಮಾಡುವವರಿಗಷ್ಟೇ ಇದು ಅನ್ವಯಿಸುತ್ತದೆ. ಆ ಆಸನದ ನಂತರ ಈವರೆಗೆ ವಿವರಿಸಲ್ಪಟ್ಟ ಬೇರೆ ಆಸನಗಳನ್ನೂ ಮಾಡಬಯಸುವವರು ಶೀರ್ಷಾಸನಕ್ಕೆ ಐದಾರು ನಿಮಿಷಗಳನ್ನು ತೊಡಗಿಸಿದರೆ ಸಾಕಾದೀತು. ಹೆಚ್ಚೆಂದರೆ ಹತ್ತು ನಿಮಿಷ ಎನ್ನಬಹುದು.

ಕಿವಿ ಸೋರುವಂತಿದ್ದಾಗ ಅಥವಾ ನೋಯುತ್ತಿದ್ದಾಗ ಶೀರ್ಷಾಸನವು ನಿಷಿದ್ಧ. ಕಣ್ಣುಗಳ ಸೂಕ್ಷ್ಮನಾಳಗಳು ಕ್ಷೀಣಿಸಿರುವಾಗ ಕೂಡ ಇದು ನಿಷಿದ್ಧ. ಅವುಗಳ ವರ್ಧನೆಯ ನಂತರ ಶೀರ್ಷಾಸನ ಮಾಡುವುದು ನಿಷಿದ್ಧವಲ್ಲ. ರಕ್ತದ ಒತ್ತಡ ಹೆಚ್ಚಿರುವಾಗಲೂ ಇದು ನಿಷಿದ್ಧ. ಹೃದಯದ ಸಮಸ್ಯೆ ಇರುವವರು ಹಾಗೂ ಮಲಬದ್ಧತೆಯಿಂದ ನರಳುವವರು ಈ ಆಸನವನ್ನು ಯತ್ನಿಸಹೋಗಬಾರದು. ಕಡೆಯದಾಗಿ, ಬೇರೆ ವ್ಯಾಯಾಮದಿಂದ ಆಯಾಸವಾಗಿರುವಾಗ ಈ ಆಸನ ಸಂಪೂರ್ಣವಾಗಿ ನಿಷಿದ್ಧ. ಆಯಾಸವು ಪೂರ್ತಿಯಾಗಿ ಪರಿಹಾರವಾದ ಮೇಲೆ ಶೀರ್ಷಾಸನ ಮಾಡಲು ಅಡ್ಡಿಯಿಲ್ಲ.





ಶೀರ್ಷಾಸನದಲ್ಲಿದ್ದುಕೊಂಡೇ ಪದ್ಮಾಸನ ಹಾಕುವುದು ಮತ್ತು ಮಡಿಸಿದ ಕಾಲುಗಳನ್ನು ಎದೆಯವರೆಗೆ ಬಗ್ಗಿಸುವುದು ಮುಂತಾದ ಬೇರೆ ಭಂಗಿಗಳು ಶೀರ್ಷಾಸನದ ಭಾಗವಾಗಿ ಪರಿಗಣನೆಗೆ ಬಂದಿವೆ. ಸಾಮಾನ್ಯ ಅಭ್ಯಾಸಿಯು ಅವನ್ನೆಲ್ಲಾ ಮಾಡಹೊರಡುವ ಅಗತ್ಯವಿಲ್ಲ; ಬೇಕೆನಿಸಿದರೆ ಅವನ್ನು ಯತ್ನಿಸುವುದು ಬಾಧಕವೂ ಅಲ್ಲ.

ಶೀರ್ಷಾಸನದಿಂದ ಮರಳುವಾಗಲೂ ಕ್ರಿಯೆಗಳೆಲ್ಲಾ ನಿಧಾನವಾಗಿಯೇ ಇರಬೇಕು. ಮೊದಲು ಮಂಡಿಗಳನ್ನು ಮಡಿಸಿ ಆಮೇಲೆ ತೊಡೆಗಳನ್ನು ಬಗ್ಗಿಸುವುದು, ನಂತರ ನೆಲದ ಆಸರೆ ಪಡೆಯುವುದು, ಇವೆಲ್ಲಾ ಶೀರ್ಷಾಸನ ಮಾಡಿದಾಗಿನ ಕ್ರಿಯೆಗಳ ಪುನರಾವರ್ತನೆಯೇ ಆಗಿರುತ್ತವೆ; ಆದರೆ ವಿರುದ್ಧ ದಿಕ್ಕಿನಲ್ಲಿ. ಯಥಾಸ್ಥಿತಿಗೆ ಬರುವ ಮುನ್ನ ತಲೆಯನ್ನು ತಕ್ಷಣವೇ ಮೇಲೆತ್ತದಿರುವುದು ಒಳ್ಳೆಯದು. ಕೆಲವರಿಗೆ ಹಾಗೆ ಮಾಡಿದಾಗ ತಲೆ ತಿರುಗುವ ಅನುಭವ ಉಂಟಾಗುತ್ತದೆ. ಕೆಲಕಾಲ ಉಳಿದು ನಿಧಾನವಾಗಿ ತಲೆ ಎತ್ತಿದರೆ ಇದು ನಿವಾರಣೆಯಾದಂತಾಗುತ್ತದೆ.

□□□

RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14



Printed by P. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... P. B. 5159, Bangalore-560 001. Chief Editor : Dr. G. Ramakrishna